# ಮಹಿಳಾ ಅಧ್ಯಯನ

ಸಂಪಾದಕರು

ಡಾ.ಎಚ್.ಎಸ್. ಶ್ರೀಮತಿ




ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**MAHILA ADHYAYANA** (Half Yearly) Vol. 4 - 2 (January 2003)

Edited by
**Dr. H.S. Sreemathi**

Published by
**Publication Division,** Prasaranga,
Kannada University, Hampi
Vidyaranya - 583 276

Pages : viii + 150
First Impression : 2003
www.kavihampi.org

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೪, ಸಂಚಿಕೆ ೨
(ಜನವರಿ ೨೦೦೩)



| | | |
|---|---|---|
| **ಪ್ರಧಾನ ಸಂಪಾದಕರು** | : | ಡಾ. ಎಚ್.ಜೆ. ಲಕ್ಕಪ್ಪಗೌಡ |
| **ಸಹಾಯಕ ಸಂಪಾದಕರು** | : | ಡಾ.ಎಂ. ಉಷಾ |
| ಬಿಡಿ ಪ್ರತಿ ಬೆಲೆ | : | ರೂ. ೨೫.೦೦ |
| ವಾರ್ಷಿಕ ಚಂದಾ | : | ರೂ. ೫೦.೦೦ |
| ಐದು ವರ್ಷದ ಚಂದಾ | : | ರೂ. ೨೦೦.೦೦ |
| ಮುಖಪುಟ | : | ಕೆ.ಕೆ. ಮಕಾಳಿ |

**ಪ್ರಕಾಶನ**
ಪ್ರಕಟಣ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



**ಅಕ್ಷರ ಸಂಯೋಜನೆ**
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಮುದ್ರಣ**
ರವಿ ಗ್ರಾಫಿಕ್ಸ್, ಬೆಂಗಳೂರು

# ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ

ಇಪ್ಪತ್ತನೆಯ ಶತಮಾನ ವಿವಿಧ ಸಾಂದರ್ಭಿಕ ಕಾರಣಗಳಿಂದಾಗಿ ದಮನಿತ ಸಮುದಾಯಗಳಿಗೆ ದನಿಯನ್ನು ಕೊಟ್ಟಿತು. ಹಾಗೆ ಸ್ತ್ರೀ ಸಮುದಾಯ ಕೂಡ ತನ್ನ ಅಸ್ತಿತ್ವದ ಶೋಧಕ್ಕೆ ತೊಡಗಿದೆ. ಆರಂಭಕ್ಕೆ ಈ ಸ್ತ್ರೀ ಸಮುದಾಯವು ಸಮಾಜ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ಸ್ತ್ರೀಪುರುಷ ಅಸಮಾನತೆಯ ಸಮಸ್ಯೆಗಳು ಹಾಗೂ ಆ ಸಂಬಂಧದ ಪ್ರಕರಣಗಳನ್ನೇ ನೇರವಾಗಿ ಕೈಗೆತ್ತಿಕೊಂಡು ಚಳುವಳಿಗಳಲ್ಲಿ ತೊಡಗಿತು. ತೀರಾ ದುರ್ಬಲವಾಗಿ ಎಂಬಂತೆ, ಬೇಡಿಕೆ ಮತ್ತು ಅಹವಾಲುಗಳ ರೀತಿಯಲ್ಲಿ ಆರಂಭವಾದ ಈ ಚಳುವಳಿಗಳು ಇಂದು ಹಕ್ಕೊತ್ತಾಯ ಮಾಡುವಷ್ಟು ಪ್ರಬಲವಾಗಿ ಬೆಳೆದಿವೆ. ಈ ಸಾಮುದಾಯಿಕ ಹೋರಾಟದ ಪ್ರತಿಫಲವಾಗಿ ಪ್ರಭುತ್ವವು ಸ್ತ್ರೀ ಪುರುಷ ಸಮಾನತೆಯನ್ನು ತಾತ್ತ್ವಿಕವಾಗಿಯಾದರೂ ಒಪ್ಪಿ ಅದನ್ನು ಬಹಿರಂಗವಾಗಿ ಘೋಷಿಸಲೇಬೇಕಾದ ಒತ್ತಡಕ್ಕೆ ಬಿದ್ದಿದೆ. ಸಂವಿಧಾನ, ಕಾನೂನು, ಕಾಯಿದೆಗಳಲ್ಲಿ ಸ್ತ್ರೀಪರವಾದ ಅಂಶಗಳನ್ನು ಜೋಡಿಸುವುದು, ತನ್ನ ಯೋಜನೆ ಹಾಗೂ ಕಾರ್ಯಕ್ರಮಗಳಲ್ಲಿ ಗಣನೀಯ ಭಾಗವನ್ನು ಸ್ತ್ರೀ ಸಮುದಾಯಕ್ಕಾಗಿ ಮೀಸಲಿಡುವುದು ಪ್ರಭುತ್ವಕ್ಕೆ ಅನಿವಾರ್ಯವೇ ಆಗಿದೆ. ಇಷ್ಟರಿಂದಲೇ ಮಹಿಳೆಯರ ಸ್ಥಿತಿಗತಿಗಳಲ್ಲೇನೂ ತೀವ್ರ ಬದಲಾವಣೆಗಳಾಗಿ ಬಿಡುತ್ತವೆ ಎಂದೇನೂ ಅಲ್ಲ. ಆದರೆ ಹೋರಾಟದ ಮುಂದಿನ ಗತಿಗೆ ಇದು ಸಾಕಷ್ಟು ಆಧಾರವನ್ನೊದಗಿಸುವುದಂತೂ ಖಚಿತ. ಇಂಥಾ ಚಳುವಳಿಗಳು ಸದ್ಯಕ್ಕಂತೂ ಅಂದಂದಿನ ಕಗ್ಗಂಟುಗಳನ್ನು ಇಷ್ಟಿಷ್ಟಕ್ಕೆ ಬಿಡಿಸುತ್ತಾ ಮಹಿಳೆಯ ಹಾದಿಯನ್ನು ಸುಗಮಗೊಳಿಸುವಲ್ಲಿ ದಣಿಯುತ್ತಿವೆ. ಇಷ್ಟರಿಂದ ತೀರಾ ಮೂಲಭೂತವಾದ ಸಮಸ್ಯೆಗಳೇನೂ ಪರಿಹಾರಗೊಳ್ಳುವುದಿಲ್ಲ. ಏಕೆಂದರೆ, ಪ್ರಭುತ್ವವನ್ನು ಒಳಗೊಂಡಂತೆ ಎಲ್ಲ ಸಾರ್ವಜನಿಕ ವಲಯಗಳಲ್ಲಿ ಸ್ತ್ರೀ ಸಮುದಾಯವು ಎದುರಿಸುತ್ತಿರುವ ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸಿ ಕೊಳ್ಳುವುದು ಸಾಮುದಾಯಿಕ ಹೋರಾಟಕ್ಕೆ ತೀರಾ ಕಷ್ಟವಲ್ಲ. ಆದರೆ, ಇಡೀ ಸಮಾಜದ ಪಿತೃಪ್ರಧಾನ ವ್ಯವಸ್ಥೆಯ ಪ್ರವೃತ್ತಿಗಳಲ್ಲಿಯೇ ಪರಿವರ್ತನೆಗಳನ್ನು ತರುವುದು ಅಷ್ಟು ಸುಲಭದ ಕೆಲಸವಲ್ಲ. ಇದಕ್ಕಾಗಿ ಈ ಸಮಾಜದ ಎಲ್ಲ ಸದಸ್ಯರ ಬುದ್ಧಿ ಮತ್ತು ಮನಸ್ಸುಗಳೊಂದಿಗೆ ಸಂವಾದವನ್ನು ಆರಂಭಿಸುವ ಅಗತ್ಯವಿದೆ. ಅವರೊಳಗಿನ ಮಾನವೀಯತೆಯನ್ನು ಜಾಗ್ರತಗೊಳಿಸಬೇಕಿದೆ. ಸ್ತ್ರೀ ಪುರುಷ ಅಸಮಾನತೆಯು ಇಡೀ ಮನುಕುಲಕ್ಕೇ ಹಾನಿಕರವಾದದ್ದು ಎಂದು ಈ ಸಮಾಜವನ್ನು ಒಪ್ಪಿಸಬೇಕಿದೆ.

ಇದು ಚಳುವಳಿಗಳ ಕ್ರಿಯಾಶೀಲತೆಯೊಂದಿಗೆ, ಬಹು ಸೂಕ್ಷ್ಮ ಅಧ್ಯಯನಗಳಿಂದ ದೊರಕಿಸಿಕೊಂಡ ವಿವೇಕ, ವಿವೇಚನೆಗಳನ್ನು ಕೈಗೂಡಿಸಿ ನಡೆಯಬೇಕಾದ ಕೆಲಸ. ನಮ್ಮ ಸಂದರ್ಭವನ್ನು ಭೂತ ಭವಿಷ್ಯಗಳೊಂದಿಗೆ ಬೆಸೆದು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವನ್ನು ಈ ತಿಳುವಳಿಕೆ ಒದಗಿಸಿಕೊಡುವಂತಿದ್ದಾಗ ನಮ್ಮ ಹೋರಾಟಗಳು ಸಮಗ್ರವಾದ ಗುಣಾತ್ಮಕ ಪರಿಣಾಮಗಳನ್ನು ನಿರೀಕ್ಷಿಸಬಹುದು. ಈ ಅಧ್ಯಯನಗಳು ವೈಯಕ್ತಿಕ ನೆಲೆಯಲ್ಲಿಯೂ ನಡೆಯ ಬಹುದು ಅಥವಾ ಸಾಂಸ್ಥಿಕ ನೆಲೆಗಳಲ್ಲಿಯೂ ನಡೆಯಬಹುದು. ಎಲ್ಲ ಕೆಲಸಗಳಲ್ಲಿಯಂತೆ ಆರಂಭದ ಹಂತಗಳಲ್ಲಿ ಅನೇಕ ಲೋಪದೋಷಗಳು ಇಲ್ಲಿಯೂ ಕಾಣಿಸಿಕೊಳ್ಳಬಹುದು. ಆದರೆ, ಕ್ರಮೇಣವಾಗಿಯಾದರೂ ಈ ಅಧ್ಯಯನಗಳಲ್ಲಿ ತೊಡಗಿದವರು, ಇತರ ಶೈಕ್ಷಣಿಕ ಶಿಸ್ತುಗಳಂತೆ ಮಹಿಳಾ ಅಧ್ಯಯನವು ಕೇವಲ ಬೌದ್ಧಿಕ ಚಟುವಟಿಕೆಯಲ್ಲ ಎಂಬುದನ್ನೂ, ತಾವು ಅಲ್ಲಿನ ವಿದ್ವಾಂಸರಂತೆ ಜನಸಾಮಾನ್ಯರನ್ನು ಮೀರಿ ನಿಂತ ಬುದ್ಧಿಜೀವಿಗಳಲ್ಲ ಎಂಬು ದನ್ನೂ ಗ್ರಹಿಸುವುದು ತುಂಬಾ ಅಗತ್ಯ. ಹಾಗಾದಾಗ ದಿನದಿನದ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಡುತ್ತಿರುವ ಚಳುವಳಿಗೆ ಹೊಸದೊಂದು ಆಯಾಮವನ್ನು ಕಲ್ಪಿಸುವ ಚೈತನ್ಯ ಈ ಅಧ್ಯಯನಗಳಿಗೆ ಕೂಡಿಕೊಳ್ಳುತ್ತದೆ.

ಇಂಥದೊಂದು ಪ್ರಾಮಾಣಿಕ ಪ್ರಯತ್ನದಲ್ಲಿ ನಾವು ಆರಂಭದಿಂದಲೂ ತೊಡಗಿಕೊಂಡಿ ದ್ದೇವೆ. ಸಮಕಾಲೀನ ವಿಷಯಗಳನ್ನು ಕುರಿತ ಚರ್ಚೆಗಳನ್ನು ನಮ್ಮ ಪತ್ರಿಕೆ ನಡೆಸುತ್ತಲೇ ಇದೆ. ಈ ಬಾರಿಯ ಚರ್ಚೆಯ ವಿಷಯ ಕನ್ನಡ ಮಹಿಳಾ ಸಾಹಿತ್ಯವನ್ನು ಕುರಿತದ್ದು. ಇದನ್ನು ನೆಪವಾಗಿಟ್ಟುಕೊಂಡು ಮಹಿಳೆಯ ಮಹತ್ವಾಕಾಂಕ್ಷೆ ಹಾಗೂ ಸಾಧನೆಗಳಿಗೆ ಇರುವ ಸಾಮಾಜಿಕ ಅಡೆ-ತಡೆಗಳನ್ನು ಗುರುತಿಸುವುದು ಇಲ್ಲಿನ ಉದ್ದೇಶ. ಇಂಥಾ ಪ್ರಶ್ನೆಗಳನ್ನು ಉತ್ತರಿಸಿಕೊಳ್ಳುವುದು ಚಳುವಳಿಗಳಿಗೂ ತೀರಾ ಅಗತ್ಯ. ಇಲ್ಲವಾದಲ್ಲಿ ನಮ್ಮ ಅಗತ್ಯಗಳನ್ನು ಬೇಡಿಕೆ ಮತ್ತು ಅಹವಾಲುಗಳಾಗಿಯೇ ಪ್ರಸ್ತಾಪಿಸಬೇಕಾದ ಅನಿವಾರ್ಯದಿಂದ ನಾವೆಂದೂ ಹೊರಗೆ ಬರಲಾರೆವು. ನಮ್ಮ ಅಗತ್ಯಗಳನ್ನು ಹಕ್ಕೊತ್ತಾಯಗಳಾಗಿ ಮಂಡಿಸುವ ನಮ್ಮ ಉದ್ದೇಶವು ನೆರವೇರಬೇಕಾದರೆ ನಮಗೆ ಸಮಸ್ಯೆಯ ವಿವಿಧ ಆಯಾಮಗಳ ಸಂಪೂರ್ಣ ತಿಳುವಳಿಕೆ ಬೇಕೇ ಬೇಕು. ಅಧ್ಯಯನಗಳಿಂದ ದೊರಕುವ ತಿಳುವಳಿಕೆಗಳು ಕ್ರಿಯಾಶೀಲ ಚಳುವಳಿಗಳಿಗೆ ಬಲವಾದ ಆಧಾರವನ್ನೊದಗಿಸಬಲ್ಲವು. ಇಂಥಾ ಚಳುವಳಿಗಳು ಅಧ್ಯಯನಗಳಿಗೆ ಖಚಿತವಾದ ಗುರಿ ಮತ್ತು ನಿರ್ದೇಶನಗಳನ್ನು ಕಲ್ಪಿಸುತ್ತವೆ.

ನಿರ್ದಿಷ್ಟವಾದ ಗುರಿ, ಉದ್ದೇಶ ಹಾಗೂ ಚೌಕಟ್ಟುಗಳನ್ನು ಕಲ್ಪಿಸಿಕೊಂಡು ಒಂದು ಪತ್ರಿಕೆ ಯನ್ನು ನಡೆಸುವುದು ಅದೆಂಥಾ ಕಷ್ಟದ ಕೆಲಸ ಎಂಬ ಅನುಭವದಲ್ಲೇ ನಮ್ಮ ಪತ್ರಿಕೆ ಸಾಗುತ್ತಾ ಬಂದಿದೆ. ಅದರಲ್ಲೂ ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ವಿದ್ವಾಂಸರ ಸಂಖ್ಯೆ ಅಷ್ಟೇನೂ ದೊಡ್ಡದಲ್ಲ. ಇರುವಷ್ಟು ಜನರೇನೋ ನಮಗೆ ಸಾಕಷ್ಟು ಒತ್ತಾಸೆಯನ್ನೇ ನೀಡುತ್ತಿದ್ದರೂ, ಸಮಯ ಮೀರಿ ಹೋಗುವುದು ನಡೆಯುತ್ತಲೇ ಇದೆ. ಇಷ್ಟೆಲ್ಲಾ ಸಮಸ್ಯೆಗಳ ನಡುವೆ ಮಹಿಳಾ ಅಧ್ಯಯನ ಪತ್ರಿಕೆ ನಡೆಯುತ್ತಿದೆ. ಈ ಸಾಧನೆಯಲ್ಲಿ ನಾನು ಬಹುಮುಖ್ಯವಾಗಿ

ಸ್ಮರಿಸಿಕೊಳ್ಳಬೇಕಾದವರಲ್ಲಿ ನಮ್ಮ ಮಾನ್ಯ ಕುಲಪತಿಗಳು ಮುಖ್ಯರು. ನಮ್ಮ ಪತ್ರಿಕೆಗೆ ಅವರು ನೀಡುತ್ತಿರುವ ಬೆಂಬಲ ಮತ್ತು ಒತ್ತಾಸೆಗಳಿಗೆ ನಾನು ತುಂಬಾ ಕೃತಜ್ಞಳಾಗಿದ್ದೇನೆ. ಪತ್ರಿಕೆಗೆ ಲೇಖನಗಳನ್ನು ಬರೆದುಕೊಟ್ಟು ಸಹಕರಿಸಿದ ಲೇಖಕ, ಲೇಖಕಿಯರನ್ನು ವಿಶೇಷವಾಗಿ ಸ್ಮರಿಸುತ್ತೇನೆ. ಸಹೋದ್ಯೋಗಿ ಗೆಳತಿ ಡಾ.ಎಂ. ಉಷಾ ಅವರು ಈ ಬಾರಿಯ ಸಂಚಿಕೆಯ ಕೆಲಸದುದ್ದಕ್ಕೂ ನನ್ನೊಂದಿಗೆ ದುಡಿದಿದ್ದಾರೆ. ಅವರ ಸ್ನೇಹ ಸಹಕಾರಗಳಿಗೆ ನಾನು ಆಭಾರಿ.

ಎಂದಿನಂತೆ ನಮ್ಮ ಪ್ರಸಾರಾಂಗ ಈ ಪತ್ರಿಕೆಯನ್ನು ಹೊರತರುವಲ್ಲಿ ವಹಿಸಿರುವ ಶ್ರದ್ಧೆ ಹಾಗೂ ಶ್ರಮಗಳನ್ನು ವಿಶ್ವಾಸದಿಂದ ನೆನೆಯುತ್ತೇನೆ.

ಎಚ್.ಎಸ್. ಶ್ರೀಮತಿ
ಮಹಿಳಾ ಅಧ್ಯಯನ ವಿಭಾಗ

# ಪರಿವಿಡಿ

## ಮಾತುಕತೆ

# ಕಿ.ರಂ. ನಾಗರಾಜರೊಂದಿಗೆ ಒಂದಿಷ್ಟು ಹೊತ್ತು...

ಎಂ. ಉಷಾ

(ಈ ಸಂಚಿಕೆಯ ಮಾತುಕತೆಗೆ ಸಿಲುಕಿದವರು. ಪ್ರೊ.ಕಿ.ರಂ. ನಾಗರಾಜ್. ಕರ್ನಾಟಕದ ಸಾಂಸ್ಕೃತಿಕ ಚರ್ಚೆಗಳಿಗೆ ಅಲ್ಪ ಸ್ವಲ್ಪ ತೆರೆದುಕೊಂಡವರಿಗೂ ಅವರನ್ನು ಪರಿಚಯಿಸುವ ಅಗತ್ಯ ಬರುವುದಿಲ್ಲ. ಕಿ.ರಂ. ಹೆಚ್ಚಾಗಿ ಬರೆದವರಲ್ಲ. ಆದರೆ ಹತ್ತಾರು ಒಳ್ಳೆಯ ಬರಹಗಾರರನ್ನು ತಯಾರು ಮಾಡಿದವರು. ನನ್ನಂತಹ ನೂರಾರು ಜನ ಸಾಹಿತ್ಯದ ವಿದ್ಯಾರ್ಥಿಗಳು ಈ ಪದ್ಯವನ್ನು ಹೀಗೆ ಓದಿದರೆ ಹ್ಯಾಗೆ? ನಾವು ಅಂದುಕೊಂಡಿದ್ದು ಸರಿಯೆ? ಇತ್ಯಾದಿ ಹತ್ತಾರು ತೊಳಲಾಟಗಳಲ್ಲಿ ಕಿ.ರಂ.ರನ್ನು ಯಾವಾಗೆಂದರೆ ಆವಾಗ ನೆನಪು ಮಾಡ್ಕೋತೀವಿ. ಆದ್ದರಿಂದಲೇ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಎನ್ನುವ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಒಂದಷ್ಟು ಕೆಲಸ ಮಾಡಬೇಕು ಅಂದ್ಕೊಂಡ ತಕ್ಷಣ ಹೊಳೆದದ್ದು, ಇದರ ಬಗ್ಗೆ ಕಿ.ರಂ. ಜೊತೆ ಸ್ವಲ್ಪ ಮಾತಾಡಬೇಕಪ್ಪ ಅಂತ. ಅವರು ನಮ್ಮ ವಿಶ್ವವಿದ್ಯಾಲಯಕ್ಕೆ ಇನ್ನಾವುದೋ ಕೆಲಸಕ್ಕೆ ಬಂದಾಗ ನಿಮ್ಮತ್ರ ಸ್ವಲ್ಪ ಮಾತಾಡಬೇಕಲ್ಲ ಸಾರ್ ಎಂದೆ. ಎಷ್ಟು ಬೇಕಾದ್ರೂ ಮಾತಾಡೋಣ ಅದಕ್ಕೇನಿಲ್ಲ. ಆದ್ರೆ ಈ ಟೇಪರೆಕಾರ್ಡರ್ ಎಲ್ಲ ಬೇಡ. ನನಗಾಗಲ್ಲ ಅಂದ್ರು. ಸ್ವಲ್ಪ ಹೆಚ್ಚಾದ ಸಲಿಗೆ ತಗೊಂಡೇ 'ನೀವು ಅದಿಲ್ಲ ಅಂದ್ಕೊಂಡು ಬಿಡಿ ಸರ್...' ಅಂತ ಒತ್ತಾಯಿಸಿದೆ. ನನ್ನ ಮೊಂಡುತನವನ್ನ ಪ್ರೀತಿಯಿಂದಲೇ ಸ್ವೀಕರಿಸಿದ ಕಿ.ರಂ. ಸುಮಾರು ಒಂದೂವರೆ ಗಂಟೆ ನನ್ನೊಡನೆ ತಮ್ಮ ವಿಚಾರಗಳನ್ನು ಹಂಚಿಕೊಂಡರು. ಆ ಮಾತುಕತೆಯಲ್ಲಿ ಮಹಿಳಾ ಸಾಹಿತ್ಯ, ಮಹಿಳಾ ಚಳುವಳಿ, ಸಾಹಿತ್ಯ ಚರಿತ್ರೆ ರಚನೆ ಹೀಗೆ ವಿವಿಧ ಆಯಾಮಗಳು ತೆರೆದುಕೊಂಡಿದ್ದು ಅದರಲ್ಲಿ ಮಹಿಳಾ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಅಂಶವನ್ನು ಇಲ್ಲಿ ನೀಡಲಾಗಿದೆ.)

ಪ್ರ: ಮಹಿಳಾ ಸಾಹಿತ್ಯ ಚರಿತ್ರೆಯ ಪ್ರಸ್ತುತತೆ ಬಗ್ಗೆ, ಉಪಯೋಗದ ಬಗ್ಗೆ ನಿಮಗೇನನ್ನಿಸುತ್ತೆ ಸಾರ್.

ಕಿ.ರಂ. ...........

ಪ್ರಶ್ನೆ: ಸರ್ ಚರ್ಚೆನ ಈ ಕಡೆಯಿಂದ ಆರಂಭಿಸಬಹುದು ಅನ್ನಿಸುತ್ತೆ. ಇದುವರೆಗಿನ ಸಾಹಿತ್ಯ ಚರಿತ್ರೆಯ ರಚನಾ ಕ್ರಮದ ಬಗ್ಗೆ ಭಿನ್ನಾಭಿಪ್ರಾಯವನ್ನಿಟ್ಟುಕೊಂಡು ಹೊರಡುವುದಾದರೆ ಯಾವೆಲ್ಲ ಅಂಶಗಳನ್ನು ಈ ಹೊತ್ತು ಪ್ರಧಾನವಾಗಿ ಗುರುತಿಸಬಹುದು. ಈ ಪ್ರಶ್ನೆ ಮಹಿಳಾ ಸಾಹಿತ್ಯಕ್ಕೇ ಅಂತೇನಲ್ಲ. ಜನರಲ್ಲಾಗೆ ಕೇಳ್ತಿದೀನಿ.

ಕಿ.ರಂ: ನೋಡಿ, ಈಗಾಗಲೇ ವಿವಿಧ ಕಾಲಘಟ್ಟಗಳಲ್ಲಿ ರಚನೆಗೊಂಡ ಹಲವು ಸಾಹಿತ್ಯ ಚರಿತ್ರೆಗಳಿವೆ. ಅವುಗಳನ್ನೆಲ್ಲಾ ಒಂದೊಂದಾಗಿ ತಗೊಂಡು ವಿಶ್ಲೇಷಣೆ ಮಾಡುವುದಕ್ಕೆ ನಾನಿಲ್ಲಿ ಹೊರಡೋಲ್ಲ. ಒಟ್ಟಾರೆಯಾಗಿ ಅವನ್ನೆಲ್ಲ ಒಂದು ಕಡೆ ಇಟ್ಕೊಂಡು ಅವುಗಳಲ್ಲಿ ಏನೆಲ್ಲ ಮುಖ್ಯ ಚರ್ಚೆಗಳು ಏರ್ಪಟ್ಟಿವೆ ಅನ್ನೋದು ಒಂದು,... ಇದರಲ್ಲಿ ಯಾವುದು ನಿಜವಾಗಿಯೂ ಚರ್ಚಿಸಬೇಕಾದ್ದು ಅನ್ನೋದನ್ನು ನಾವೀಗ Create ಮಾಡ್ಕೋಬೇಕು... ಹಾಗೆ ನಿಜವಾಗಿಯೂ ಅದರಲ್ಲಿ Glaring ಆಗಿ ಬಿಟ್ಹೋಗಿರೋದು ಏನೂ ಅಂತಾನೂ ಗುರುತಿಸಿಕೊಳ್ಳಬೇಕು. ಮತ್ತು ಇನ್ನೂ ಒಂದು ಅಂಶ.. ಅಲ್ಲಿ ಮಹತ್ವ ಕೊಡದೆ ಇರೋ ಅಂಶಗಳು ಯಾವುವು? ಅಥವಾ ಆ ಸಾಹಿತ್ಯ ಚರಿತ್ರೆಗಳು ಯಾವ ಕಲ್ಪನೆಯನ್ನು ಒಳಗೊಂಡಿವೆ? ಅಥವಾ ಕೇವಲ ಸೌಂದರ್ಯಾತ್ಮಕ ನೆಲೆಗಳಿಂದ ಮಾತ್ರ ಸಾಹಿತ್ಯವನ್ನು ನೋಡುವ ಕ್ರಮದ್ದಾಗಿದೆಯೋ ಅಥವಾ ವೈಚಾರಿಕ ನೆಲೆಯಲ್ಲಿ ಪ್ರವೇಶಿಸಿದ್ದಾದರೆ ಯಾವುದಕ್ಕೆ ಹೆಚ್ಚು ಒತ್ತು ಬಿದ್ದಿದೆ....ಇದರಲ್ಲಿ ಗಮನಿಸದೆ ಉಳಿದಿರುವ Areas ಯಾವುದು... ಹೀಗೆ ಮತ್ತೆ ಅವನ್ನ ಪರಿಶೀಲಿಸಿ ಮುಂದುವರಿಯುವುದಕ್ಕೆ ಬೇಕಾದ ನಮ್ಮ ಕೆಲಸದ ನೆಲೆಗಳನ್ನು ಗುರುತಿಸಿಕೊಳ್ಳುವುದರಿಂದ ಈ ಕೆಲಸ ಪ್ರಾರಂಭಿಸಬಹುದು... ಈ ರೀತಿ ಪ್ರತಿಕ್ರಿಯೆ ತೋರಿಸೋದರಲ್ಲಿ ನಿಜವಾಗಿಯೂ ಪ್ರಯೋಜನವಿದೆ.....ಈಗ ನಿಮ್ಮ ಮೊದಲ ಪ್ರಶ್ನೆಗೆ ಬರ್ತೀನಿ. ಆ ರೀತಿ ಉಪಯುಕ್ತತೆ, ಪ್ರಸ್ತುತತೆ ಬಗ್ಗೆ ಪ್ರಶ್ನೆ ಇಟ್ಟರೆ ನಾನು ಉತ್ತರ ಕೊಡೋಕೆ ಹೋಗೊಲ್ಲ....ಯಾಕೆಂದ್ರೆ ಅಸಂಖ್ಯ ಸಾಹಿತ್ಯ ಚರಿತ್ರೆಗಳು ಇರ್ತಾವೆ. ಇರಬೇಕು. ಇವತ್ತು ಚರಿತ್ರೆ ಅಂದ್ರೆ ಯಾವ್ದೊ ಸಂಗತಿಗಳನ್ನ, ಘಟನೆಗಳನ್ನ, ನಿರೂಪಿಸೋ ಜಡವಾದಿ ಅಲ್ಲ. ಹಾಗಾಗಿ ಆ ಪ್ರಶ್ನೇನೇ ಅಸಂಗತ ನನಗೆ... ಇದು ಚರಿತ್ರೆಯ ಕಾಲವಲ್ಲ. ಚರಿತ್ರೆಗಳ ಕಾಲ ಇದು. ಆದ್ದರಿಂದ ಯಾರಾದ್ರೂ ಇಂತಹ ಕೆಲಸದ ಪ್ರಸ್ತುತತೆ ಪ್ರಶ್ನಿಸಿದರೆ ಅದು ಉತ್ತರಿಸಬೇಕಾದ ಪ್ರಶ್ನೇನೇ ಅಲ್ಲ..... ಆದ್ರೆ ಚರಿತ್ರೆಯನ್ನು ನಾವು ಇವತ್ತು ಹೇಳಬೇಕಾದ ಕ್ರಮ ಯಾವುದು ಅನ್ನೋದನ್ನು ಕುರಿತೇ ಒಂದು ಒಳ್ಳೆಯ ದೃಷ್ಟಿಕೋನ ಇಟ್ಟುಕೊಂಡು ಹೊರಟರೆ ಅದು ಖಂಡಿತ ಉಪಯುಕ್ತವಾದ ಕಾರ್ಯ ಆಗುತ್ತೆ.

ಪ್ರಶ್ನೆ: ಈ ಪ್ರಶ್ನೆಯನ್ನ ನಾನು ಯಾಕೆ ಎತ್ತುತ್ತಾ ಇದ್ದೀನಿ ಅಂದ್ರೆ ಕನ್ನಡ ಸಾಹಿತ್ಯದಲ್ಲಿ ಹಲವಾರು ವಿಭಜನಾಕ್ರಮಗಳಿದ್ದರೂ Gender dimensionನಿಂದ ವಿಭಜಿಸಲು ಹೊರಟಾಗ ಈ ಬಗ್ಗೆ ಬಹಳ ವಿರೋಧ ಬರುತ್ತೆ, ಅದಕ್ಕೆ. ಆದ್ರೆ ಬೇರೆ dimensionಗಳಿವೆಯಲ್ಲ... ಉದಾಹರಣೆಗೆ ಪ್ರಾದೇಶಿಕತೆ ಪ್ರಶ್ನೆ ಇರಬಹುದು... ಅದು ಈಗ ಹೆಚ್ಚು ಕಾಣಿಸ್ತಿದೆ....

ಕಿ.ರಂ: ಯಾರು ಏನೇ ಹೇಳಿದ್ರೂ Gender dimensionನಿಂದ ನೋಡೋ ಸಾಧ್ಯತೆ ಇದೆ. ನೋಡುವ ಅಗತ್ಯವಿದೆ ಅಂದ್ರೆ ತರಬಹುದು. ತರಲೇಬೇಕು. ಹಾಗೆ ನೋಡಿದರೆ ಪ್ರಾದೇಶಿಕತೆ ಇರಲಿ ಮತ್ತೊಂದಿರಲಿ ಅದೆಲ್ಲಕ್ಕೂ Gender dimension ಇದೆಯಲ್ಲ.... ಈಗ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಹೆಣ್ಣು ಮತ್ತು ಸಾಹಿತ್ಯ ರಚನೆಗಿರಬಹುದಾದ ಸಂಬಂಧವನ್ನೂ ವಿಚಾರ ಮಾಡಬಹುದು. ಮಾಡಬೇಕು ಕೂಡ ಹೌದು...

ಪ್ರಶ್ನೆ: ಈ ಹಿನ್ನೆಲೆಯಲ್ಲೇ ಮಹಿಳಾ ಸಾಹಿತ್ಯ ಚರಿತ್ರೆಯ ಅಧ್ಯಯನದ ನೆಲೆಗಳ ಬಗ್ಗೆ ಸ್ವಲ್ಪ ಚರ್ಚೆ ಮಾಡಬಹುದಲ್ಲ ಸಾರ್.

ಕಿ.ರಂ: ನೋಡಿ ಚರಿತ್ರೆಯ ಅಧ್ಯಯನದಿಂದ ಒಂದು ಅನುಭವ ಇದೆ. ಸಾಹಿತ್ಯದ ಅಧ್ಯಯನದಿಂದ ನನಗೊಂದು ಅನುಭವ ಇದೆ. ಇದು ಬೇರೆಯದೇ ಆದ ಅನುಭವ. ಈ ಎರಡೂ ಅನುಭವವನ್ನು ನಾನು ಒಂದು ಕಡೆ ತಂದು ಹೊಸ ಅಧ್ಯಯನದ ನೆಲೆಗಳನ್ನ, ವಿಶ್ಲೇಷಣೆಯ ನೆಲೆಗಳನ್ನ ಹುಡುಕುವುದು ಇಂತಹ ಪ್ರಯತ್ನಗಳ ಹಿನ್ನೆಲೆಯಲ್ಲಿರಬೇಕಾಗುತ್ತೆ.... ಸಾಹಿತ್ಯ ಚರಿತ್ರೆ ಅಂತ ಅಂದ ತಕ್ಷಣ History ಅಂತ ನಾವು ಮಾತಾಡ್ತೀವಲ್ಲ... ಆ ಶಿಸ್ತಿನಿಂದ ಸಾಹಿತ್ಯ ಚರಿತ್ರೆ ಬರೆಯೋಕೆ ಆಗೊಲ್ಲ... ಅದರಿಂದ ಇದು ಸಂಪೂರ್ಣ ಭಿನ್ನ.... ಅವೆರಡೂ ಒಂದೇ ಅಲ್ಲ. ಆದ್ರೆ ನಾವಿಲ್ಲ ಎರಡನ್ನೂ Combine ಮಾಡ್ತಾ ಇದ್ದೀವಿ... ಚರಿತ್ರೆಯ ಶಿಸ್ತಿನ ಮೂಲಕ ನಾವು ಬಳಸಿಕೊಳ್ಳಬಹುದಾದ ಮೆಟೀರಿಯಲ್..... ಅದರ ಜೊತೆಗೆ ಸಾಹಿತ್ಯಕ್ಕೆ react ಮಾಡಬೇಕಿರೋ ಕ್ರಮ-ಈ ಕ್ರಮ ವೈಯಕ್ತಿಕವಾದದ್ದು ಆಗುತ್ತೆ, ಸಾಂಸ್ಥಿಕವಾದದ್ದು ಆಗುತ್ತೆ. ಈ ಎರಡೂ experinceನ ಜೊತೆಗೆ ವಿಚಾರ ಮಾಡುವಂತದ್ದೇ ಮುಖ್ಯ..... ಜೊತೆಗೆ ಇವತ್ತಂತೂ ಸಾಹಿತ್ಯವನ್ನು ಅಧ್ಯಯನ ಮಾಡುವ ಸಾಹಿತ್ಯಕ ಕ್ರಮ ಇಲ್ಲವೇ ಇಲ್ಲ. ಅಂದರೆ ಕೇವಲ ಸಾಹಿತ್ಯಿಕ ಅಧ್ಯಯನ ಅನ್ನೋ ಕ್ರಮ ಇಲ್ಲ..... ಕಾರಣ ಸಾಹಿತ್ಯವನ್ನ ನೋಡೋ ಕ್ರಮದಲ್ಲೇ ನಾವು ವಿಭಿನ್ನವಾದ ಆಸಕ್ತಿಗಳನ್ನು, ವಿಭಿನ್ನ ಜ್ಞಾನ ಶಾಖೆಗಳೊಂದಿಗಿನ ಸಂಬಂಧವನ್ನು ಪಡೆದುಕೊಳ್ತಾ ಇದ್ದೀವಿ. ಹಾಗಾಗಿ ನನಗೆ ಕಳೆದ ಶತಮಾನದ ಮಧ್ಯಭಾಗದಲ್ಲಿ ಸಾಹಿತ್ಯವನ್ನು ನೋಡೋ ಕ್ರಮ, ಕೊನೆಯಲ್ಲಿ ನೋಡಿದ ಕ್ರಮ ಹಾಗೂ ಇತ್ತೀಚೆಗೆ ನೋಡ್ತಾ ಇರೋ ಕ್ರಮಕ್ಕೇನೆ ಭಿನ್ನತೆ ಇದೆ. ಆ ಎಲ್ಲ ಕ್ರಮಗಳನ್ನ ಬಿಡಬೇಕು ಅನ್ನೋಕ್ಕಿಂತ ಮುಂಚೆ ಅವನ್ನೆಲ್ಲ ಇಟ್ಕೋಬೇಕು......ಇಲ್ಲಿ ಇಟ್ಕೊಂಡು ನೋಡಬೇಕು ಅಂದ್ರೆ Pastನ್ನ ನಾನಿವತ್ತು ಬರೀ ಕುತೂಹಲದಿಂದ ನೋಡ್ತಾ ಇಲ್ಲ.....ವಿಮರ್ಶಾತ್ಮಕವಾಗಿ ನೋಡ್ತಾ ಇದ್ದೀನಿ. ಅದರೊಂದಿಗೆ ಘರ್ಷಣೆ ನಡೆಸ್ತಾ ಇದ್ದೀವಿ. ಭಿನ್ನಾಭಿಪ್ರಾಯ ತೋರ್ತಾ ಇದ್ದೀವಿ... ಇದರೊಂದಿಗೆ ಕೆಲವು ಕಡೆ ಅನುಸಂಧಾನದ ಕ್ರಮಾನು ಇದೆ... ಹೀಗೆ ಬೇರೆ ಬೇರೆ ರೀತಿಯಲ್ಲಿ ಬಹಳ ಶ್ರಮಪಟ್ಟು Pastನ್ನ ವರ್ತಮಾನಕ್ಕೆ ತಂದ್ಕೋ ಬೇಕಾಗಿದೆ....Past ಸುಮ್ನೆ ಓದೋದರಿಂದ ಬರೋದಲ್ಲ.....ಇಲ್ಲಿ ಶೋಧ ಮಾಡ್ಕೊಳ್ಳೋದು ಮುಖ್ಯ. ಚರಿತ್ರೆ ಅಂದ್ರೆ ಒಂಥರಾ ಭಾವನೆ ಬಂದು ಬಿಟ್ಟಿದೆ....ಒಂದಾದರ ಮೇಲೊಂದು ಕಾಲಾನುಕ್ರಮಣಿಕೆಯಲ್ಲಿ ಜೋಡಿಸಿ ಬಿಡೋದು ಅನ್ನೋತರ. ಆದ್ರೆ ಅದಷ್ಟು ಮುಖ್ಯ ಅಲ್ಲ.

ಪ್ರಶ್ನೆ: ಸರ್ ಈ ಬಗ್ಗೇನೇ ಸ್ವಲ್ಪ ಮಾತಾಡೋಣ, ಕಾಲಾನುಕ್ರಮಣಿಕೆ ಬಿಟ್ಹೋಗೋದು ಅಂತೀವಲ್ಲ. ಹಾಗಂದ್ರೇನು ನಿಮ್ಮ ಅಭಿಪ್ರಾಯದಲ್ಲಿ?.....

ಕಿ.ರಂ: ಅಲ್ಲ ಪೂರ್ತಿ ಬಿಟ್ಟು ಬಿಡಬೇಕು ಅಂತ ನಾನು ಹೇಳ್ತಿಲ್ಲ. ಆದ್ರೆ ಅದಕ್ಕೇ ಕಟ್ಟು ಬಿದ್ದು ಅದರ ಖಚಿತತೆಯನ್ನೇ ಬೇಸ್ ಮಾಡ್ಕೊಂಡು ನೋಡೋದಕ್ಕಿಂತ ಅದನ್ನು ಹೆಚ್ಚು ಕನಸೆಪ್ಚ್ಯುಯಲೈಸ್ (Conceptualise) ಮಾಡ್ಕೋಳ್ಳೋದು ಒಳ್ಳೆಯದು ಅಂತ. ಅದನ್ನ ಸಂಪೂರ್ಣವಾಗಿ ಬಿಡೋದು ಅಂತಲ್ಲ.....ಡಿ ಆರ್ ಎನ್ ಒಂದು ಕಡೆ ಹೇಳ್ತಾರೆ....ನಾನು ಇದನ್ನ ನೆನಪಿನಿಂದ ಹೇಳ್ತ ಇದ್ದೀನಿ ಅಷ್ಟೆ.....ಹಾಗಾದ್ರೆ ನಾವು ಪ್ರಾಚೀನ ಸಾಹಿತ್ಯದಲ್ಲಿ

ಮಹಿಳೆಯರ ದನೀನೇ ಇಲ್ಲ.. ಹೆಚ್ಚಂದ್ರೆ ನಾಲ್ಕಾರು ಜನ ಸಿಕ್ಕಬಹುದು ನನಗೆ.... ಹಾಗಂದ ತಕ್ಷಣ ನಾನು ಅಲ್ಲಿ ಮಹಿಳೆ ಬಗ್ಗೆ ಇಲ್ಲ ಏನೂ ಅನ್ನೋಕೆ ಸಾಧ್ಯವೆ?.....ಖಂಡಿತಾ ಇಲ್ಲ... ಆಗ ನಾನು ಕಲ್ಪಿತ ಸಾಹಿತ್ಯ ಚರಿತ್ರೇ ಬರೀತೀನಿ ಅಂತಿಂದ್ರು...ಆ ತರದಲ್ಲಿ ಒಂದು ಕಲ್ಪಿತ ಸಾಹಿತ್ಯ ಚರಿತ್ರೇನೂ ರೂಪಿಸಬೇಕಾಗುತ್ತೆ.

ಚರಿತ್ರೆಯ ರಹಸ್ಯವನ್ನು Cronologyಯಿಂದ ಮಾತ್ರ ಬಿಡಿಸ್ಕೊಳ್ಳೋಕೆ ಸಾಧ್ಯ.... ಕಟ್ಟೋಕೆ ಸಾಧ್ಯ ಅನ್ನೋದನ್ನು ಬಿಡಬೇಕು.....ಉದಾಹರಣೆಗೆ ಇವತ್ತೂ ಶುದ್ಧ ಧಾರ್ಮಿಕ ಸಾಹಿತ್ಯ ಬರೆಯುವವರಿರೋವಾಗ ನಾವು ಹಳಗನ್ನಡ ಸಾಹಿತ್ಯ ಧಾರ್ಮಿಕ ಸಾಹಿತ್ಯ ಅಂತ ವಿವರಿಸೋಕೆ ಸಾಧ್ಯವೇ?.....ಇಲ್ಲಿ ಹೇಳಬೇಕಾದ ಇನ್ನೊಂದು ಅಂಶ ಸಾಹಿತ್ಯ ಅಂದ್ರೆ ಕೇವಲ ಕತೆ, ಕವನ ಅಂತ ಆಗಬಾರದು. ಬರಹದ ಎಲ್ಲ ರೂಪಗಳೂ ಇರಬೇಕು.....ಮೌಖಿಕವೂ ಇರ ಬೇಕು....ಇಲ್ಲಿಗೆ ಬಂದಾಗಂತೂ Cronology ಅನ್ನೋದೇ ಭಿನ್ನ ಆಗಿಬಿಡುತ್ತೆ... ಆದ್ದರಿಂದ ಕಾಲದ ಕಲ್ಪನೆ ಇರಬೇಕು. ಹಾಗೇ ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಹೋಗಿ ಬರುವ ಸ್ವಾತಂತ್ರ್ಯವೂ ಇರಬೇಕು. ಆದ್ದರಿಂದ ನಾನು Cronologyಯನ್ನು ವಿರೋಧಿಸ್ತಿಲ್ಲ. ಆದ್ರೆ ಅಭ್ಯಾಸದ ಒಂದು ಪರಿಕರವಾಗಿ ಮಾತ್ರ ಭಾವಿಸ್ತೀನಿ..... ಆಗ ಅಕ್ಕಮಹಾದೇವಿ ಇವತ್ತಿನವಳಾಗ್ತಾಳೆ... ಅಂದ್ರೆ ಎಲ್ಲವೂ ಓದುವವನ ಕಾಲದ್ದೇ.....

ಪ್ರಶ್ನೆ: ಕಲ್ಪಿತ ಸಾಹಿತ್ಯ ಚರಿತ್ರ ರಚನೆಯ ಕಡೆ ಸ್ವಲ್ಪ ಬರೋಣಾ ಸಾರ್....

ಕಿ.ರಂ: ಚರಿತ್ರೆಯ ಒಳಗೆ ನಮಗೆ ವಚನಕಾರರಲ್ಲಿ ಒಂದಷ್ಟು ಜನ ಸಿಕ್ತಾರೆ. ಕೀರ್ತನಕಾರರಲ್ಲಿ ಒಂದಷ್ಟು ಜನ ಸಿಕ್ತಾರೆ. ಹೀಗೆ ಚರಿತ್ರೆಯ ಒಳಗೆ ನಮಗೆ ಸಿಕ್ಕುವ ದನಿಗಳಿಂದ ಸಿಗದ ದನಿಗಳನ್ನು ತಲುಪಬೇಕು, ಕಟ್ಟಬೇಕು. ಅದನ್ನು ರಚಿಸಿಕೊಳ್ಳೋದು ಹೇಗೆ ಅನ್ನೋದು ಬಹುಶಃ ಮಹಿಳಾ ಸಾಹಿತ್ಯ ಚರಿತ್ರ ರಚನೆಯಲ್ಲಿ ಮುಖ್ಯವಾಗುತ್ತೆ....ಆ ಮೇಲೆ ಸಿಕ್ಕಿದ ದನಿ ಗಳಲ್ಲಿರುವ ಅರೆಕೊರೆಗಳು ಯಾವುವು ಅಥವಾ ಅಸಂಗತ ನಿಲವುಗಳು ಯಾವ ರೀತಿಯದಾಗಿವೆ ಅಂತನ್ನೋದನ್ನ ಗ್ರಹಿಸಿಕೊಳ್ಳುವುದೇ ಚರಿತ್ರಕಾರನ ಕೆಲಸ. ಚರಿತ್ರಕಾರನ ಕೆಲಸ Re-Constructionನ ಕೆಲಸ. ಈಗ ಭಾಷಾಶಾಸ್ತ್ರವನ್ನೇ ಉದಾಹರಣೆಗೆ ತಗೊಳ್ಳೋಣ...ಕಲ್ಪಿತ ಚರಿತ್ರೆ ವಿವರಿಸಿ ಕೊಳ್ಳೋಕೆ. ಇಲ್ಲಿ ನಡುಗನ್ನಡದಿಂದ ಹಳಗನ್ನಡಕ್ಕೋಗ್ತೀವಿ.... ಹಳಗನ್ನಡದಿಂದ ಪೂರ್ವದ ಹಳಗನ್ನಡಕ್ಕೋಗ್ತೀವಿ...ಇದು ಏನಂದ್ರೆ ಸಿಕ್ಕಿರುವ ಮಾಹಿತಿಗಳಿಂದ ಸಿಗದದ್ದನ್ನು ಪುನಾರಚನೆ ಮಾಡುವ ಮಾದರಿ.... ಆದ್ರಿಂದ ಕವಿಗಳು ಜಾಸ್ತಿ ಇದಾರೆ, ಕಡಿಮೆ ಇದಾರೆ ಅನ್ನೋದು ನನಗೆ ಮುಖ್ಯ ಅಲ್ವೇ ಅಲ್ಲ. ಅದು ಅಷ್ಟು ಸಮರ್ಪಕ ವಾದ ಅಲ್ಲ. ಅದರ ಬದಲು ನಾನು ಇಲ್ಲಿ ಇಲ್ಲದ್ದಕ್ಕೆ ಕಾರಣವೇನು ಅನ್ನೋದನ್ನು ಹುಡುಕೋಕ್ಕೆ ಹೋಗ್ತೀನಿ... ಈ ತರ ಹೊರಟರೆ ಆಗ ನಿಜವಾಗಿ ಪುರುಷ ಕೇಂದ್ರಿತ ಚಿಂತನಾ ಕ್ರಮಗಳ ನೆಲೆಗಳು ಯಾವುವು ಅನ್ನೋದು| ಅದು ಪ್ರಭಾವ ಬೀರಿದ ಬಗೆ ಅಥವಾ ಪ್ರಭುತ್ವಕ್ಕೂ ಹೆಣ್ಣಿಗೂ ಇರುವ ಸಂಬಂಧದ ನೆಲೆ ಯಾವುದು ಅನ್ನೋದು ಗೊತ್ತಾಗುತ್ತೆ.... ಅವಲ್ಲದೆ ನಮ್ಮಲ್ಲಿ ಸ್ತ್ರೀಕೇಂದ್ರಿತವಾದ ಮಹತ್ವದ ಕೃತಿಗಳೂ ಇವೆ ಅಲ್ಲ.... ಯಶೋಧರ ಚರಿತ್ರ

ಅಂತವು.....ಅಥವಾ ಪಂಪ ಭಾರತದಲ್ಲಿಯೇ ಸುಭದ್ರ ದ್ರೌಪದಿ ಇಬ್ಬರೂ ಇದಾರಲ್ಲಾ....ಈ ರೀತಿಯಲ್ಲಿ ಹುಡುಕೋ ಪ್ರಯತ್ನ ಮಾಡಬಹುದು.....ಬೇರೆ ದಾರಿ ಖಂಡಿತಾ ಇದೆ....ಹೀಗೆ ಸೂಕ್ಷ್ಮವಾದ ದೃಷ್ಟಿಗಳಿಂದ ಪಠ್ಯವನ್ನ ಪುನಃ ಪ್ರವೇಶ ಮಾಡಿದರೆ......ಬೇರೆ ಸಾಹಿತ್ಯ ಚರಿತ್ರೇನೇ ಕಟ್ಟೋಕೆ ಸಾಧ್ಯ.

ಪ್ರಶ್ನೆ: ಅಂದ್ರೆ ಇದು ಇಡೀ ಕನ್ನಡ ಸಾಹಿತ್ಯ ಚರಿತ್ರೇನೇ-ಮಹಿಳಾ ಸಾಹಿತ್ಯ ಚರಿತ್ರೆ ಮಾತ್ರ ಅಲ್ಲ- Gender dimensionನಿಂದ ನೋಡುವ ಒಂದು ಕ್ರಮ.

ಕಿ.ರಂ: ಹೌದು ಅದೇ ಮುಖ್ಯವಾದ ಕ್ರಮ ಆಗಬೇಕು.

ಪ್ರಶ್ನೆ: ಅಂದರೆ ಅದರ ಅಂತರ್ಗತದಲ್ಲಿ ಮಹಿಳಾ ಸಾಹಿತ್ಯ ಚರಿತ್ರೆ ಬರಬೇಕು ಅಂತಲೇ....

ಕಿ.ರಂ: ಅಂತರ್ಗತ ಅಂತೇನಲ್ಲ..... ಒಟ್ಟಾರೆಯಾಗಿಯೇ ಸ್ತ್ರೀಕೇಂದ್ರಿತವಾಗಿ ನೋಡುವ ಒಂದು ಮಿಮಾಂಸ ಕ್ರಮ ನಿರ್ಮಾಣಗೊಳ್ಳಬೇಕು. ನೋಡಿ,.... ಸಾಹಿತ್ಯ ಕೃತಿಗಳನ್ನು ಒಂದರ ಪಕ್ಕ ಒಂದಿಟ್ಟು ನೋಡಿದ್ರೆ ಒಂಥರಾ ಕಾಣುತ್ತೆ. ಎದುರು-ಬದುರು ಇಟ್ಟು ನೋಡಿದ್ರೇ ಇನ್ನೊಂಥರಾ ಕಾಣುತ್ತೆ......ಈ Dialogueಗಳನ್ನು ಇವಾಗ Create ಮಾಡಬೇಕು.... ಯಾವುದನ್ನು ಒಳ್ಳೇ ಸಾಹಿತ್ಯ ಅಂತ ಕರೀತೀವಿ ಅಂದ್ರೆ ಇನ್ನೂ ಕೂಡ ಹೇಳಿ ಮುಗಿಸದೇ ಇರೋದನ್ನ ಒಳ್ಳೆ ಸಾಹಿತ್ಯ ಅಂತ..... ಹಾಗಾಗಿ ಸಾಹಿತ್ಯದಲ್ಲಿ ಮೌನ ಇದೆಯಲ್ಲ... ಈ ಮೌನದ ಜೊತೆಗಿನ ಸಂವಾದ ಅನ್ನೋದು ಬೇರೆ ರೀತಿಯ ಪುನಾರಚನೆಯನ್ನ ಸಾಧ್ಯವಾಗಿಸುತ್ತೆ.

ಪ್ರಶ್ನೆ: ಪ್ರಾಚೀನ ಸಾಹಿತ್ಯಕ್ಕೆ ಹೋದ್ರೆ ಕಲ್ಪಿತ ಸಾಹಿತ್ಯ ಚರಿತ್ರೆ ಮಾಡ್ಕೊಳ್ಳಲೇಬೇಕು. ಹಾಗೆ ಸಮಕಾಲೀನಕ್ಕೆ ಬಂದ್ರೆ..... ಒಂದರ್ಥದಲ್ಲಿ ಸಮಕಾಲೀನ ಸಾಹಿತ್ಯವೇ ಮಹಿಳಾ ಸಾಹಿತ್ಯ ಚರಿತ್ರೆಯ ಪ್ರಧಾನ ಭೂಮಿಕೆ. ಅದನ್ನು ಹೇಗೆ ನೋಡೋದು. ಅಂದ್ರೆ ನಾನಿಲ್ಲಿ ವಿಭಾಗ ಕ್ರಮದ ಬಗ್ಗೆ ಕೇಳ್ತಾ ಇದ್ದೀನಿ....ಅದರ ಆಯ್ಕೆಯ ಮಾದರಿ ಅಥವಾ ಎಲ್ಲರನ್ನೂ ಒಳ ಗೊಳ್ಳುವ ಮಾದರಿಯ ಬಗ್ಗೆ.....ಈ ಪ್ರಶ್ನೆ ಯಾಕೆ ಅಂದ್ರೆ ಆಯ್ಕೆ ಮಾದರಿಯ ಬಗ್ಗೇನೆ ನಮಗೆ ಭಿನ್ನಾಭಿಪ್ರಾಯ ಇರೋದು. ಇದೇ ಮಹಿಳಾ ಸಾಹಿತ್ಯಕ್ಕೆ ಚರಿತ್ರೆಯ ಒಳಗೆ ಎಂಟ್ರಿ ಕೊಡದ ಹಾಗೆ ತಡೆದಿರೋ ಬಹುಮುಖ್ಯ ಅಂಶ.....ಆದ್ರೆ ಅದನ್ನ ಬಿಡಬೇಕು ಅನ್ನೋದು ಹಲವಾರು ಸಂಕಷ್ಟಗಳನ್ನು ಒಡ್ಡುತ್ತೆ ಕೂಡ.....

ಕಿ.ರಂ: ನೋಡಿ, ಆಯ್ಕೆಯ ಮಾದರಿ ಬಗೆಗಿನ ಭಿನ್ನಾಭಿಪ್ರಾಯ ಇರಲೇಬೇಕು. ಆದ್ರೆ ನಾವು ಎಷ್ಟೇ ಎಲ್ಲರನ್ನು ಒಳಗೆ ತಗೋತೀವಿ ಅಂದ್ಕೊಂಡ್ರು ಕೆಲವನ್ನ ಬಿಡಬೇಕಾಗುತ್ತೆ..... ಕೆಲವನ್ನು ವಿಶೇಷವಾಗಿ ಪ್ರಸ್ತಾಪಿಸಬೇಕಾಗುತ್ತೆ.....ಆವಾಗ ಅದನ್ನ ಆಯ್ಕೆ ಅಂತ ಹೇಳೋ ಕಾಗಲ್ಲ.... ಹೇಳಿದೀನಲ್ಲ. ಒಂದರ ಪಕ್ಕ ಒಂದು ಎಲ್ಲವನ್ನು ಜೋಡಿಸೋದ್ರಿಂದ ಎಲ್ಲ ಪರಿಹಾರ ಆಗಲ್ಲ. ಹಾಗಾಗಿ ಒಂದು ಬಗೆಯ ಆಯ್ಕೆಯ ಕ್ರಮವನ್ನು ಅನುಸರಿಸಬೇಕು. ಆದ್ರೆ ಅದು ಈ ಹಿಂದಿನ ಆಯ್ಕೆಯ ಮಾದರಿ ಖಂಡಿತಾ ಆಗಬಾರದು. ಬದಲಾಗಿ ವಿಷಯ ಕೇಂದ್ರಿತ ವಾಗೋ, ವಸ್ತುವನ್ನೊ, ತಾತ್ವಿಕತೆಯನ್ನೋ ಇಟ್ಕೊಂಡು ಆಯ್ಕೆ ಮಾಡ್ಕೊಳ್ಳಲೇ ಬೇಕು..... ಹೀಗೆ ಯಾವ ಆಯ್ಕೆಯೂ ಇಲ್ಲದೆ ಸಾಹಿತ್ಯ ಚರಿತ್ರೆಯನ್ನ ಕಟ್ಟೋಕೆ ಸಾಧ್ಯ

ಆಗಲ್ಲ. ಅಲ್ಲದೆ ಅದನ್ನ ಬಿಡೋದ್ರಲ್ಲೂ ಉಪಯೋಗಾನೂ ಇಲ್ಲ.....ಹಾಗಾಗಿ ನಾನು ಲೇಖಕಿ ಕೇಂದ್ರಿತವಾಗಿ ಕಟ್ಕೊಕ್ಕಿಂತ ಭಿನ್ನವಾದ ಮಾದರಿಯ ಬಗ್ಗೆ ಗಮನ ಹರಿಸ್ತೀನಿ....ಆವಾಗ ನೀವು ಪುರುಷಾಧಿಕಾರದ ನೆಲೆಗಳಾವುವು ಅನ್ನೋದನ್ನ.....ಕಡೆ ಪಕ್ಷ ಕೆಲವು ಮುಖ್ಯ ಧಾರೆಗಳನ್ನಾದರೂ.....ಗುರುತಿಸಬಹುದು.

ಪ್ರಶ್ನೆ: ಈ ಭಿನ್ನ ಮಾದರಿಯಲ್ಲಿ ಮಹಿಳೆಯ ಸ್ಥಾನಮಾನ ಹಾಗೂ ಸಾಹಿತ್ಯ ಅನ್ನುವುದನ್ನು ಜೋಡಿಸುವುದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಕಿ.ರಂ: ನೋಡಬಹುದು.....ಆದ್ರೆ ಇಲ್ಲೇನಾಗುತ್ತೆ ಅಂದ್ರೆ....Social Status ಅನ್ನೋದನ್ನ...ಸರಳವಾಗಿ 'ವರ್ಗ' ಅನ್ನುವ ನೆಲೆಗೆ ತಂದು ಬಿಡೋ ಅಪಾಯ ಇದೆ... ಯಾಕೆಂದ್ರೆ ಭಾಷೆಯಿಂದ ಆಗುವ ಸಾಹಿತ್ಯವನ್ನ ಸರಳವಾಗಿ ಮಾರ್ಕ್ಸ್‌ವಾದದಲ್ಲಿ ನೋಡಾಕಾಗಲ್ಲ...ಆದ್ರೆ ಒಂದು ಮಾಡ್ಕೋಬಹುದು. ಇಲ್ಲಿ ನಮ್ಮ ಸಾಮಾಜಿಕ ಸಂದರ್ಭ ದಲ್ಲಿನ ಸ್ಥರಗಳನ್ನು ಇಟ್ಕೊಂಡು ಯೋಚನೆ ಮಾಡಬಹುದು. ಈಗ ಉದಾಹರಣೆಗೆ ಶಿಕ್ಷಣ ಪಡೆದ ಮಹಿಳೆ, ಪಡೆಯದ ಮಹಿಳೆ, ನಗರದ ಮಹಿಳೆ-ಗ್ರಾಮೀಣ ಮಹಿಳೆ... ಈ ತರದಲ್ಲಿ Social Statusನ ನೋಡಬಹುದು ಅನ್ಸುತ್ತೆ....ಈ ತರದ್ದರಲ್ಲೇ ಹೆಣ್ಣಿನ ಮುಖ್ಯ ಪ್ರಶ್ನೆಗಳು ಅನ್ನೋದೂ ಇದ್ದೇ ಇವೆ. ಅವರ ಜೊತೆಗೆ ಬದಲಾದ ಸಂದರ್ಭಗಳ ಪ್ರಶ್ನೆಗಳೂ ಸಿಕ್ಕುತ್ತೆ.....

ಪ್ರಶ್ನೆ: ಮತ್ತೆ ಸ್ವಲ್ಪ ಕಲ್ಪಿತ ಚರಿತ್ರೆ ಕಡೆ ಹೋಗೋಣ ಸಾರ್, 'ಕಂತಿ'ಯ ಕಲ್ಪಿತ ಚರಿತ್ರೆ ಇದೆಯಲ್ಲ ಅಂದ್ರೆ... ಈಗಾಗಲೇ ಕಲ್ಪಿತ ಚರಿತ್ರೆಯ ಮಾದರಿಯೆಂದು ಪ್ರಧಾನಧಾರೆಯಲ್ಲೇ ಇದೆಯಲ್ಲ. ಅವರ ಬಗ್ಗೆ ನಿಮ್ಮ ಅಭಿಪ್ರಾಯವೇನು? ಈ Model ಉಪಯುಕ್ತ ಆಗಬಹುದು ಅನ್ಸುತ್ತಾ.....

ಕಿ.ರಂ: ಅದು ಪೂರ್ಣ ಕಲ್ಪನೆ ಬಿಡಿ. ಆ ದಾರಿಯಲ್ಲಿ ಹೋಗೋಕಾಗಲ್ಲ. ಅದಕ್ಕೆ ಇವತ್ತು ಮಾತಾಡ್ತಿರೋ ಕಲ್ಪಿತ ಸಾಹಿತ್ಯ ಚರಿತೆಯ ಸೂಕ್ಷ್ಮತೆಗಳಿಲ್ಲ. ಅಂತಹ Modelಗಳು ಸಾಹಿತ್ಯ ಚರಿತ್ರೆಯಲ್ಲಿ ತುಂಬಾ ಇವೆ. ಹಾಗೆ ನೋಡಿದ್ರೆ ಕವಿ ಕತೆಗಳೂ ಅಂತಾನೇ ಇವೆ. ನಮ್ಮಲ್ಲಿ ಬೇಕಾದಷ್ಟು...ಇದು ಕನ್ನಡದಲ್ಲಷ್ಟೇ ಅಲ್ಲ ಬೇರೆ ಭಾಷೆಗಳಲ್ಲೂ ಇದೆ. ಅಂಥವುಗಳನ್ನೂ ಪರಿಶೀಲಿಸಬೇಕು. ಸಾರಾಸಗಟಾಗಿ ಬಿಡೋದು ಬೇಕಿಲ್ಲ. ಆದ್ರೆ ಅದು Secondery Source ಅನ್ನೋದನ್ನ ಮರೆಯಬಾರದು....ಅಲ್ಲೇ ನಿಂತು ದೊಡ್ಡ ಸಿದ್ಧಾಂತವನ್ನು ಕಟ್ಟೋಕಾಗಲ್ಲ ಅಷ್ಟೆ.

ಪ್ರಶ್ನೆ: ಮಹಿಳಾ ಸಾಹಿತ್ಯ ಚರಿತ್ರೆಯ ರಚನೆಯ ಈ ಸಂದರ್ಭದಲ್ಲಿ ಈಗಾಗಲೇ ಬೇಕಾದಷ್ಟು ಸಾಹಿತ್ಯ ಚರಿತ್ರೆ ರಚನೆ ಆಗಿವೆ. ವಿಮರ್ಶೆಗಳು ತುಂಬಾ ಪ್ರಭಾವಶಾಲಿ ಪಾತ್ರವಹಿಸಿವೆ. ಇವುಗಳಿಗೆ Respond ಮಾಡೀನೇ ಕೆಲಸ ಮುಂದುವರಿಯ ಬೇಕಾಗುತ್ತೆ ಅಲ್ವ....

ಕಿ.ರಂ: ಹೌದು, ಹೌದು....ಇದನ್ನು ಎರಡು ತರ ನೋಡಬಹುದು. ಒಂದು, respond ಮಾಡಿ ಮುಂದುವರಿಯುವುದು ಎರಡು, ನೀವು ಮಾಡುವುದೇ respond ನೆಲೆಯಲ್ಲಿರುತ್ತೆ ಅನ್ನೋದು...ಅಂತಹ ಒಂದು ತಾತ್ವಿಕವಾದ ನೆಲೆಯನ್ನು ನಿರ್ಮಾಣ ಮಾಡೋದು ಈಗ

ತುಂಬಾ ಮುಖ್ಯ......ಈ respondನ ಮಾದರಿ ತುಂಬಾ ಮುಖ್ಯವಾದದು.... ಯಾಕೆಂದರೆ ಇದುವರೆಗಿನ ರಚನೆಗಳು ಪುರುಷನ Dominationನ್ನನ್ನು Domination ಅಂತ ಹೇಳದೆ, Subardinationನ್ನು Subordination ಅಂತ ಹೇಳದೆ, Sobordinationಗೆ ಪರ್ಯಾಯಗಳಾದ ಪ್ರೀತಿ, ಶೃಂಗಾರ ಇತ್ಯಾದಿ ಬೇರೆ ಬೇರೆ ಕಲ್ಪನೆಗಳನ್ನು ಕಟ್ಟಿ ಹೇಳಲಾಗಿದೆ... ಅವುಗಳನ್ನ ಪರಿಶೀಲಿಸುವುದು ಮುಖ್ಯ ಉದ್ದೇಶ ಆಗಬೇಕು... ಹಾಗಾಗಿ ಸ್ತ್ರೀಯ ಕುರಿತ ಭಾವುಕವೂ, ಆರಾಧಕವೂ ಆಗಿರುವ ನೆಲೆಗಳಿಂದ ನಾವು ಸಾಹಿತ್ಯ ಚರಿತ್ರೆಯನ್ನು ಬಿಡಿಸಬೇಕು... ನೋಡಿ, ಸಾಹಿತ್ಯ ಚರಿತ್ರೆ ಅನ್ನೋದು ಬಾಳಾ ದೊಡ್ಡ Concept. ನಾನು ಮಾತಾಡ್ತಿರೋದು ಅಂತಿಮ ಅಂತ ಅಲ್ಲ. ಇವುಗಳ ಬಗ್ಗೆ ಬಹಳ ಚರ್ಚೆ ನಡೀಬೇಕು. ಅದು ಇಲ್ಲಿಂದ್ಲೇ ಆರಂಭ ಆಗ್ಲಿ ಬಿಡಿ.....Domination-Subordination ಅನ್ನೋದು ಎಲ್ಲ ಕಾಲದಲ್ಲಿ ಒಂದೇ ತರ ಇರೋಲ್ಲ...೧೨ನೇ ಶತಮಾನದಲ್ಲಿ ಒಂಥರಾ....೧೫ರಲ್ಲಿ ಇನ್ನೊಂದು ತರಾ ಆಗಿರುತ್ತೆ. ಇದು ಮಹಿಳಾ ಸಾಹಿತ್ಯ ಚರಿತ್ರೆಯ ಮುಖ್ಯವಾದ ಅಂಶವಾಗಬೇಕು.....ವಿವಿಧ ಕಾಲಘಟ್ಟದ ಡಾಮಿನೇಷನ್ ಸಬಾರ್ಡಿನೇಷನ್‌ಗಳ ಸ್ವರೂಪವನ್ನು ಗುರುತಿಸುವುದು.... ಚರಿತ್ರೆಯ ನಿಜವಾದ ಚಲನಶೀಲತೆ ಇಲ್ಲಿ ಗೊತ್ತಾಗುತ್ತೆ. ಇಲ್ಲದೆ ಹೋದ್ರೆ ಸಾಹಿತ್ಯ ಚರಿತ್ರೆ ಕತೆ ಬರೀಲಿಲ್ವೆ ಕವನ ಬರೀಲಿಲ್ವೆ ಅಂತ ಇಬ್ಬರು ಮೂವರು ಕವಿಗಳನ್ನ ತೋರಿಸಿ ಮುಗಿಸಬೇಕಾಗುತ್ತೆ. ಸಾಮಾನ್ಯವಾಗಿ ಈಗ ಆಗ್ತಿರೋದು ಹಾಗೆ.....Sampleಗಳನ್ನ ನೋಡೋದು....

ಪ್ರಶ್ನೆ: ಸಾರ್ ಹಾಗೆ ನೋಡೋದಾದ್ರೆ ಸಾಹಿತ್ಯ ಅನ್ನೋದು-ಜೀವನದ ಸಂದರ್ಭದಲ್ಲಿ ಅಂತ ಒಂದು Sample ಅಲ್ಲವೆ....

ಕಿ.ರಂ: ಇಲ್ಲ ಸಾಹಿತ್ಯ ಅನ್ನೋದು ಹಾಗಿರಲ್ಲ ಅಂತಲೇ ನಾನು ಹೇಳೋದು. ಸಾಹಿತ್ಯ ಯಾವಾಗ್ಲಾದ್ರೂ ಸೃಷ್ಟಿಯಾಗಿರಲಿ, ಯಾರಾದ್ರೂ ಮಾಡಿರಲಿ...ಅದನ್ನ ನಾವು ಓದುವ ಕ್ರಮ ಓದಬೇಕಾದ ಕ್ರಮ ಇರೋದರಿಂದ, ಅದು ಭಾಷೆಯಿಂದ ನಿರ್ಮಾಣ ಆದ್ದರಿಂದ.... ಹಾಗೆ ಅದು ಏಕೋದ್ದೇಶದಿಂದ ಉಳಿಯೋಕ್ಕಾಗಲ್ಲ.... ಸಾಹಿತ್ಯ ಅನ್ನೋದು ಭಾಷೆಯ ಬೇರೆ ಬೇರೆ ಸಾಧ್ಯತೆಗಳಿಂದ ರೂಪಿತವಾಗೋದರಿಂದ ಅದರ energy ಬಹುಮುಖವಾದದ್ದು.

ಪ್ರಶ್ನೆ: ಈ ಪ್ರಶ್ನೆಯ ಉದ್ದೇಶ ಇಷ್ಟೆ ಸಾರ್. ಗಾರ್ಗಿ, ಮೈತ್ರೇಯಿಯರಿಂದ ಭಾರತದ ಮಹಿಳೆಯರನ್ನು ಕಾಣೋಕಾಗಲ್ಲ ಅನ್ನೋವಾಗ ಅಕ್ಕಮಹಾದೇವಿಯಿಂದ ಕಾಣೋಕ್ಕೆ ಸಾಧ್ಯವೇ ಅಂತ...

ಕಿ.ರಂ: .... ಒಂದಷ್ಟು ಕಾಣಬಹುದು..... Some Extent ... ಕಾಣಬೇಕು ನಾವು, ಯಾಕೆಂದರೆ ಅವಳು ವೈಯುಕ್ತಿಕವಾಗಿ ಎಷ್ಟು ಒತ್ತಡದಿಂದ ಬರೆದಿದಾಳೋ ಅಷ್ಟೇ ಸಾಮಾಜಿಕ ಒತ್ತಡದಿಂದ ಕೂಡ ಬರೆದಿದಾಳೆ. ಸಾಮಾಜಿಕವಾಗಿಯೂ ಅವಳು ನಿಜವೆನ್ನುವ ಹಾಗೆ ಮಾತಾಡ್ತಾಳೆ....

ಪ್ರಶ್ನೆ: ಸಮಸ್ಯೆ ಅಂದ್ರೆ ಅವೆರಡನ್ನು ಅಕ್ಕಮಹಾದೇವಿಯಲ್ಲಿ ಬೇರೆ ಮಾಡಿಕೊಳ್ಳೋಕೆ ಆಗ್ದೆ ಇರೋದು.

ಕಿ.ರಂ: ಹೌದು ಇದು ಸಾಹಿತ್ಯದಲ್ಲಿಯೇ, ಅನುಭಾವದ ಅಭಿವ್ಯಕ್ತಿಯಲ್ಲಿಯೇ ಬಹಳ ಮುಖ್ಯವಾದ ಲಕ್ಷಣ. ಇಷ್ಟು ಸಾಮಾಜಿಕ, ಇಷ್ಟು ವೈಯಕ್ತಿಕ ಅಂತ ಗೆರೆ ಕೊಯ್ದು ನೋಡೋಕಾಗಲ್ಲ... ಆದ್ರೆ ಅವಳು ಸಂಸಾರವನ್ನು ಕುರಿತು ಆಡಿರುವ ಮಾತುಗಳು ಬಹಳ ಗಂಭೀರವಾದವು ಅಂತ ಇವತ್ತಿಗೂ ಅನ್ನಿಸುತ್ತಲ್ವ? ಅದನ್ನು ಅವಳು ವೈಯಕ್ತಿಕವಾಗೇ ಆಡಿರ್ಲಿ ಪರವಾಗಿಲ್ಲ..... ಅದು ಖಂಡಿತ ಅವಳೊಬ್ಬಳದೇ ಪ್ರಶ್ನೆ ಅಲ್ಲ... ಜೊತೆಗೆ ಇನ್ನೊಂದು ಕಾರಣ ಇದೆ... ಒಂದು ಕಾಲದಲ್ಲಿ ಆ ಥರ ದನಿ ಮಾಡುವವರೇ ದೊಡ್ಡ ಸಂಖ್ಯೆಯಲ್ಲಿರಲ್ಲ. ಅಂತಹ ಸಮಯದಲ್ಲಿ ನಾವು ಅವರನ್ನು ಆ ಸಮುದಾಯದ representation ಅಂತ ತಿಳೀಲೇಬೇಕು. ಇದು ದಲಿತರದ್ದಾಗಲಿ, ಅಲ್ಪಸಂಖ್ಯಾತರದ್ದಾಗಲಿ, ಮಹಿಳೆಯುರದ್ದಾಗಿರಲಿ... ಅದು ಎಷ್ಟೇ ಸಣ್ಣದಾಗಿರಲಿ ಅದನ್ನು ಸಾಮುದಾಯಿಕ ದನಿಯಾಗಿ Re-Construct ಮಾಡಬೇಕಾಗುತ್ತೆ... ಹಾಗೆ ಮಾಡ್ಕೊಳ್ಳೋದರಿಂದ ನಿಜವಾಗಿಯೂ ಒಂದು ಸಮುದಾಯವನ್ನು ಅರ್ಥಪೂರ್ಣ ಮಾಡಿದ ಹಾಗೆ ಆಗುತ್ತೆ.....ಇಲ್ಲಿ ನಾನು ಏನೂ ಇಲ್ಲದಿರುವ ಕಡೆ ಅವಕಾಶ ಕೊಡ್ಬೇಕು ಅನ್ನೋಥರಾ ಹೇಳ್ತಿಲ್ಲ..... ನಿಜವಾಗಿಯೂ ಅವರಿಗೆ ಸಿಗಬೇಕಾಗಿದೆ. ಸಿಗಬೇಕು ಅಷ್ಟೆ.

ಪ್ರಶ್ನೆ: ದನಿ ಇಲ್ಲದಲ್ಲಿ ದನಿಯನ್ನು ಕಲ್ಪಿಸುವ, ಸಣ್ಣ ದನಿಯನ್ನ ಪ್ರಾತಿನಿಧಿಕವಾಗಿಸುವ ಸಂದರ್ಭದಲ್ಲಿ ಮಾಹಿತಿ ಸಂಗ್ರಹದ ವಿಧಾನ ಯಾವುದಾಗಿರಬೇಕು ಅಂತ ನಿಮ್ಮ ಅಭಿಪ್ರಾಯ.

ಕಿ.ರಂ. ಇದು ಬಹಳ ಮುಖ್ಯ. ಇದುವರೆಗಿನ ಮಾಹಿತಿ ಸಂಗ್ರಹಕ್ಕಿಂತ ಭಿನ್ನವಾದ ಮೂಲಗಳಿಗೆ ಹೋಗಬೇಕು. ಹೊಸ ಹೊಸ ಪ್ರಯೋಗಗಳನ್ನು ಮಾಹಿತಿ ಸಂಗ್ರಹದ ಹಂತದಲ್ಲೇ ಮಾಡಬೇಕು. ಇದುವರೆಗೆ ನಾನು ಮಾತಾಡಿದ್ರಲ್ಲಿ ಅದೂ ಬಂದಿದೆ. ಕಲ್ಪಿತ ಸಾಹಿತ್ಯ ಚರಿತ್ರೆ ಬರೆಯುವಾಗ ಇದರ ಬಗ್ಗೆ ವಿಶೇಷ ಗಮನ, ಶ್ರಮ ಎರಡೂ ಮುಖ್ಯ. ಯಾಂತ್ರಿಕವಾಗಿ ಮಾಹಿತಿ ಸಂಗ್ರಹಕ್ಕೋದರೆ ಯಾಂತ್ರಿಕ ಮಾಹಿತಿಯೇ ಸಿಗೋದು. ಆಗ ಅದರ ಫಲಿತ ಭಿನ್ನವಾಗೋಕೆ ಸಾಧ್ಯವೇ ಇಲ್ಲ. ಇಲ್ಲಿ ಸೂಕ್ಷ್ಮವಂತಿಕೆ, ಜಾಣ್ಮೆ ಎರಡೂ ಬಳಸಿ ಮಾಹಿತಿಯನ್ನು ಕ್ರಿಯೇಟ್ ಮಾಡಬೇಕು.

●

## ಅನುಭವ ಕಥನ

ಗೀತಾ ನಾಗಭೂಷಣ

ಗೆಳತಿ ಎಚ್.ಎಸ್.ಶ್ರೀಮತಿಯ ಪತ್ರ ಟೇಬಲ ಮೇಲೆ ಬಿಚ್ಚಿಕೊಂಡಿತ್ತು. ಎರಡು ಸಲ ಅದನ್ನೋದಿದ ನನ್ನ ಮನಸ್ಸು ಅದರ ಸುತ್ತಲೇ ಗಿರಕಿ ಹೊಡೆಯುತ್ತಿತ್ತು. ತಮ್ಮ ಪತ್ರಿಕೆಗೆ ನನ್ನ ಅನುಭವ ಕಥನದ ಬಗ್ಗೆ ಲೇಖನ ಕೇಳಿ, ಆಗ್ರಹಿಸಿ ಬರೆದ ಪತ್ರ ಅದು.

ನನ್ನ 'ಅನುಭವ ಕಥನ' ಬರೆದು ಕೊಡಬೇಕೇ ಬೇಡವೇ? ಪತ್ರಿಕೆಗಳಿಗೆ ಆ ಮೂಲಕ ಓದುಗರಿಗೆ ನನ್ನ ಅನುಭವಗಳನ್ನು ಅರಿಯುವ ಜರೂರತ್ತು ಇದೆಯೆ? ಅನ್ನುವ ಪ್ರಶ್ನೆಗಳು ಏಳುತ್ತಿರುವಾಗಲೇ ತಟ್ಟನೆ ಒಂದು ವಿಷಯ ಹೊಳೆಯಿತು. ಈಗೀಗ ಈ ಪತ್ರಿಕೆಗಳು ಇದೇ ರೀತಿಯ ಲೇಖನಗಳನ್ನು ಬೇರೆ ಬೇರೆ ಶೀರ್ಷಿಕೆಯಡಿಯಲ್ಲಿ ಕೇಳುತ್ತಿರುವುದು ಯಾಕೆ? ಈ ಪತ್ರಿಕೆಗಳು ಬರಹಗಾರ್ತಿಯರ ಬದುಕನ್ನು ಬೆತ್ತಲಾಗಿಸುವ ಹುನ್ನಾರು ನಡೆಸಿವೆಯೇ? ಲೇಖಕಿಯರನ್ನು ಸಾರ್ವಜನಿಕ ಕಟಕಟೆಯಲ್ಲಿ ನಿಲ್ಲಿಸಿ 'ನಿನ್ನ ವೈಯಕ್ತಿಕ ಮತ್ತು ಸಾಹಿತ್ಯಿಕ ಅನುಭವಗಳೇನು? ನಿನಗೆ ಬರೆಯಲು ತೊಡಗಿಸಿದ ಅನಿವಾರ್ಯತೆ ಎಂಥದ್ದು? ಪರಿಸರದ ಪ್ರಭಾವ ಯಾವ ರೀತಿಯದು?' ಎಂದು ಕೇಳುವುದಕ್ಕೆ ಉತ್ತರ ರೂಪವಾಗಿ ಈ ಲೇಖನ ಸಿದ್ಧಗೊಳ್ಳುತ್ತಿದ್ದರೂ ಇದೆಲ್ಲ ಹೇಳುವ ಜರೂರತ್ತು ಖರೇವಂದ್ರ ಲೇಖಕಿಗೆ ಇದೆಯೆ? ಎನ್ನುವ ಅಳಕೂ ನೆಗ್ಗಿ ಮುಳ್ಳಿನಂತೆ ಚುಚ್ಚುತ್ತಿರುವುದನ್ನು ಮುಚ್ಚಿಡಲು ಮನಸ್ಸು ಬರುತ್ತಿಲ್ಲ.

ನನ್ನ ಇತ್ತೀಚಿನ ಬೃಹತ್ ಕಾದಂಬರಿ 'ಬದುಕು' ಬಿಡುಗಡೆಯಾದಾಗಿನಿಂದ ಆಗಾಗ, ಅವರಿವರಿಂದ, ಅಲ್ಲಲ್ಲಿ 'ಇದು ನಿಮ್ಮ ಜೀವನ ಚರಿತ್ರೆಯೆ?' ಅನ್ನುವ ಪ್ರಶ್ನೆಗಳು ಮೆಲ್ಲಗೆ ಎದುರಾಗುತ್ತಿದೆ. ಯಾಕೆ ಜನರಲ್ಲಿ ಈ ಗುಮಾನಿ ಹುಟ್ಟಿದೆ? ಗೊತ್ತಿಲ್ಲ. ಒಂದು ದೊಡ್ಡ ಕಾದಂಬರಿ ಬರೆದ ಮಾತ್ರಕ್ಕೆ ಅದು ಆ ಲೇಖಕಿಯ ಆತ್ಮಚರಿತ್ರೆಯೇ ಆಗಿರಬಹುದು ಅನ್ನುವ ಸಂಶಯ ಈಗೀಗ ಉಳಿದವರಲ್ಲಿ ಹುಟ್ಟುತ್ತಿರುವುದು ಸಾಮಾನ್ಯ. ಮರಾಠಿಯಲ್ಲಿ ಇತ್ತೀಚೆಗೆ ತಮ್ಮ ಜೀವನ ಚರಿತ್ರೆಯನ್ನು ಕಾದಂಬರಿಯ ಸ್ವರೂಪದಲ್ಲಿ ಬರೆಯುವ ಫ್ಯಾಶನ್ನು ಶುರುವಾಗಿದೆ ಯಲ್ಲ, ಅದರ ಪ್ರಭಾವವಿರಬಹುದೇನೋ ಅನ್ನುವ ಗುಮಾನಿ ನನಗೂ ಇದೆ. ಆದರೆ ಈ ಆತ್ಮಚರಿತ್ರೆ ಬರೆಯುವ ಕೈಗಳು ಅದೆಷ್ಟು ಪ್ರಾಮಾಣಿಕವಾಗಿ, ವಸ್ತುನಿಷ್ಟವಾಗಿ, ತಮ್ಮ ಬದುಕನ್ನು ಬಿಚ್ಚಿಡುತ್ತವೆ ಅನ್ನುವ ಸಂದೇಹ ನನಗಿದೆ. ತಮ್ಮ ಜೀವನದಲ್ಲಿಯ ಒಳ್ಳೆಯದನ್ನೇ

ವೈಭವೀಕರಿಸಿ, ಕೆಟ್ಟಿದ್ದನ್ನು ನೆಲದೊಳಗೆ ಹೂಳಿ, ಸಾರಿಸುವ ಪ್ರಯತ್ನಗಳೇ ಬಹಳಷ್ಟು ನಡೆಯುತ್ತಿರುವುದು ಸುಳ್ಳಲ್ಲ. ಗತವನ್ನು ಕೆದಕುವುದರಿಂದ ಗಳಿಸಿಕೊಂಡಿರುವ ಸಾಮಾಜಿಕ ಸ್ಥಾನಮಾನಗಳು ಎಲ್ಲಿ ಕುಸಿದುಬಿದ್ದು ನೆಲಸಮವಾಗುತ್ತವೋ ಎಂಬ ಭಯ ಆ ಮನಸ್ಸುಗಳನ್ನು ಕಾಡುತ್ತಿರಬಹುದೇನೋ..

ಅದೇನೇ ಇರಲಿ, ನನ್ನ ಕಾದಂಬರಿ 'ಬದುಕು' ಅಂತೂ ನನ್ನ ಆತ್ಮಚರಿತ್ರೆ ಖಂಡಿತ ಅಲ್ಲ. ನನ್ನ ಇನ್ನುಳಿದ ಹಿಂದಿನ ಕಾದಂಬರಿಗಳಂತೆ ಇದು ಕೂಡ ಒಂದು ಕಾದಂಬರಿ ಅಷ್ಟೇ. ಗಾತ್ರದಲ್ಲಿ ದೊಡ್ಡದಾದುದಕ್ಕೆ ಅದು ಜೀವನ ಚರಿತ್ರೆಯೇ ಆಗಬೇಕೆಂಬ ಯಾವ ಕಾನೂನೂ ಇಲ್ಲ.

ನನಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಬಂದಾಗ ಒಬ್ಬ ಮಹನೀಯರು ಹಾಕಿದ ಪ್ರಶ್ನೆ ನನ್ನೆದೆಯಲ್ಲಿ ಗೆರೆ ಕೊರೆದಂತಿದೆ. 'ಹೆಂಗಸರ ಶೋಷಣೆ, ಪ್ರತಿಭಟನೆಯ ಬಗ್ಗೆ ಇಷ್ಟು ಕಠೋರವಾಗಿ ಬರೆಯುವ ನೀವು ಎಷ್ಟು ಮೈಲ್ಡ್ ಆಗಿರುವಿರಲ್ಲ?" ಅಂತ. ಅಂದರೆ ಮಹಿಳೆಯರ ಮೇಲಿನ ದೌರ್ಜನ್ಯ ದಬ್ಬಾಳಿಕೆಯ ವಿರುದ್ಧ ಬಂಡಾಯದ ದನಿಯೆತ್ತುವ ಬರಹಗಾರ್ತಿಯರೆಲ್ಲ ವೈಲ್ಡ್ ಆಗಿಯೇ ಇರಬೇಕೆ? ಗೊತ್ತಿಲ್ಲ!

ಹಿಂದೊಮ್ಮೆ ಮಾಸ್ತಿಯವರ 'ಚಿಕ್ಕವೀರ ರಾಜೇಂದ್ರ' ಐತಿಹಾಸಿಕ ಕಾದಂಬರಿಯ ಬಗ್ಗೆ ನಾನು ನನಗನ್ನಿಸಿದ್ದನ್ನು ಪ್ರಾಮಾಣಿಕವಾಗಿ ಬರೆದ ಲೇಖನ, ಅದು ಗೆಳೆಯ ಭಗವಾನ್ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಮರ್ಶಾ ಸಂಕಲನದಲ್ಲಿ ಸೇರಿಸಿ ಪ್ರಕಟಿಸಿದಾಗ ಇಡೀ ಕನ್ನಡ ಸಾಹಿತ್ಯಲೋಕದಲ್ಲಿ ಹಲಚಲ್ ಉಂಟುಮಾಡಿತು. ಯಾವ ಯಾವುದೋ ಕಾರಣಕ್ಕಾಗಿ, ಯಾರ್‍ಯಾರಿಗೋ ಅದು ಚುಚ್ಚಿ, ಗಾಸಿಮಾಡಿ ವಾದ ವಿವಾದಕ್ಕೆಡೆ ಮಾಡಿ ಕೊಟ್ಟಿತ್ತು. ಬೇರೆಯವರ ಮಾತು ಹಾಗಿರಲಿ, ಬುದ್ಧಿಜೀವಿಯೆನ್ನಿಸಿಕೊಂಡಿದ್ದ ಹಿರಿಯರೊಬ್ಬರು ನನ್ನ ವಿರುದ್ಧ ಕತ್ತಿ ಮಸೆದದ್ದು ಈಗ ಬರೀ ನೆನಪು. ಸ್ವಲ್ಪ ದಿನ ಪತ್ರಿಕೆಗಳಲ್ಲಿ ಪರ, ವಿರುದ್ಧ ಚರ್ಚೆಗಳಾದವು. ವಾದ ವಿವಾದಗಳಾದುವು. ಏನೇನೋ ಆದುವು! ಆದರೆ ಒಂದು ಮಾತು, ಆ ಕೃತಿಯಲ್ಲಿ ಒಬ್ಬ ಶೂದ್ರರಾಜನ ದೌರ್ಬಲ್ಯಗಳನ್ನು ಮಾತ್ರವೇ ಎತ್ತಿ ತೋರಿಸಿ ವೈಭವೀ ಕರಿಸಿದ ಸಂಗತಿ ಅದನ್ನು ಓದಿದ ಯಾರಿಗಾದರೂ ಮೇಲು ನೋಟಕ್ಕೆ ತಿಳಿದು ಬರುತ್ತದೆ. ಮಾಸ್ತಿಯವರ ಬಗ್ಗೆ ಗೌರವಾದರಗಳು ನನಗೂ ಇವೆ. ಆದರೆ ಈ ಒಂದು ಕಾದಂಬರಿಯಲ್ಲಿಯ ಕೆಲ ಅಂಶಗಳ ಬಗ್ಗೆ ನನಗೆ ಅನುಮಾನಗಳಿದ್ದು ಅವನ್ನು ನನ್ನ ಲೇಖನದಲ್ಲಿ ಖುಲ್ಲಮ್‌ಖುಲ್ಲಾ ಬರೆದಿದ್ದೆ ಅಷ್ಟೇ. ಆದರೆ ಹೊಸದಾಗಿ ಬಿರಿದರಳುವ ಪ್ರತಿಭೆಗಳನ್ನು ಚಿವುಟಿ ಹಾಕುವ ಹುನ್ನಾರು ಈ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಚರಿತ್ರೆಯುದ್ದಕ್ಕೂ ಕರಡಿ ಕುಣಿತ ಕುಣಿದು ಬಂದದ್ದು ಸುಳ್ಳಲ್ಲ! ಅದರಲ್ಲಿಯೂ ಒಬ್ಬ ಮಹಿಳೆ, ಒಂದು ಕ್ಷೇತ್ರದಲ್ಲಿ ಏನನ್ನಾದರೂ ಸಾಧಿಸಲು ಹೊರಟರೆ ಅವಳಿಗೆ ಅಡ್ಡಗಾಲು ಹಾಕಲು ಬಹುತೇಕ ಗಂಡಸರ ಮನಸ್ಸುಗಳು ಸದಾ ಸಿದ್ಧವಾಗಿಯೇ ನಿಂತಿರುತ್ತವೆ. ಯಾಕೆ ಮಹಿಳೆಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿಲ್ಲವೆ? ಒಂದು ಪುರುಷ ರಚಿತ ಕೃತಿಯನ್ನು ಓದಿ, ತನಗನಿಸಿದ್ದನ್ನು ಹೊರಹಾಕುವ ಹಕ್ಕು ಅವಳಿಗಿಲ್ಲವೆ?

ಆದರೆ ನಾನಾಗ ಆ ಹಿರಿಯ ಬುದ್ಧಿಜೀವಿಯ ಜೊತೆ ಜಗಳಕ್ಕೆ ನಿಲ್ಲಲಿಲ್ಲ. ಕೃತಿಯ

ಬಗೆಗಿನ ನನ್ನ ಅನಿಸಿಕೆಗಳಂತೂ ಅದೇ ಪುಸ್ತಕದಲ್ಲಿ ಬರುವ ವಾಕ್ಯಗಳನ್ನೇ ನಿದರ್ಶನಾರ್ಥವಾಗಿ ಕೋಟ್ ಮಾಡಿ ಬರೆದಿದ್ದೆನಲ್ಲ. ಅಲ್ಲಿಗೆ ನನ್ನ ಕೆಲಸ ಮುಗಿದಿತ್ತು. ಅದು ಯ್ಯಾರ್ಯಾರ ಬುಡಕ್ಕೋ ಬಿಸಿನೀರು ಹರಿಸಿದ್ದರೆ ಅದರಲ್ಲಿ ನನ್ನದೇನು ತಪ್ಪು? ಅಂತ ಯೋಚಿಸಿ ನಾನು ನಿರ್ಲಿಪ್ತಳಾದೆ.

ಹೌದು. ಕಿರಿಯ ಸಾಹಿತಿ, ಅದರಲ್ಲೂ ಮಹಿಳೆ ದಿಟ್ಟವಾಗಿ ಬರೆಯಲು ಹೊರಟಾಗ ಬರುವ ಎಡರು ತೊಡರುಗಳು ನೂರಾರು ಬಗೆಯವು. ಅದೂ ಪುರುಷರೇ ಹೆಚ್ಚಾಗಿ ಇಂಥ ಅಡ್ಡಿ ಆತಂಕಗಳನ್ನೊಡ್ಡಿ ಲೇಖಕಿಯರ ಹಾದಿಯಲ್ಲಿ ಮುಳ್ಳುಗಳನ್ನು ಹರವುವ ಹುನ್ನಾರು ನಡೆಸುತ್ತ ಬಂದಿರುವುದು ಅವರ ಬಗ್ಗೆ ಅಯ್ಯೋ ಅನ್ನಿಸುತ್ತದೆ.

ಹಾಗೆ ನೋಡಿದರೆ ಸಿಟ್ಟು ಸಿಡುಕು, ತಿರಸ್ಕಾರ ಅವಮಾನಗಳು ಶೂದ್ರವರ್ಗದಲ್ಲಿ ಹುಟ್ಟಿಬಂದ ನನಗೆ, ನನ್ನಂಥವರಿಗೆ ಹೊಸದೇನೂ ಅಲ್ಲ. ನಾನು ಸಣ್ಣವಳಿದ್ದಾಗ, ಶಾಲೆಗೆ ಹೋಗುವಾಗ ಅನುಭವಿಸಿದ ಹಾರುವರ ಹೆಂಗಸರ ಕೋಪತಾಪ ಆಗಾಗ ಬಂದು ನನ್ನ ನೆನಪಿನಂಗಳದಲ್ಲಿ ನಿಂತು ಕಳ್ಳ್ಯಮುಳ್ಳ್ಯ ಆಡುತ್ತಿರುವಾಗ ಅಂದಿನಂತೆ ಇಂದು ನನಗೆ ನೋವಾಗುವುದಿಲ್ಲ. ಆಗಿನಂತೆ ಅಬ್ಬರಿಸಿ ಅಳುವಂತಾಗುವುದಿಲ್ಲ. ಬದಲಾಗಿ ಒಂದು ಕಹಿ ನಗುವಿನ ಎಸಳು ನನ್ನ ತುಟಿಗಳ ಮೇಲೆ ಮೈಮುರಿಯುತ್ತದೆ. ಹಾಗೆಯೇ ಹಿಂದಿನ ಆ ದಿನಗಳು ಒಂದೊಂದಾಗಿ ಮುಂದೆ ಬರಲಾರಂಭಿಸುತ್ತವೆ.......

"ಏಃ ಶೂದ್ರ ಮುಂಡೇದೇ...ದೂರ ಕೂಡು ಅಕಾಡಿ...ನಮ್ಮ ಹುಡ್ರ ಸರಿಜೋಡಿ ಕುಂತು ಓದ್ತಿಯೇನೇ...ಥೂ...ಸಲಿಗಿ ಕೊಟ್ಟ ನಾಯಿ ತೆಲಿಮೂಸಿ ನೋಡಿತಂತ...ಈ ಕೆಳಮಂದೀಗೆಲ್ಲಾ ಸಮೀಪ ಕರ್ಕ್ಯೋಬ್ಯಾಡ್ರೋ ಅಂದ್ರ ನನ್ನ ಮಾತೆಲ್ಲಿ ಕೇಳ್ತಾನ ನನ್ನ ಮಗಾ...ನಮ್ಮ ಪಾರುಗೋಳ ಜತಿ ಅಕಿನೂ ಓದ್ಕೋಲಿ ಪಾಪ...ಅಂತಾನ...ಹಿಟ್ಟೂ ಬೂದಿ ಸಮಾಯೇನು?" ಅಂತ ಬೈಯ್ಯುತ್ತಿದ್ದಳು ಆ ಹಾರುವರ ಮಡಿ ಹೆಂಗಸು.

ಆ ಮಹಾತಾಯಿ ಹೀಗೆಯೆ ಯಾವಾಗಲೂ, ನನ್ನ ಮುಖ ಕಂಡರೆ ಸಾಕು ಅವಳ ಮುಖದ ತುಂಬ ಮುನಿಸು ಸರ್ರಂತ ಏರುತ್ತಿತ್ತು. ಮೊದಲೇ ಮಿರಿ ಮಿರಿ ಮಿಂಚುವ ಮಾರಿಯ ಹೆಂಗಸು. ಸಿಡುಕಿದರೆ ಅವಳ ಮಾರಿಯೆಲ್ಲ ಕೆಂಪಗಾಗುತ್ತಿತ್ತು. ಅಂಚು ಸೆರಗಿಲ್ಲದ ಕೆಂಪು ಸೀರೆಯ ಸೆರಗನ್ನು ತನ್ನ ಬೋಳು ನೆತ್ತಿಯ ಮೇಲೆ ಎಳೆದುಕೊಳ್ಳುತ್ತಾ ಅವಳು ಸಟಕ್ಕನೆ ಸಿಡುಕಿದರೆ ನನ್ನೆದೆ ನಡಗುತ್ತಿತ್ತು. ನಾನು ನನ್ನ ಪಾಟಿಚೀಲ ತಗೊಂಡು ಆಟು ದೂರ ಸರಿದು ಕೂಡುತ್ತಿದ್ದೆ. ಬಾಕಿ ಹುಡುಗರು ಮಿಟಿ ಮಿಟಿ ಅವಳ ಮುಖನೋಡುತ್ತಿದ್ದರು. ನನ್ನ ಕಣ್ಣಂಚು ನೆನೆಯುತ್ತಿತ್ತು.

ಅವಳ ಹೆಸರು ಸುಂದ್ರಾಬಾಯಿ. ಆ ಎದುರು ಮನೆಯ ಬಾಂಬ್ರ ಅಜ್ಜಿ. ಅಜ್ಜಿ ಅಂದರೆ ಮುದುಕಿಯೇನೂ ಆಗಿರಲಿಲ್ಲ. ಐವತ್ತರ ಆಸುಪಾಸಿನ ವಯಸ್ಸಿನ ಸ್ವಲ್ಪ ಸ್ಥೂಲಮೈಯ ಹೆಂಗಸು. ಮಗ, ಸೊಸೆ, ಮೊಮ್ಮಕ್ಕಳ ತುಂಬಿದ ಮನೆ. ಮಗ ಬಾಳಾಚಾರಿ ಭಡಜಿ ಮಾತ್ರ ತುಂಬ ಒಳ್ಳೆಯವನು. ನನ್ನನ್ನು ಕಂಡಾಗಲೆಲ್ಲ ಪ್ರೀತಿಯಿಂದ "ದಿನಾ ಸಾಲಿಗಿ ಹೋಗಲ ಕತ್ತಿದ್ಯಾಯಿಲ್ಲ? ಸಂಜಿ ಮುಂದ ನಮ್ಮ ಅಂಗಳದಾಗ ಬಂದು ನಮ್ಮ ಹುಡ್ರ ಜತಿ ಓದ್ಕೋತ ಕೂಡು..." ಅನ್ನುತ್ತಿದ್ದ.

ಸಂಜೆಯಾದರೆ ಮುಗಿಯಿತು. ನಮ್ಮ ಮನೆಯಲ್ಲಿ ಘಾಸಲೆಟ ಎಣ್ಣೆಯ ತಗಡಿನ ಚಿಮಣಿ ಹಚ್ಚಿಡುತ್ತಿದ್ದಳು ನಮ್ಮವ್ವ. ಒಲೆ ತೋಳಿನ ಮ್ಯಾಲೋ ಮಾಡದೊಳಗೋ ಕುಂತು ಉರಿಯುತ್ತ ಗಾಳಿಗೆ ಹೊಯ್ದಾಡುತ್ತ ಹೊಗೆ ಕಾರುತ್ತಿದ್ದ ಚಿಮಣಿಯ ಬೆಳಕಿನಲ್ಲಿ ನನಗೆ ಓದೋದು ಬರೆಯೋದು ಆಗುತ್ತಿರಲಿಲ್ಲ. ನಮ್ಮಲ್ಲಿ ಕಂದೀಲಿರಲಿಲ್ಲ. ಹಿಂಗಾಗಿ ನಾನು ಕತ್ತಲಾದರೆ ಆ ಬಾಂಬ್ರ ಮನೆಯ ಕಡೆಗೆ ನೋಡುತ್ತಿದ್ದೆ. ನಮ್ಮ ಎದುರಿನ ಅಟು ದೂರದ ಮನೆಯೇ ಭಟ್ಟರ ಬಾಳಾಚಾರಿಯದು. ಕಲಬುರ್ಗಿಯಲ್ಲಿಯ ಬಾಂಬ್ರ ಗಲ್ಲಿ ಅದು. ಮನಸಬದಾರರ ದೊಡ್ಡವಾಡೆ ಯಿದ್ದುದ್ದರಿಂದ ಮತ್ತು ಅವೆಲ್ಲ ವಠಾರದ ಮನೆಗಳನ್ನು ಅವರೇ ಬೇರೆ ಬೇರೆ ಮಂದಿಗೆ ಬಾಡಿಗೆ ಕೊಟ್ಟಿದ್ದರಿಂದ ಅದನ್ನು 'ಮಲಸಬದಾರ ಗಲ್ಲಿ' ಅಂತಲೇ ಕರೆಯುತ್ತಿದ್ದರು. ಮನಸಬದಾರರೂ ಬಾಂಬ್ರೇ ಆದ್ದರಿಂದ ಬಹಳಷ್ಟು ಮನೆಗಳನ್ನು ಬ್ರಾಹ್ಮಣರಿಗೇ ಬಾಡಿಗೆ ಕೊಟ್ಟಿದ್ದರಾದರೂ ಆ ಕೊನೆಯ ಮೂಲೆಯ ನಾಲ್ಕಾರು ಖೋಲ್ಲಿಗಳನ್ನು ಅವರಲ್ಲಿ ಕೆಲಸ ಮಾಡುವ ಆಳುಗಳಿಗೂ, ಮನೆಯ ಟಾಂಗಾವಾಲಾ ಶಾಮಣ್ಣನಿಗೂ, ನಮ್ಮಪ್ಪನಿಗೂ ಮತ್ತು ತರಕಾರಿ ಮಾರುವ ಸಾಳೇರ ಮಾರುತಿಗೂ, ದರ್ಜಿ ತುಕಾರಾಮನಂಥ ಶೂದ್ರರಿಗೂ ಕೊಟ್ಟಿದ್ದರು.

ಬದುಕು ಸಿಹಿಕಹಿಗಳ ಮಿಶ್ರಣ ಅನ್ನುವ ಮಾತೊಂದಿದೆ. ಆದರೆ ನನ್ನ ಪಾಲಿಗೆ ಬಂದದ್ದು ಮಾತ್ರ ಕಹಿಯೇ. ಬೇವುಬೆಲ್ಲಗಳ ಮಿಶ್ರಣದಲ್ಲಿ ನನಗೆ ದಕ್ಕಿದ್ದು ಬಹುಪಾಲು ಬೇವೇ. ಅಲ್ಲಲ್ಲಿ ಅಷ್ಟಿಷ್ಟು ಬೆಲ್ಲ ದೊರೆತರೂ ಅದರ ಸಿಹಿ, ಬೇವಿನ ದಟ್ಟ ಕಹಿಯಲ್ಲಿ ಕರಗಿಯೇ ಹೋದಂತಾಗಿದೆ. ನನ್ನ ಈ ಐವತ್ತೊಂಬತ್ತು ವರ್ಷದವರೆಗೆ ಬದುಕು ನನಗೆ ಕಲಿಸಿದ ಪಾಠ ಎಂದೆಂದಿಗೂ ಮರೆಯುವಂಥದ್ದಲ್ಲ. ಆಗಾಗ ಮೆಲುಕಾಡಿಸುವಂಥದ್ದು ಮೆಲುಕಾಡಿಸುತ್ತಲೇ ಮಕ್ಕಳಿಗೆ, ಮೊಮ್ಮಕ್ಕಳಿಗೆ ವಿವರಿಸುವಂಥದ್ದು, ಎಚ್ಚರಿಸುವಂಥದ್ದು!

ಈ ಬದುಕು ಎಂಬುದೇ ಬಹುರೂಪಿ. ಒಬ್ಬೊಬ್ಬರ ಕಣ್ಣಿಗೆ ಒಂದೊಂದು ಬಗೆಯಾಗಿ ಗೋಚರಿಸುತ್ತ ಮಾಯಾಮೃಗದಂತೆ ಮುಂದೆ ಮುಂದೆ ಜಿಗಿಯುತ್ತಲೇ ಇರುತ್ತದೆ. ಇದೊಂದು ಚಂದದ ಕನಸು ಅನ್ನುತ್ತಿರುವಾಗಲೇ ಏಕದಂ ಕೆಟ್ಟದ್ದು, ಕುರೂಪವಾದದ್ದು ಎದುರಾಗುತ್ತದೆ. ಇದೊಂದು ಸುಖದ ಸುಪ್ಪತ್ತಿಗೆ ಅಂತ ಮೈ ಹೊರಳಿಸುತ್ತಿರುವಾಗಲೇ ಧಡಕ್ಕನೆ ಪ್ರಪಾತಕ್ಕೇ ತಳ್ಳಿಬಿಡುತ್ತದೆ. ಇದೊಂದು ಸುಂದರವಾದ ಕೇದಿಗೆಯ ಬನವೆಂದು ಕೈಯಾಡಿಸುತ್ತ ಪರಿಮಳ ಹೀರಿಕೊಳ್ಳುತ್ತಿರುವಾಗಲೇ ಕೈಗೆ ಮಿಡಿನಾಗರಗಳ ಸ್ಪರ್ಶ ಎದೆ ನಡುಗಿಸುತ್ತದೆ. ಹೀಗೆ ಬೆಳದಿಂಗಳಾಗಿ, ಬಿಸಿಲಾಗಿ, ಕನಸಾಗಿ, ನನಸಾಗಿ, ಅಳುವಾಗಿ, ನಗುವಾಗಿ, ಮನುಷ್ಯನಿಗೆ ಪಾಠ ಕಲಿಸುತ್ತದೆ. ಈ ಬದುಕಿನ ಮುಂದೆ ನಾವು ಆಟದ ಗೊಂಬೆಗಳಿದ್ದಂತೆ. ಒಮ್ಮೆ ಕಂಕುಳಲ್ಲಿ ಕಚಗುಳಿಯಿಟ್ಟು ನಗಿಸಿದರೆ ಮತ್ತೊಮ್ಮೆ ಕಪಾಳಕ್ಕೆ ಹೊಡೆದು ಅಳಿಸುತ್ತದೆ.

ಹಾರುವರ ಓಣಿಯಲ್ಲಿದ್ದ ನಾನು ಅವರ ಹೆಣ್ಣುಮಕ್ಕಳಂತೆ ಶಾಲೆಗೆ ಹೋಗುವುದು ಮಾತ್ರ ಅದೇ ಗಲ್ಲಿಯ ಸುಂದ್ರಾಬಾಯಿಯಂಥ ಕೆಲ ಮಡಿವಂತ ಮನಸ್ಸುಗಳಿಗೆ ಪಸಂದಿರಲಿಲ್ಲ. ಓದುವುದರಲ್ಲಿ ಅವರ ಮಕ್ಕಳಿಗಿಂತ ತುಸು ಮುಂದಿದ್ದ ನನ್ನ ಬಗ್ಗೆ ಅವರಿಗೆ ಒಳಗೊಳಗೇ ಹೊಟ್ಟೆಕಿಚ್ಚಿತ್ತೋ ಏನೋ. ನನ್ನಂಥ ಬಡ, ನಿರ್ಗತಿಕ ಕುಟುಂಬದವರಿಗೆ ಅವರಲ್ಲಿಯೂ

ತಳವಾರ, ವಾಲೀಕಾರ, ನಾಟೀಕಾರರಂಥ ತೀರ ಹಿಂದುಳಿದ ಜಾತಿಯ ಹೆಣ್ಣುಮಕ್ಕಳಿಗೆ ಓದುವುದೇ ಒಂದು ಸಂಘರ್ಷವಾಗಿದ್ದ ದಿನಗಳವು. ಪುಸ್ತಕ, ಪಾಟಿ, ಕಾಪಿಗಳು ಸಾಕಾಗುವಷ್ಟಿರಲಿಲ್ಲ. ಮೀರಾ ಅನ್ನುವ ನನಗಿಂತಲೂ ಒಂದು ತರಗತಿ ಮುಂದಿದ್ದ ಕೋಮಟಿಗರ ನನ್ನ ಗೆಳತಿ ಓದಿಬಿಟ್ಟ ಹಳೆಯ ಪುಸ್ತಕಗಳನ್ನೇ ನಾನು ಕೇಳಿ ಪಡೆದು ಓದುತ್ತಿದ್ದೆ. ಹೊಸ ಪುಸ್ತಕ ಖರೀದಿಸಿ ಓದುವುದು ನನ್ನಂಥ ಬಡವಳಿಗೆ ಸಾಧ್ಯವಿರುತ್ತಿರಲಿಲ್ಲ. ರಾತ್ರಿ ಓದಲು ಮನೆಯಲ್ಲಿ ಕಂದೀಲಿನ ಬೆಳಕಿಗೂ ಗತಿಯಿರಲಿಲ್ಲ. ಹಾರುವರ ಮಕ್ಕಳು ಓದಲು ಕುಳಿತಾಗ ನಾನೂ ಅಲ್ಲಿ ಹೋಗಿ ಅವರಿಗೆ ತುಸು ದೂರದಲ್ಲಿ ಕುಂತು ಕಂದೀಲಿನ ಬೆಳಕಿನಲ್ಲಿ ಓದಿಕೊಳ್ಳುತ್ತಿದ್ದೆ. ಎಷ್ಟೇ ದೂರ ಕುಂತರೂ ಬತ್ತಿ ಹೊಸೆಯುತ್ತ ನಮ್ಮ ಮುಂದೆ ಕೂಡುತ್ತಿದ್ದ ಸುಂದ್ರಾಬಾಯಿ ಸಿಡುಕುವುದು ಮಾತ್ರ ತಪ್ಪುತ್ತಿರಲಿಲ್ಲ. ಇಂಥ ಈ ನೆನಪುಗಳು ಸಾಯುವುದಿಲ್ಲ. ಆಗಾಗ ಎದ್ದು ಬಂದು ಚುಚ್ಚುತ್ತಿರುತ್ತವೆ.

ನಾನು ಹುಟ್ಟಿದ್ದು ತಳವಾರದಂಥ ತೀರ ಕೆಳಜಾತಿಯ ಅನಕ್ಷರಸ್ಥ ಬಡಕುಟುಂಬದಲ್ಲಿ. ನನ್ನ ಅವ್ವ ಹಳ್ಳಿಯ ಹೆಣ್ಣುಮಗಳು. ಅಪ್ಪ ಕಲಬುರ್ಗಿಯ ಬಟ್ಟೆಗಿರಣಿಯಲ್ಲಿ ಕಾರ್ಮಿಕನಾಗಿದ್ದು, ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜೈಲು ಸೇರಿ ಬಂದವನು. ಹೀಗಾಗಿ ಬಡತನ, ಅನಕ್ಷರತೆಯ ಕೆಳವರ್ಗದ ಕುಟುಂಬದಲ್ಲಿ ಹುಟ್ಟಿದ್ದರೂ ನನ್ನ ಅಪ್ಪ ನನ್ನನ್ನು ಶಾಲೆಗೆ ಕಳಿಸಿದ್ದು ನನ್ನ ಸುದೈವ.

ಎಲ್ಲರಂತಲ್ಲದಿದ್ದರೂ ಸಾಧಾರಣವಾಗಿ ನನ್ನ ಬಾಲ್ಯ ಅಷ್ಟಿಷ್ಟು ಸುಖಕರವಾಗೇ ಇತ್ತು. ಅದು ಮುಗಿದು ತಾರುಣ್ಯದ ಹೊಸ್ತಿಲಿಗೆ ಕಾಲಿಟ್ಟಾಗ ಶುರುವಾಗುತ್ತದೆ ಬದುಕಿನ ಕಾಠಿಣ್ಯ. ಆಗಿನಿಂದಲೇ ಇದು ಹಂತಹಂತವಾಗಿ ಮನುಷ್ಯನಿಗೆ ಸವಾಲುಗಳನ್ನೊಡ್ಡಲು ಸಜ್ಜಾಗುತ್ತದೆ. ನನಗೂ ಇದು ಹೊರತಾಗಲಿಲ್ಲ. ಪುಸ್ತಕದ ಪ್ರೀತಿ, ಓದುವ ಅದಮ್ಯ ಆಸೆಯಿಂದಾಗಿ, ನಾನು ಮ್ಯಾಟ್ರಿಕ್ ಪಾಸಾದ ನಂತರ ಕಾಲೇಜಿಗೆ ಹೋಗುವ ಹಟಹಿಡಿದಾಗ, ನನ್ನನ್ನು ಗಂಡಸರ ನಡುವೆ ಕಲಬುರ್ಗಿಯ ಕಲೆಕ್ಟರ್ ಕಚೇರಿಯಲ್ಲಿ ನೌಕರಿಗೆ ದೂಡಿತು ಈ ಬದುಕು. ೧೯೬೦ರ ದಶಕದಲ್ಲಿ ಗುಲಬರ್ಗಾ ನಗರದ ಯಾವ ಕಚೇರಿಯಲ್ಲಿಯೂ ಹೆಣ್ಣುಮಕ್ಕಳು ಕ್ಲರ್ಕ್ ಆಗಿ ಕೆಲಸಮಾಡುತ್ತಿರಲಿಲ್ಲ. ಆಜೂಬಾಜು ಮಂದಿಯ ಕಟುನುಡಿ, ಬಂಧುಬಳಗದವರ ವಿರೋಧ, ಅವ್ವನ ಅಳು, ಬೈಗುಳಗಳನ್ನು ದೂರತಳ್ಳಿ ಅಪ್ಪನ ಪ್ರೋತ್ಸಾಹದಿಂದಾಗಿ ನಾನು ಕೆಲಸಕ್ಕೆ ಸೇರಿದೆ. ಆಫೀಸಿನಲ್ಲಿಯ ಗಂಡಸರೆಲ್ಲ ಹುಬ್ಬೇರಿಸಿದರು. ಕೆಲವರು ಕುಹಕನಗೆ ನಕ್ಕರು. ಆದರೆ ನನ್ನ ಸೆಕ್ಷೆನ್‌ಹೆಡ್ ಶ್ರೀ ಬಸಲಿಂಗಪ್ಪ ಅನ್ನುವ ಹಿರಿಯರು ಮಾತ್ರ ನನ್ನನ್ನು ಸೌಜನ್ಯದಿಂದಲೇ ನಡೆಸಿಕೊಂಡರು. ಇಂಗ್ಲೀಷ ಆಗ ಆಡಳಿತ ಭಾಷೆಯಾಗಿತ್ತು. ಅವರು ನನಗೆ ಇಂಗ್ಲೀಷಿನಲ್ಲಿ ಪತ್ರರಚನೆ, ನೆನಪೋಲೆ, ಆದೇಶ, ಜ್ಞಾಪನ, ವೇತನ ಬಿಲ್ಲು ಮೊದಲಾದವುಗಳನ್ನು ಕಲಿಸಿಕೊಟ್ಟರು.

ನಾನು ಬೆಳಿಗ್ಗೆ ಏಳು ಗಂಟೆಗೇ ಮನೆಬಿಟ್ಟು, ಶ್ರೀ ಶರಣಬಸವೇಶ್ವರ ಕಲಾ ಮಹಾವಿದ್ಯಾಲಯಕ್ಕೆ, ನನ್ನ ಗೆಳತಿಯರಿಬ್ಬರೊಂದಿಗೆ ನಡದೇ ಹೋಗುತ್ತಿದ್ದೆ. ಇಲ್ಲಿಂದಲೇ ಶುರುವಾಯಿತು

ಪ್ರವಾಹದ ವಿರುದ್ಧ ಈಜುವ ನನ್ನ ಜೀವನ. ಬಹುಶಃ ಇಂದಿನಿಂದಲೇ ಬದುಕು ನನಗೆ ಕಲಿಸುವ ಪಾಠಗಳೂ ಪ್ರಾರಂಭವಾದುವು ಎನ್ನಬಹುದು.

ಆಗ ಶರಣಬಸವೇಶ್ವರ ಕಾಲೇಜಿನ ಕಟ್ಟಡ ಪೂರ್ಣಗೊಂಡಿರಲಿಲ್ಲ. ಗುಡ್ಡದ ಮೇಲಿನ ಕಾಲೇಜಿಗೆ ಹತ್ತಿ ಹೋಗಲು ಮೆಟ್ಟಲುಗಳಿರಲಿಲ್ಲ. ನಾವು ಮೂವರೂ ಗೆಳತಿಯರು ಮುಂಜಾನೆ ಏಳು ಗಂಟೆಗೆ ಹರದಾರಿ ದೂರದ ಈ ಕಾಲೇಜಿಗೆ ನಡೆದುಕೊಂಡೇ ಬರುತ್ತಿದ್ದೆವು. ಗುಡ್ಡ ಹತ್ತಿ ಕಾಲೇಜಿನ ಲೇಡೀಸ್‌ರೂಮ್ ಸೇರುವ ಹೊತ್ತಿಗೆ ಸಾಕು ಸಾಕಾಗುತ್ತಿತ್ತು. ಮತ್ತೆ ತರಗತಿಗಳಿಗೆ ಹಾಜರಾಗಿ ಮೂರನೇ ಪಿರಿಯಡ ಮುಗಿದ ತಕ್ಷಣ ಉಳಿದ ಕ್ಲಾಸುಗಳನ್ನು ಬಿಟ್ಟು ಆಫೀಸಿಗೆ ಸಮಯವಾಯಿತೆಂದು ಅಲ್ಲಿಂದ ಕೆರೆದಂಡೆಯ ಜಗತ್‌ಸರ್ಕಲ್‌ನಲ್ಲಿದ್ದ ಡೆಪ್ಯೂಟಿ ಕಮೀಷನರ್ ಕಚೇರಿಗೆ ಓಡುನಡಿಗೆಯಲ್ಲೇ ಧಾವಿಸುತ್ತಿದ್ದೆ. ಆಫೀಸಿರುವುದು ಹೊಡ್ಡಿನ ಮೇಲೆ. ರಸ್ತೆ ದಾಟಿ ಬಂದು ಮತ್ತೆ ಗುಡ್ಡದಂಥ ಒಡ್ಡು ಏರಿ ಕಚೇರಿಯ ನನ್ನ ಕುರ್ಚಿಯಲ್ಲಿ ಕುಸಿದಾಗ ಏದುಸಿರಿನಿಂದ ಜೀವ ಹೋದಂತಾಗುತ್ತಿತ್ತು. ಅಷ್ಟರಲ್ಲಿ ಹಾಜರಿ ಪುಸ್ತಕ ನಮ್ಮ ಬಾಸ್ ಹತ್ತಿರ ಹೋಗದಿದ್ದರೆ ನನ್ನ ಪುಣ್ಯ. ಹೋಗಿದ್ದರೆ ಅವರ ಬಳಿ ಹೋಗಿ, ತಡವಾದುದಕ್ಕೆ ಕಾರಣ ಹೇಳಿ, ಕ್ಷಮೆ ಕೇಳಿ, ಹಾಜರಿ ಪುಸ್ತಕದಲ್ಲಿ ಸಹಿ ಮಾಡಿ, ಮುಖದ ಮೇಲಿನ ಬೆವರೊರೆಸಿಕೊಳ್ಳುತ್ತಾ ವಾಪಸ್ಸು ನನ್ನ ಸೀಟಿಗೆ ಬರಬೇಕಾದರೆ ಕಚೇರಿಯ ಎಲ್ಲ ಗಂಡಸರ ಕಣ್ಣು ನನ್ನ ಮೇಲೆಯೇ. ನನ್ನ ಜೀವ ತಳಮಳಿಸುತ್ತಿತ್ತು. ಕಚೇರಿಯಲ್ಲಿ ಹಿರಿವಯಸ್ಸಿನ ಒಬ್ಬ ಮುಸಲ್ಮಾನ ಚಪರಾಸಿ ಇದ್ದ. ನಾನು ಬರುವ ಸಮಯಕ್ಕೆ ಸರಿಯಾಗಿ ಹೋಟೆಲಿನಿಂದ ಚಹ ತಂದಿಡುತ್ತಿದ್ದ. ಚಹ ಕುಡಿದಾಗ ದಣಿವು ದೂರಾದಂಗಾಗಿ ನಾನು ಅವನಿಗೆ ಶುಕ್ರಿಯಾ ಬಾಬಾ...ಅಂತ್ಹೇಳಿ ಫೈಲುಗಳ ಕಟ್ಟು ಬಿಚ್ಚುತ್ತಿದ್ದೆ.

ಹೀಗೆ ನಾನು ಕಚೇರಿ ಕೆಲಸ, ಕಾಲೇಜಿನ ಓದುಗಳನ್ನು ಏಕಕಾಲಕ್ಕೆ ಕಲಿಯುತ್ತ ನಡೆದೆ. ಇಲ್ಲಿಂದಲೇ ಬದುಕಿನೊಂದಿಗಿನ ನನ್ನ ಹೋರಾಟ ಶುರುವಾಯಿತು.

ಬಾಲ್ಯದಂತೆ ಹರೆಯ ಸರಳ ಸುಂದರವಾಗಿ ನಿರಾತಂಕವಾಗಿ ಮುನ್ನಡೆಯುವುದಿಲ್ಲ. ಅದರಲ್ಲಿನ ಮುಗ್ಧತೆ, ಸರಳತೆ, ಆಪ್ಯಾಯತೆಗಳ ಚಂದದ ಲೇಪ ಹರೆಯಕ್ಕೆ ಇರುವುದಿಲ್ಲ ನಿಜ. ಆದರೆ ಹರೆಯಕ್ಕೆ ತನ್ನದೇ ಆದ ಲೋಹಚುಂಬಕ ಆಕರ್ಷಣೆಯಿದೆ. ಹೆಣ್ಣಿಗೆ ಗಂಡು, ಗಂಡಿಗೆ ಹೆಣ್ಣನ್ನು ಧಡಕ್ಕನೆ ಹಿಡಿದು ಒಂದೆಡೆ ನಿಲ್ಲಿಸುವ ಸಮ್ಮೋಹಕ ಚಾಂಚಲ್ಯತೆಯಿದೆ. ಮುಂದೆ ನಿಂತವರನ್ನು ಮೋಡಿಮಾಡಿ ತನ್ನ ಗುಲಾಮನನ್ನಾಗಿಸುವ ಮೋಹಕ ಗಾರುಡಿಯಿದೆ. ಹರೆಯದ ಮನೆಹೊಕ್ಕರೆ ಸಾಕು, ವ್ಯಕ್ತಿಯ ಸುತ್ತಮುತ್ತ ಕನಸುಗಳು ಚಿಗುರುತ್ತವೆ. ಅವುಗಳ ಮಗ್ಗುಲಲ್ಲಿ ಬೆಚ್ಚಗೆ ಮಲಗಿಕೊಂಡ ಹೂವುಗಳು ಬಾಯಿ ತೆರೆದು ಬಣ್ಣ ಉಗುಳುತ್ತವೆ. ಬಣ್ಣದ ಕನ್ನಡಕ ಹಾಕಿಕೊಂಡೇ ಹರೆಯ ತನ್ನ ಸುತ್ತಮುತ್ತಲಿನ ಸಮಾಜವನ್ನು ನೋಡುತ್ತದೆ. ಅಂತೆಯೇ ಅದಕ್ಕೆ ಜಗತ್ತೆಲ್ಲ ಸುಂದರ! ಆದರ ಆ ಸಮಾಜಕ್ಕೆ ಈ ಹರೆಯದವರೆಡೆಗೆ ಯಾವಾಗಲೂ ಸಂಶಯದ, ಗುಮಾನಿಯ ನೋಟ. ಹಂತ ಹಂತವಾಗಿ ಅದು ಹರೆಯದ ಗಂಡುಹೆಣ್ಣುಗಳ ಕಾಲುಗಳಿಗೆ ಬೇಡಿ ಹಾಕತೊಡಗುತ್ತದೆ. ನೀಲಾಕಾಶದಲ್ಲಿ ಲೀಲಾಜಾಲವಾಗಿ ಸಂತಸದಿಂದ ಸುಯ್ಯುತ್ತಾ

ಹಾರುವ ಹಕ್ಕಿಗಳ ರೆಕ್ಕೆಗಳಿಗೆ ಕತ್ತರಿ ಹಾಕುವ ಹುನ್ನಾರು ಶುರುಮಾಡುತ್ತದೆ. ಅವರ ಚೆಲುವಿನ ಕನಸುಗಳ, ಬಣ್ಣದ ಚಿತ್ತಾರಕ್ಕೆ ಮಸಿ ಬಳಿಯುವ ತಾಲೀಮು ನಡೆಸುತ್ತದೆ. ಆಗ ಹುಟ್ಟುತ್ತವೆ ಸಮಸ್ಯೆಗಳು, ಸವಾಲುಗಳು, ಸಂಕಟಗಳು, ಹಟಗಳು, ಅಸಲಿಗೆ ಈ 'ಹರೆಯ'ವೇ ಬದುಕಿನ ಒಂದು ಸಮಸ್ಯೆಯಾಗಿ ಕಾಡುತ್ತದೆ! ಕಥೆಯಾಗದ, ಇತಿಹಾಸ ಸೃಷ್ಟಿಸದ ಹರೆಯ, ಅದೆಂಥ ಹರೆಯ?

ಆದರೂ ಸಮಾಜಕ್ಕೆ ಸೆಡ್ಡು ಹೊಡೆದು ನಿಂತು ತನ್ನ ಬದುಕನ್ನು ತಾನು ತನಗೆ ತೋಚಿದಂತೆ ರೂಪಿಸಿಕೊಳ್ಳುವ ಛಲ ಕೆಲ ಹೆಣ್ಣುಗಂಡುಗಳಲ್ಲಿರುತ್ತದೆ. ಅಥವಾ ಬರುತ್ತದೆ. ಅಂಥವರು ಯಾವುದಕ್ಕೂ ರಾಜಿಮಾಡಿಕೊಳ್ಳುವುದೇ ಇಲ್ಲ. ಆಗ ಅವರು ಎತ್ತಿಡುವ ಹೆಜ್ಜೆಗಳು ಹೊಸಹಾದಿಯನ್ನೇ ಹುಟ್ಟಿಸುತ್ತವೆ. ನನ್ನ ಸ್ವಭಾವವೂ ಅಷ್ಟೇ. ಎಲ್ಲರಂತೆ ಸಾಮಾನ್ಯ ಹೆಣ್ಣುಮಗಳಾಗಿ, ಹತ್ತರಲ್ಲಿ ಹನ್ನೊಂದನೆಯವಳಾಗಿ ಬದುಕಿ, ಸಾಯುವುದು ನನಗೆ ಬೇಕಾಗಿಲ್ಲ. ಎಲ್ಲರಿಗಿಂತ ನಾನು ಭಿನ್ನವಾಗಿ ನಿಂತು ನನ್ನದೇ ಆದ ವಿಶಿಷ್ಟತೆಯನ್ನು ಹೊಂದಬೇಕೆಂಬ ಛಲ ನನ್ನೆದೆಯ ತಳದಲ್ಲಿ ಬತ್ತದ ಗಂಗೆಯಾಗಿ ಹರಿಯುತ್ತಿರುವಾಗಲೇ ನಾನು ನನಗೆ ಬಂದ ಎಲ್ಲ ಸಮಸ್ಯೆಗಳನ್ನು ಸವಾಲಾಗಿಯೇ ಸ್ವೀಕರಿಸಿ ಬದುಕಲು ನಿರ್ಧರಿಸಿದ್ದೆ. ಆಗ ಬಂದುವು ನೋಡಿ ಸಂಕಟಗಳ ಸರಮಾಲೆ. ಈ ಸಮಾಜದ ರೂಢಿರಿವಾಜುಗಳ ವಿರುದ್ಧ, ನೀತಿ ಸಂಪ್ರದಾಯಗಳ ವಿರುದ್ಧ, ಕೆಟ್ಟ ವ್ಯವಸ್ಥೆಯ ವಿರುದ್ಧ ಬಂಡು ಸಾರುತ್ತ ಮುನ್ನಡೆದೆ. ನಮ್ಮ ಜಿಲ್ಲೆಯ ಚುಂಚೂರು ಮಾವುರ ತಾಯಿಗೆ ಬೆತ್ತಲೆ ಸೇವೆ, ದೇವಿಯ ಹೆಸರಿನ ಮೇಲೆ ನಡೆಸುವ ಸೂಳೆಗಾರಿಕೆ, ಊರಗೌಡ, ಕುಲಕರ್ಣಿ, ಸಾಹುಕಾರರು ನಿರ್ಗತಿಕ ಹೆಂಗಸರ ಮೇಲೆ ನಡೆಸುವ ದೌರ್ಜನ್ಯ, ದಬ್ಬಾಳಿಕೆ, ಲೈಂಗಿಕ ಶೋಷಣೆ ಮೊದಲಾದ ಆಗ ಚಾಲ್ತಿಯಲ್ಲಿದ್ದ ಮೂಢ ನಂಬಿಕೆಗಳ ವಿರುದ್ಧ ಮುಲಾಜಿಲ್ಲದೆ ಬರೆಯತೊಡಗಿದೆ. ನನ್ನ ಜಿಲ್ಲೆಯ ಹಳ್ಳಿಯ ಜವಾರಿ ಭಾಷೆ ನನ್ನ ಬರಹಕ್ಕೆ ಬೆನ್ನೆಲುಬಾಯಿತು. ಹಳ್ಳಿಯ ಅಮಾಯಕ, ಅನಕ್ಷರಸ್ಥ ಹೆಂಗಸರ ಶೋಷಣೆ, ಸಂಕಟಗಳು ನನ್ನ ಬರಹಕ್ಕೆ ಬೇರುಗಳಾದುವು. ಹೀಗೆ ನಾನು ವ್ಯವಸ್ಥೆಯ ವಿರುದ್ಧ ದಂಗೆಯ ಬರವಣಿಗೆಯೊಂದಿಗೆ ಮುನ್ನಡೆದಾಗಲೇ ನನ್ನ ಮೇಲೆ ಸಮಾಜದ ಕಂದಾಚಾರಿಗಳು, ಜಾತಿವಾದಿಗಳು, ಮೊದಲಾದವರೆಲ್ಲ ತೆರೆಮರೆಯಲ್ಲಿ ನಿಂತೇ ಮಾರಿಗೆ ಮುಸುಕು ಹಾಕಿಕೊಂಡೇ ಯುದ್ಧ ಸಾರತೊಡಗಿದ್ದು. ಮನೆಯವರೂ ನನ್ನ ವಿರುದ್ಧ ನಿಂತರು. ನನ್ನ ಅವ್ವನೇ ನನ್ನೊಂದಿಗೆ ಮಾತುಬಿಟ್ಟು ಮುನಿಸಿಕೊಂಡಳು. ಅಪ್ಪ ನೊಂದುಕೊಂಡ. ತಂಗಿಯರು ಕೆಂಡಕಾರಿದರು. ಆಗ ನನಗೆ ಒಂದು ಮಾತು ಖಾತ್ರಿಯಾಯಿತು. ಬದುಕು ಒಡ್ಡುವ ಸಮಸ್ಯೆಗಳೊಂದಿಗೆ ತಕರಾರೆತ್ತದೆ, ರಾಜಿಮಾಡಿಕೊಳ್ಳುತ್ತ ಬದುಕಿದರೆ ಮಾತ್ರ ಈ ಸಮಾಜದ ಕಣ್ಣಲ್ಲಿ ಒಂದು ಹೆಣ್ಣು ನೆಮ್ಮದಿಯಿಂದಿರಲು ಸಾಧ್ಯ ಅಂತ! ಆದರೆ ಅಂಥ ನಕಲಿ ನೆಮ್ಮದಿ ನನಗೆ ಬೇಕಾಗಿರಲಿಲ್ಲ. ಅಸಲಿಗೆ ಬಂದದ್ದಕ್ಕೆಲ್ಲ ಹೊಂದಿಕೊಂಡು ಹೋಗುವ ಜಾಯಮಾನವೇ ನನ್ನದಲ್ಲ. ಹೀಗಾಗಿ ನನ್ನೊಂದಿಗೆ ಈ ಬದುಕು ಕ್ರೂರವಾಗಿ ನಡೆದುಕೊಂಡದ್ದೆ ಜಾಸ್ತಿ. ಆದರೆ ಉರ್ದು ಕವಿಯೊಬ್ಬರು ಹೇಳುವಂತೆ "ಮುಸೀಬತ್ ಇತನೀ ಆ ಪಡೀ ಕಿ ಆಕರ್ ಆಸಾನ್ ಹೋಗಯೇ..."

ಅನ್ನುವಂತಾಯಿತು. "ಹೆಣ್ಣಾಗಿ ಹುಟ್ಟುವುದಕ್ಕಿಂತ ಮಣ್ಣಾಗಿ ಹುಟ್ಟಬೇಕು..."ಅಂತ ನಾನು ಕಣ್ಣೀರು ಹಾಕಲಿಲ್ಲ. ಈ ಸಂಸಾರದಲ್ಲಿ "ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಿ..." ಅನ್ನುವ ಬಸವಣ್ಣನ ಉಕ್ತಿಯನ್ನು ಒಪ್ಪಿಕೊಂಡೇ ನಾನು ಜೀವನದ ಹೊಳೆಯಲ್ಲಿ ಈಜಿಗಿಳಿದೆ.

ಹೌದೂ...ನಾನೇಕೆ ಬರೆಯಲು ಶುರುಮಾಡಿದೆ? ಅನ್ನುವ ಪ್ರಶ್ನೆ ಆಗಾಗ ನನ್ನನ್ನು ಕಾಡಿದ್ದಿದೆ. ಬಾಲ್ಯದಲ್ಲಿ ನಾನು ಅನುಭವಿಸಿದ ಉತ್ತಮರ ತಿರಸ್ಕಾರ ಅಪಮಾನಗಳ ಸೇಡು ಈಗ ಈ ನನ್ನ ಬರಹದ ಮೂಲಕ ತೀರಿಸಿಕೊಳ್ಳುತ್ತಿದ್ದೇನೆಯೇ? ಎಂಬ ಗುಮಾನಿಯೂ ಇದೆ. ಹೌದು. ಆ ಹಾರುವರ ಹೆಂಗಸರು ನನ್ನನ್ನು ಅಪಮಾನಿಸಿದ ಪ್ರಸಂಗಗಳೆಷ್ಟು?- ನನ್ನ ಎಳೆಮನಸ್ಸನ್ನು ಘಾಸಿಗೊಳಿಸಿದ ಬಗೆಗಳೆಷ್ಟು?

ಅವರು ನನಗೆ ಅವಲಕ್ಕಿಯ ಒಗ್ಗರಣೆಯೋ, ಉಪ್ಪಿಟ್ಟೋ ಒಂದೊಂದು ಸಲ ತಿನ್ನಲು ಕೊಡುವುದಿತ್ತು. ಆಗ ನೋಡಬೇಕು ನನ್ನ ಫಜೀತಿ.

"ಏ ಪೋರೀ ಇಕಾ ನಮ್ಮ ಹುಡ್ರೆಲ್ಲಾ ತಿಂದು ಒಂದಿಷ್ಟು ಉಪ್ಪಿಟ್ಟು ಉಳದದ ನೋಡು... ತಗೋ... ತಿನ್ನು..." ಅಂತ ನನ್ನನ್ನು ಕರೆಯುತ್ತಿದ್ದರು. ನಾನು ಅವರ ಮುಂದೆ ನಿಂತು ಕೈ ಒಡ್ಡುತ್ತಿದ್ದೆ. ಪತ್ರೋಳಗಿಯಲ್ಲೋ, ಹಳೆಯ ರದ್ದಿ ಕಾಗದದ ಮೇಲೋ ಅದನ್ನಿಟ್ಟು ಅಷ್ಟು ಎತ್ತರದಿಂದಲೆ ನನ್ನ ಕೈಗೆ ಧೊಪ್ಪನೆ ಬಿಸಾಕುತ್ತಿದ್ದರು. ಪುಣ್ಯಕ್ಕೆ ಅದು ನನ್ನ ಕೈಯಲ್ಲಿ ಬಿದ್ದು ಭಾರಸಂಭಾಳಿಸಿದರೆ ಸರಿ. ಆದರೆ ಕೆಲವೊಮ್ಮೆ ಅದು ಜೋರಾಗಿ ಬಿದ್ದಾಗ ನನ್ನ ಪುಟ್ಟ ಕೈಗಳಿಗಮರದೆ ಧಡಕ್ಕನೆ ಕೆಳಗೆ ಬೀಳುತ್ತಿತ್ತು. ಆಗ ಉಪ್ಪಿಟ್ಟು ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿ ಹರಡಿದಾಗ ನನ್ನ ಕಣ್ಣಲ್ಲಿ ನೀರು ದಟ್ಟೈಸುತ್ತಿತ್ತು.

"ಥೂ ನಿನ್ನ...ಕೊಟ್ಟಿದ್ದು ಛೊಲೋತನ್ಯಾಗಿ ಸಂಭಾಳಿಸ್ಗೊಂಡು ತಗೊಂಡು ತಿಲ್ಲಕ್ಕನೂ ಬರಂಗಿಲ್ಲಲ್ಲೇ ನಿನಗಾ? ದಡ್ಡಮುಂಡೀದು...ಅದೆಲ್ಲಾ ಮ್ಯಾಲಿಂದು ಬಳ್ಕೊಂಡು, ಬ್ಯಾರೆ ಪತ್ರೋಳಿಗಿ ಕುತ್ತೀನಿ, ಹಾಕ್ಕೊಂಡು ತಿನ್ನು. ಕೆಳಗಿಂದೆಲ್ಲಾ ಬಳ್ದು ಚೆಲ್ಲಿ, ನೆಲಕ್ಕ ನೀರ್ಹಾಕಿ ಸಾರಿಸಿಬಿಡು..." ಅಂತ ಆ ಹೆಂಗಸರ ಅಪ್ಪಣೆಯಾಗುತ್ತಿತ್ತು. ಸುತ್ತ ನೆರೆದ ಹುಡುಗರೆಲ್ಲ ಕಿಸಿ ಕಿಸಿ ನಗುತ್ತಿದ್ದುವು. ನೆಲದ ಮೇಲೆ ಬಿದ್ದದ್ದನ್ನು ಬಳ್ಕೊಂಡು ತಿನ್ನಲು ನನಗೆ ಮನಸ್ಸಿರುತ್ತಿರಲಿಲ್ಲ. ತೀರ ಅವಮಾನವಾದಂತಾಗಿ ಎಲ್ಲವನ್ನೂ ಬಳಿದೊಯ್ದು ತಿಪ್ಪೆಗೆಸೆದು ಬಂದು ನೀರಿನಿಂದ ನೆಲಸಾರಿಸುತ್ತಿರುವಾಗ ನನಗೆ ಜೀವ ಹೋದಂಗಾಗುತ್ತಿತ್ತು.

"ಏ...ಎಷ್ಟು ಸೊಕ್ಕೆ ನಿನಗ? ಮ್ಯಾಲಿಂದು ಬಳ್ಕೊಂಡು ತಿನ್ನು ಅಂದಲ್ಲೆಲ್ಲೋಷ್ಟೂ ಎತ್ತಿ ತಿಪ್ಪಿಗಿ ಹಾಕಿ ಬಂದೆಲ್ಲ? ಅನ್ನದ ಮ್ಯಾಲ ಇಷ್ಟು ಸೊಕ್ಕು ತೋರಸ್ತೆಲ್ಲ, ಅದಕ್ಕೆ ನಿಮ್ಮ ಶೂದ್ರ ಮಂದೀಗಿ ಆ ದೇವರು ಹೊಟ್ಟಿ ತುಂಬಾ ಅನ್ನಾಕೊಟ್ಟಿಲ್ಲ. ಪಾಪಿಷ್ಟ ಮುಂಡೇವು...ದರಿದ್ರ ಸಂತಾನ..." ಅಂತ ಆ ತಾಯಂದಿರು ಬೈಯ್ಯುತ್ತಿದ್ದರು. ನೀರು ಕೊಡುವಾಗಲೂ ಅಷ್ಟೇ. ಅವರು ತೆಂಬಿಗೆಯೆತ್ತಿ ಮೇಲಿನಿಂದ ಹಾಕಬೇಕು. ನಾನು ಬೊಗಸೆಯೊಡ್ಡಿ ಕುಡೀಬೇಕು. ಅವರು ನಮಗೆ ಚಹ ಕೊಡುವಾಗಲೂ ನಮಗೆಂತಲೇ ಒಂದು ಕಿವಿಹರಕು ಕಪ್ಪು ಬೇರೆಯೇ

ಇಟ್ಟಿರುತ್ತಿದ್ದರು. ಅದರಲ್ಲೇ ಚಹ ಹಾಕಿಸಿಕೊಂಡು ಕುಡಿದು ಅದನ್ನು ಬೂದಿ ಹಚ್ಚಿ ತೊಳೆದು ಹೊರಗಿನ ಮಾಡದಲ್ಲಿಡಬೇಕು.

ಇವೆಲ್ಲ ನನಗೆ ಹಿಂಸೆಗಿಡುತ್ತಿದ್ದುವು. ಚುಚ್ಚುತ್ತಿದ್ದುವು. ಕೆರಳಿಸುತ್ತಿದ್ದುವು. ಘಾಸಿಗೊಳಿಸುತ್ತಿದ್ದುವು. ಅದೆಲ್ಲ ಕಿರಿಕಿರಿಯೇ ಬ್ಯಾಡಂತ ನಾನು ಅವರ ಮನೆಯಲ್ಲಿ ತಿಂಡಿ ತಿನ್ನುವುದು, ಚಹ, ನೀರು ಕುಡಿಯುವುದನ್ನೇ ನಿಲ್ಲಿಸಿದೆ. ಅದಕ್ಕೂ ಸುಂದ್ರಾಬಾಯಿಯಂಥ ಮುದುಕಿಯರಿಗೆ ಸಹನೆಯಿರುತ್ತಿರಲಿಲ್ಲ. ನನ್ನ ಅವ್ವನನ್ನು ಕರೆದು, ಒಂದಕ್ಕೆರಡು ಪೋಣಿಸಿ, ಉಪ್ಪುಕಾರ ಹಚ್ಚಿ ಚಾಡಿ ಚುಗಲಿ ಹೇಳುತ್ತಿದ್ದರು.

"ನೀ ಏನೇ ಅನ್ನು ಶರಣಮ್ಮಾ...ನಿನ್ನ ಮಗಳು ಭಾಳ ಸೊಕ್ಕಿಂದದಾ ಕೋಡಿ...ನೆಲದ ಮ್ಯಾಲ ಬಿದ್ದಿದ್ದು ತಗೊಂಡು ತಿನಂಗಿಲ್ಲಂತಾಳ. ಅನ್ನದ ಮ್ಯಾಲ ಇಷ್ಟೊಂದು ಸೊಕ್ಕು ತೋರಸಬಾರದು ನೋಡ...ಮೊದಲೇ ನಿಮ್ಮಂದಿಗಿ ಆ ದೇವರು ಅನ್ನ ಅರವಿ ಕೊಟ್ಟಿಲ್ಲ. ಉಪಾಸ ವನವಾಸ ಇರ್‍ತೀರಿ...ನಿನ್ ಮಗಳಿಗಿ ಒಂದಿಷ್ಟು ಬುದ್ದಿ ಹೇಳು. ನಮ್ಮ ಪಾರಗೋಳ ಜತೀಗಿ ಒಂದಿಷ್ಟು ಸಾಲಿಗೇನು ಹೋಗ್ತಾಳ...ಅಕಿನ ತೆಲಿಮ್ಯಾಲ ಕೋಡು ಬಂದಾವ...ಅದಕ್ಕೆ ಈ ಶೂದ್ರಮುಂಡೇವಕ್ಕ ವಿದ್ಯಾಬ್ಯಾಡಂತ ಅಂತಿದ್ದು ನಮ್ಮ ಹಿರೇರು...ಈಗಿನ ಸರಕಾರದಾ ಅಲ್ಲ ಸುಡ್ಲಿ...ಏನೇನೋ ಸುಟ್ಟುಸುಡಗಾಡಂತ ಹೊಸಾ ಹೊಸಾ ಕಾನೂನು ಮಾಡಿ ಹೊಲಮಾದರಿಗೂ ಸಾಲಿ ಕಲಸಲಕತ್ತಾದ..." ಅವಳ [illegible] ಸರಕಾರದ ಕಡೆಗೂ ಹೊರಳುತ್ತಿತ್ತು.

ಇಂಥ ಮಾತುಗಳಿಂದ ಸಿಟ್ಟಿಗೆ ಬಂದ ಅವ್ವ ಮನೆಗೆ ಬಂದು ನನಗೆ ಬೈದು, ನಾನು ಎದುರುತ್ತರ ಕೊಟ್ಟಾಗ ಕಪಾಳಕ್ಕೆರಡೇಟು ಕೊಟ್ಟು, ನನ್ನನ್ನಪ್ಪಿಕೊಂಡು ಗಳಗಳನೆ ಅತ್ತುಬಿಡುತ್ತಿದ್ದಳು. "ಅವರು ದೇವರ ಎದಿಲಿಂದ ಹುಟ್ಟಿ ಬಂದ ಹಾರ್‍ರಮಂದಿ! ನಾವು ಅವರ ಹೊಲಸು ಬಳೀಲಕ್ಕೆ ಹುಟ್ಟಿಬಂದ ಕಪ್ಪುಮಂದಿ...ಅವರ ಸರಿಜೋಡಿ ಸೆಣಸಾಡಬಾರ್‍ದು ಕೂಸು...ಪೆಟ್ಟಾಯ್ತೆನೆ ನನ್ ಭಂಗಾರದ ಗೊಂಬೀಗೀ...ನನ್ನ ಕೈ ಕಡೀನೀ...ಅಳಬ್ಯಾಡ ಮಗಾ..." ಅಂತಂದು ಅವಳೂ ಅಳುತ್ತಿದ್ದರೆ ನನಗೆ ಒಳಗೊಳಗೇ ಆ ಸುಂದ್ರಾಬಾಯಿಯನ್ನು ಹಿಡ್ಕೊಂಡು ರಪ ರಪ ಬಡಿಯಬೇಕೆನ್ನಿಸುತ್ತಿತ್ತು.

ಇವರೆಲ್ಲ ಹೀಗೆ ಮಾಡುವುದು ನೋಡಿ ನನ್ನೊಳಗೆ, ಬಾಲ್ಯದ ಆ ಎಳೆಹೃದಯದಲ್ಲಿ ಒಂದು ಹಟ ಹುಟ್ಟಿ ಬೆಳೆಯತೊಡಗಿತ್ತು. ಯಾವುದರಲ್ಲಿಯೂ ನಾನು ಅವರಿಗಿಂತ ಕಡಿಮೆ ಆಗಬಾರದು ಅಂತನ್ನಿಸುತ್ತಿತ್ತು. ನಾವಿದ್ದದ್ದು ಬ್ರಾಹ್ಮಣರ ಚಾಳಿನಲ್ಲಿ ಅಂತ ಆಗಲೇ ಹೇಳಿದ್ದೀನಲ್ಲ. ನಾನೂ ಒಂದು ತುಳಸಿಯ ಗಿಡವನ್ನು ತಂದು ನನ್ನ ಮನೆಯ ಮುಂದೆ ಹಳೆಯ ಒಡಕು ಗಡಿಗೆಯಲ್ಲಿ ಹಚ್ಚಿದೆ. ದಿನಾಗಲೂ ಸ್ನಾನಮಾಡಿ ಮನೆಯ ಹೊಸ್ತಿಲಿಗೆ, ಅಂಗಳದಲ್ಲಿ ನೀರು ಹಾಕಿ, ರಂಗವಲ್ಲಿಯ ಚಿತ್ತಾರ ಇಳಿಸಿ, ಆ ಗಿಡಕ್ಕೊಂದು ತೆಂಬಿಗೆ ಮಡಿ ನೀರೆರೆದು ಒಂದಷ್ಟು ಅರಿಶಿಣ ಕುಂಕುಮ ಹಚ್ಚಿ ಕೈಮುಗಿಯುತ್ತಿದ್ದೆ.

ಕಾರ್ತಿಕ ಮಾಸದಲ್ಲಿ ನಸುಕಿನಲ್ಲೆ ಎದ್ದು ಆಕಾಶದಲ್ಲಿ ಚಿಕ್ಕಿಗಳು ಇರುವಾಗಲೇ ಸ್ನಾನ ಮಾಡುವುದು, ಏಕಾದಶಿ, ಪಂಚಮಿ, ಶಿವರಾತ್ರಿ, ಮೊದಲಾದವುಗಳಂದು ಉಪವಾಸ

ಪಾತುವುದು ಮೊದಲಾದವುಗಳನ್ನು ಮಾಡುತ್ತಿದ್ದೆ. ಆದರೆ ಅದಕ್ಕೂ ಅವರದೊಂದು ಕೊಂಕುನುಡಿ ಇದ್ದೇ ಇರುತ್ತಿತ್ತು. ನಾನು ನಲ್ಲಿಯ ಮುಂದೆ ನೀರಿಗಾಗಿ ಕೊಡ ಪಾಳಿಗಿಟ್ಟು ಕೊಂಡು ನಿಂತಾಗ ಅವರವರೇ ಮಾತಾಡಿಕೊಂಡು ಮುಸುಮುಸು ನಗುತ್ತಿದ್ದರು.

"ಏನೇ ಕಮನಾ...ಕಾರ್ತಿಕ ಸ್ನಾನಾ ಮುಗಸ್ಗೊಂಡು ಬಂದೇನು? ಈಗೇನು ಬಿಡು. ಹೊಲಮಾದರು ಮೊದಲು ಮಾಡಿ ಹದಿನೆಂಟು ಶೂದ್ರ ಮುಂಡೇವೆಲ್ಲಾ ಕಾರ್ತಿಕಸ್ನಾನ, ಏಕಾದಶಿ, ಎಲ್ಲಾ ಮಾಡ್ಲಕತ್ತಾವ ಸುಟ್ಟು, ಬರ್ಲಿ...ಏನಾದ್ರೇನು. ನವಿಲ ಕುಣಿತಾದಂತ ಕೋಳಿನೂ ಕುಣೀಲಕ್ಕ ಹೋಗಿ ಕಾಲುಮುರ್ಕೊಡಿತ್ತಂತ...ಹಂಗಾಗ್ತದ ಅಷ್ಟೇ...." ಒಬ್ಬಳ ಧ್ವನಿ. "ಅಷ್ಟಳ್ಳೆ ಮತ್ತಿನ್ನೇನು ಬಿಡ್ರೀ ಮಾವಸೀ...ಕೋಗಿಲು ಹಾಡ್ತಾದಂತ ಕಾಗೀಗಿ ಹಾಡ್ಲಕ್ಕಾಗ್ತಾದೇನ್ರೀ? ಅದರ ಗಂಟಲದಿಂದ ಕ್ರಾಕ್ರಾ ಅಂತ ಕರ್ಕಷ ದನೀನೇ ಹೊರ ಡಾದೂ..."

ಹೀಗೆ ಮಾತಾಡುತ್ತ ನನ್ನ ಕಡೆಗೆ ಓರೆಗಣ್ಣಿನಿಂದ ನೋಡಿ ವ್ಯಂಗ್ಯ ನಗೆ ನಗುತ್ತಿರುವಾಗಲೆ ನನ್ನ ಪಾಳಿ ಬಂದು ಕೊಡ ನಲ್ಲಿಯ ಕೆಳಗಿಡಲು ಹೋದರೆ "ದೂರ...ದೂರ..."ಅಂತ ಮಾರುದೂರ ಜಿಗಿಯುತ್ತಿದ್ದರು. ನಾನು ನೀರು ತುಂಬಿಕೊಂಡು ಈ ಕಡೆಗೆ ಬಂದಾಗ ಅವರು ನಳದಿಂದ ಬಂದ ನೀರಿನಿಂದಲೇ ನಳ ತೊಳೆದು, ತೋಟಿ ಸವರಿ, ನಾನು ನಡೆದುಬಂದ ಜಾಗದಲ್ಲಿ ನೀರೆರಚುತ್ತಿದ್ದರು.

ಇಂಥ ಅವಮಾನದ ನೋವುಗಳು ನನಗೊಬ್ಬಳಿಗೇ ಅಲ್ಲ, ಗಲ್ಲಿಯ ಎಲ್ಲ ಶೂದ್ರರಿಗೆ ಆಗುತ್ತಿದ್ದುವಾದರೂ ಅವರ್‍ಯಾರು ನನ್ನಷ್ಟು ಕೀಳರಿಮೆ ಅನುಭವಿಸುತ್ತಿರಲಿಲ್ಲ. ಇದೆಲ್ಲ ತಮ್ಮ ಕರ್ಮ ಅಂತ ನಂಬಿ, ಅವರೊಂದಿಗೆ ರಾಜಿಮಾಡಿಕೊಂಡೇ ಬದುಕುತ್ತಿದ್ದರು. ಹೀಗಾಗಿ ನನ್ನೊಳಗಿನ ಬಂಡಿನ ದನಿ ಬಾಯಿಗೆ ಬರದೆ ಒಳಗೊಳಗೇ ಕುದಿಯುತ್ತಿತ್ತು.

ಹೀಗೆಂದ ಮಾತ್ರಕ್ಕೆ ನಾನು ಶುರುವಿಟ್ಟದ್ದೆ ಬಂಡಾಯ ಧೋರಣೆಯ ಬರಹಗಳಿಂದಲ್ಲ. ಮೊದ ಮೊದಲು ನಾನು ಚೆಂದದ ಚೆಲುವೆಯರ, ಅಂದದ ಬದುಕಿನ, ಬಹುಮಹಡಿಯ ಭವ್ಯ ಬಂಗಲೆಗಳ, ಸ್ಟಾರ್ ಹೋಟೆಲುಗಳು, ಹೋಳಿಗೆ ತುಪ್ಪ ಉಂಡು ಹೊಟ್ಟೆ ತುಂಬಿದವರ ಥಳಕು ಬಳಕಿನ ಜೀವನದ ಬಗೆಗೆಯೇ ಬರೆದೆ. ಆಗೆಲ್ಲ ನನ್ನ ಕಾದಂಬರಿಯ ಹೀರೋಯಿನ್‌ಗಳು ಅಪ್ರತಿಮ ಸುಂದರಿಯರು. ಅವರ ದುಂಬಿಗಣ್ಣು, ತೊಂಡೆತುಟಿ, ಸೇಬುಗೆನ್ನೆ, ಸಂಪಿಗೆ ಮೂಗು, ಶಂಖಕೊರಳು, ತಾವರೆ ಮೊಗ್ಗಿನ ಮೊಲೆಗಳ ವರ್ಣನೆಯೇ ವರ್ಣನೆ! ಥಮಕ್ ಧಮಕ್‌ನ ಅವರ ಬಾಳಿನಲ್ಲಿ ಸಮಸ್ಯೆಗಳಿಗೆ ಬರ. ಸಂಘರ್ಷಗಳು ಅಪರಿಚಿತ.

ಏರಿಳಿತಗಳು, ಬದಲಾಗುವ ಬಣ್ಣಗಳು, ನನ್ನ ನಿನ್ನ ನಡುವೆ, ಆಘಾತ, ಅಭಿಮಾನ, ಮೋಹ್ಪಾ, ನಿನ್ನ ತೋಳುಗಳಲ್ಲಿ, ನನ್ನ ಒಲವು ನಿನ್ನ ಚಲುವು ಮೊದಲಾದ ಒಂದಿಷ್ಟು ಕಾದಂಬರಿಗಳು ಈ ನಿಟ್ಟಿನಲ್ಲೆ ಹೊರಬಂದುವು. ಜನಪ್ರಿಯತೆಯೂ ಪಡೆದುಕೊಂಡು ಅಸಂಖ್ಯೆ ಓದುಗರನ್ನು ಒದಗಿಸಿಕೊಟ್ಟುವು. ಅಭಿಮಾನಿಗಳ ಪತ್ರಗಳ ಸಂಖ್ಯೆ ಜಾಸ್ತಿಯಾಯಿತು. ಪ್ರಕಾಶಕರು ನನ್ನ ಕಡೆಗೆ ನೋಡುವಂತಾಯಿತು. ಪತ್ರಿಕೆ, ನಿಯತಕಾಲಿಕೆಗಳ ಸಂಪಾದಕರ ಬೇಡಿಕೆ ಜಾಸ್ತಿಯಾಯಿತು. ಎಲ್ಲ ಆಯಿತು ಖರೆ. ಆದರೆ ನನ್ನೊಳಗಿನ ಖರೆ ಕಾಳಜಿಗಳು

ಹೊರಹೊಮ್ಮಲಿಲ್ಲವೆಂಬ ಅರಕೆ ನನಗಿದ್ದೆ ಇತ್ತು. ಇದು ನನ್ನ ಬರಹ ಅಲ್ಲ...ಬೇರೇನೋ ನಾನು ಬರೆಯಬೇಕಿದೆ ಅಂತ ಅನ್ನಿಸುತ್ತಿತ್ತು. ಆದರೆ ಏನು? ಎಂಥದ್ದು? ಅನ್ನುವ ತೊಳಲಾಟದಲ್ಲಿ ಸಮಯ ಸರಿಯುತ್ತಿತ್ತು.

ಹೀಗೊಮ್ಮೆ ನನ್ನ ಅಪ್ಪನ ತವರೂರಿನ ಮನೆದೇವತೆ ಚುಂಚೂರಿನ ಪಾವುರತಾಯಿ ದೇವಿಯ ಜಾತ್ರೆಗೆ ಹೋಗಿದ್ದೆ. ಚುಂಚೂರು ನಮ್ಮ ಕಲಬುರ್ಗಿ ಜಿಲ್ಲೆಯ 'ಆಳಂದ' ತಾಲೂಕಿನಲ್ಲಿ ಬರುವ ಒಂದು ಸಣ್ಣ ಹಳ್ಳಿ. ಅದು ಹೇಳಿ ಕೇಳಿ ಕಪ್ಪು ಮಂದಿಯ ದೇವತೆ. ಕುರಿಕೋಳಿಗಳ ಬಲಿಯಂತೂ ಇದ್ದದ್ದೆ. ಆದರೆ ಇಲ್ಲಿ ನಡೆಯುವ ಗಂಡು ಹೆಣ್ಣುಗಳ ಬೆತ್ತಲೇ ಸೇವೆ ನನಗೆ ಶಾಕ್ ಕೊಟ್ಟಿತು. ಬೆತ್ತಲೆ ಸೇವೆಗೆ ಹರೆಯದವರು ಮುದುಕರು ಅನ್ನುವ ತಾರತಮ್ಯವಿರಲಿಲ್ಲ. ಹೆಂಗಸರು ಗಂಡಸರು ಅನ್ನುವ ಭೇದ ಭಾವವಿರಲಿಲ್ಲ. ಹರಕೆ ಹೊತ್ತು ದಲಿತರು ಯಾರು ಬೇಕಾದರೂ ಆ ಸೇವೆಯನ್ನು ದೇವಿಗೆ ಸಲ್ಲಿಸಬಹುದಾಗಿತ್ತು. ನಿಗಿ ನಿಗಿ ಕೆಂಡದಂತೆ ಉರಿಯುವ ಎಪ್ರಿಲ್, ಮೇ ತಿಂಗಳ ಬೇಸಿಗೆಯ ಬೆದೆಬಿಸಿಲ ದಿನಗಳಲ್ಲಿ ಬರೀ ಬತ್ತಲೆಯಾಗಿ ನೆತ್ತಿಯ ಮೇಲೆ ಉರಿಯುವ ಸೊಡ್ಡಾರತಿಯ ತಾಬಂಡಿ ಹೊತ್ತು, ಬಾಯಲ್ಲಿ ಬೇವಿನ ಪಳ್ಳೆ ಕಚ್ಚಿಕೊಂಡು ಹರಕೆ ಹೊತ್ತವರು ಬರಿಗಾಲಿನಿಂದ ದೇವಿಯ ಗುಡಿ ಸುತ್ತುತ್ತಿದ್ದರು. ಅವರ ಮುಂದೆ ಬಲಿ ಕೊಡುವ ಕುರಿ ಸಿಂಗಾರವಾಗಿ ಓಡುತ್ತಿತ್ತು. ಅದರ ಮುಂದೆ ಹಲಗೆ, ಬಾಜಿ, ಡೊಳ್ಳು, ಭಜಂತ್ರಿಗಳ ಆವಾಜು. ಕುರಿಯ ಹಿಂದೆ ಹರಕೆ ಹೊತ್ತ ಹೆಂಗಸು ಅಥವಾ ಗಂಡಸು. ಅವಳ ಹಿಂದೆ ಬಂಧು ಬಳಗದವರು. ಉಧೋ....ಉಧೋ... ಅಂತ ಒದರುತ್ತ ಓಡುತ್ತಿದ್ದರು. ಹೀಗೆ ಮೈಮೇಲೆ ಖಬರಿಲ್ಲದಂತೆ ಬಾಯಲ್ಲಿ ತೊಪ್ಪಲು ಕಚ್ಚಿಕೊಂಡು, ಕಾಡಿನಿಂದ ತಪ್ಪಿಸಿಕೊಂಡು ಬಂದ ಮೃಗಗಳಂತೆ ಅವರು ಓಡಿ ಬರುತ್ತಿದ್ದರೆ ಹೆದರಿಕೆ, ಜಿಗುಪ್ಸೆಗಳಿಂದ ನನ್ನೆದೆ ಧಡ ಧಡ ಬಡಿದುಕೊಳ್ಳುತ್ತಿತ್ತು. ಸುತ್ತ ನಿಂತು ನೋಡುವ ಮಂದಿಗೆ ಪುಕ್ಕಟೆ ಮನರಂಜನೆ. ಅಲ್ಲಲ್ಲಿ ಜಾತ್ರೆಗೆಂದು ಬಂದು ಹಿಂಡುಗಟ್ಟಿಕ್ಕೊಂಡು ನಿಂತಿದ್ದ ಹದಿಹರೆಯದ ಗಂಡುಗಳ ನಡುವೆ ಅದುಮಿದ ನಗೆ, ತಗ್ಗಿದ ಸೀಟಿಗಳ ಸದ್ದು ಕೇಳಿಬರುತ್ತಿದ್ದುವು.

ಇದು ಆ ದೇವಿಯ ಜಾತ್ರೆಯ ಒಂದು ವೈಶಿಷ್ಟ್ಯವಾದರೆ ಇನ್ನೊಂದು, ಆಗತಾನೆ ಮೈನೆರೆದು ಹಸಿಬಿಸಿ ಹರೆಯ ಹೊತ್ತ ಅಲ್ಪಡ ಜವಾನಿಯ ಅಮಾಯಕ ಹೆಣ್ಣುಗಳನ್ನು ದೇವಿಗೆ 'ಜೋಗಿಣಿ' ಅಂತ ಬಿಡುವುದು! ಹೆತ್ತವರ ಹರಕೆಗೆ ಅವರ ಈ ಹೆಣ್ಣುಮಕ್ಕಳು ಬಲಿಯಾಗಬೇಕು. ಮನಸ್ಸಿರಲಿ ಬಿಡಲಿ, ಅವರು ತಲೆಯ ಮೇಲೆ ಜರಡಿ ಬುಟ್ಟಿ ಹೊತ್ತು, ಕೊರಳಲ್ಲಿ ಕವಡೆಸರ ಹಾಕ್ಕೊಂಡು, ಬಗಲಲ್ಲಿ ಚೌಡಕಿ ಹಿಕ್ಕೊಂಡು ಉಧೋ...ಉಧೋ....ಅಂತ ದೇವಿಯ ಮೈಮಾದ ಹಾಡುಗಳನ್ನು ಹಾಡುತ್ತ ಮನೆ ಮನೆ, ಗಲ್ಲಿಗಲ್ಲಿ, ಬಾಜಾರು ಬಾಜಾರು, ಸಂತೆ ಸಂತೆ, ರಸ್ತೆ ರಸ್ತೆಗಳಲ್ಲಿ ಭಿಕ್ಷೆ ಬೇಡಬೇಕು. ಮೊಟ್ಟ ಮೊದಲದಿನ ಯಾವನಾದರೂ ದವುಳ್ಳ ಗಂಡಸು ರೊಕ್ಕರುಪ್ಪೆ, ಬಂಗಾರದ ಒಡವೆ, ಹೊಸಸೀರೆ ಕುಪ್ಪಸ ಕೊಟ್ಟು ಆ ಹೆಣ್ಣನ್ನು ಪಟ್ಟಕ್ಕೆ ಹಾಕಿಕೊಂಡು ಆ ರಾತ್ರಿ ಅವಳ ಮೈಯ ಮೀಸಲು ಮುರಿಯಬೇಕು. ಮರುದಿನದಿಂದ ಅವಳು 'ಜೋಗಣಿ' ಎಂಬ ಹೆಸರಿನ ಲೇಬಲ್ ಹಣೆಗೆ ಹಚ್ಚಿಕೊಂಡು ಸೂಳೆಗಾರಿಕೆಗಿಳಿಯಬೇಕು. ತನ್ನ ಜೀವನ

ದ್ದುದ್ದಕ್ಕೂ ಬೀದಿಸೂಳೆಯಾಗಿಯೇ ಬದುಕು ಸವೆಸಬೇಕು. ಸೂಳೆಯಾಗಿಯೇ ಬದುಕಬೇಕು-ಸೂಳೆಯಾಗಿಯೇ ಸಾಯಬೇಕು. ಈ ಜನ್ಮದಲ್ಲಿ ಅವಳಿಗೆ ಮದುವೆ ನಿಷಿದ್ಧ!

ಈ ಜೋಗಿಣಿಯ ಹರಕೆ ಹೊತ್ತು ಸೂಳೆಗಾರಿಕೆಗೆ ಇಳಿಯುತ್ತಿದ್ದ ಹೆಂಗಸರು ತೀರ ಕೆಳಜಾತಿಯ ಹೊಲೆಮಾದಿಗರು. ಮೇಲುಜಾತಿಯ ಹೆಂಗಸರ್‍ಯಾರೂ ಇಂಥ ಹರಕೆ ಹೊರುತ್ತಿಲ್ಲ. ಆ 'ಹರಕೆ' ಒಂದು ಸಂಪ್ರದಾಯವಾಗಿ ಬೆಳೆದು ಬಂದದ್ದು ಬರೀ ದಲಿತರಲ್ಲಿ ಮಾತ್ರವೆಂಬ ಸಂಗತಿ ತಿಳಿದು ನಾನು ದಂಗಾದೆ! ಹಾಗಾದರೆ ಮೇಲುವರ್ಗದ ಹೆಣ್ಣುಮಕ್ಕಳಿಗೆ ಬೆತ್ತಲೆ ಸೇವೆ, ಜೋಗಿಣಿಯ ಹರಕೆಗಳ ಹಂಗಿಲ್ಲ! ಅವರು ದೇವಿಗೆ ಪೂಜೆ, ನೈವೇದ್ಯ ಮಾಡುತ್ತಿದ್ದರು. ಇದೆಲ್ಲ ತಿಳಿದು ನನ್ನ ಮೈ ಉರಿಯಿತು. ಇಂಥ ಹಲ್ಕಟ್ ಹರಕೆಗಳನ್ನು ಹೊಲೆಮಾದಿಗರಂಥ ನಿರ್ಗತಿಕ ಹೆಂಗಸರಿಗಾಗಿ ಸೃಷ್ಟಿಸಿ, ಅದನ್ನೊಂದು ರೂಢಿ ರಿವಾಜನ್ನಾಗಿಸಿದ ಮೇಲುವರ್ಗದ ಗಂಡಸರ ಹುನ್ನಾರಿಗೆ ಚಡಪಡಿಸಿದೆ.

ಅಂದಿನಿಂದಲೇ ನಾನು ಈ ಮೇಲ್ಜಾತಿಯವರ ಚಾಲಾಕುತನದ ಸಂಚುಗಳನ್ನೆಲ್ಲ ಬರಹದ ಮೂಲಕ ಬಯಲಿಗಿಡಲು ಶುರುಮಾಡಿದೆ. 'ಮಾಪುರ ತಾಯಿಯ ಮಕ್ಕಳು' ಕಾದಂಬರಿ ಈ ನಿಟ್ಟಿನಲ್ಲೇ ರಚಿತವಾಯಿತು.

ನಂತರದ ನನ್ನ ಕಾದಂಬರಿಯ ವಸ್ತುಗಳೆಲ್ಲ ಇದೇ ಹಳ್ಳಿಯ ಕೆಳಗೇರಿಯ, ಪಟ್ಟಣದ ಕೊಳಗೇರಿಯ, ನಗರದ ಝೋಪಡಪಟ್ಟಿಯ ಮುಗ್ಧ-ಮೂರ್ಖ-ಹೆಂಗಸರ ನೂರಾರು ಸಮಸ್ಯೆಗಳೇ ಆದುವು. ನೀನು ಬರೆಯಬೇಕಾದದ್ದು ಇದು. ಇಂಥದ್ದು ಅನ್ನುವ ನಿಚ್ಚಳ ಸತ್ಯ ನನ್ನ ಕಣ್ಣ ಮುಂದೆ ಬಂದು ನಿಂತಿತು. ಹಿಂದಿನ ಮನರಂಜನಾತ್ಮಕ ಕಾದಂಬರಿಗಳನ್ನು ಒಂದೆಡೆ ಸರಿಸಿ, ನಾನು ನನ್ನದೇ ಆದ ಹೊಸಹಾದಿಯನ್ನು ಹುಟ್ಟಿಸುವ ಹೆಜ್ಜೆಗಳನ್ನು ಎತ್ತಿಡಲಾರಂಭಿಸಿದೆ. ಗುಡಿಸಲಗೇರಿಯ ನನ್ನ ಹೆಂಗಸರ ಬದುಕನ್ನು ಅನಾವರಣಗೊಳಿಸತೊಡಗಿದೆ. ಅವರ ಹೋರಾಟ, ಸಂಘರ್ಷಗಳನ್ನು ಬಯಲಿಗೆ ಹರವತೊಡಗಿದೆ.

ನನ್ನ ಜಿಲ್ಲೆಯ ಝೋಪಡಪಟ್ಟಿಯ ಹೆಂಗಸರ ಗೋಳನ್ನು ಕತೆಯಾಗಿಸುವಾಗ ನಾನು ಅವರದೇ ದಿನನಿತ್ಯದ ಆಡುನುಡಿಗಳ ಆಸಲೀ ಜವಾರಿಭಾಷೆಯನ್ನು ಬಳಸುವುದು ಅನಿವಾರ್ಯವಾಯಿತು. ಎಲ್ಲರಿಗೂ ತಿಳಿಯಲಿ ಅನ್ನುವ ಜಿದ್ದಿಸಲ್ಲಿಗೆ ಕಟ್ಟುಬಿದ್ದು ನಾನೇನಾದ್ರೂ ಶಿಷ್ಟ ಭಾಷೆಯಲ್ಲಿ ಅವರ ಬದುಕನ್ನು ಸುತ್ತಿಟ್ಟಿದ್ದರೆ ಅದು ತನ್ನ ಅಸಲೀತನವನ್ನು ಕಳೆದುಕೊಂಡು ನಕಲಿಯಾಗಿ, ಅದರ ಮೂಲ ಆಶಯದ ಮುಖ್ಯ ಬೇರಿಗೇ ಕೊಡಲಿಪೆಟ್ಟಾಗುತ್ತಿತ್ತು. ಹೀಗಾಗಿ ನನ್ನೂರಿನ ಈ ಹಳ್ಳಿ ಭಾಷೆ ಆ ಕಡೆಯ, ಅಂದರೆ ಬೆಂಗಳೂರು, ಮೈಸೂರು, ಮಲೆನಾಡು ಮೊದಲಾದ ಕನ್ನಡಿಗರಿಗೆ ಅರ್ಥವಾಗುತ್ತದೆಯೋ ಇಲ್ಲವೋ ಅನ್ನುವ ಅಳುಕಿದ್ದರೂ ನಾವು ಹೇಗೆ ಅವರ ಗ್ರಾಮ್ಯಭಾಷೆಯ ಕಾದಂಬರಿಗಳನ್ನು ಶ್ರಮಪಟ್ಟು ಓದಿ ಅರ್ಥಮಾಡಿಕೊಳ್ಳುತ್ತೇವೆಯೋ ಅವರೂ ಹಾಗಿಯೇ ಸ್ವಲ್ಪ ಹೆಣಗಾಡಲಿ ಅನ್ನುವ ತಗಾದೆಯೂ ನನ್ನ ಅಂತರ್ಯದಲ್ಲಿತ್ತು. ನನ್ನ 'ನೀಲಗಂಗಾ' ಕಾದಂಬರಿ 'ಲಂಕೇಶ ಪತ್ರಿಕೆ'ಯಲ್ಲಿ ಧಾರಾವಾಹಿಯಾಗಿ ಪ್ರಕಟವಾದಾಗ ವಿಮರ್ಶಕರೂ, ಓದುಗರೂ ಅದನ್ನು ತುಂಬ ಮೆಚ್ಚಿಕೊಂಡರು.

ಭಾಷೆಯ ಗಟ್ಟಿತನವನ್ನು, ಒರಟುತನವನ್ನು ಪ್ರೀತಿಸಿದರು. ನನ್ನ ಜಿಲ್ಲೆಯ ಗಂಡು ಕನ್ನಡ ಭಾಷೆಯ ಕಡೆಗೆ ಆಕರ್ಷಿತರಾದರು. ನನಗೆ ಧೈರ್ಯ ಬಂದಿತು. ಮುಂದಿನ ಎಲ್ಲ ಕಾದಂಬರಿಗಳಲ್ಲಿ ಇದೇ ಗ್ರಾಮ್ಯಭಾಷೆಯನ್ನು ಯಾವ ಮುಲಾಜೂ ಇಲ್ಲದೆ, ನಿರ್ಭಿಡೆಯಿಂದ ಬಳಸತೊಡಗಿದೆ.

'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿ 'ತರಂಗ' ವಾರಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟವಾಗತೊಡಗಿದಾಗಂತೂ ಜನರು ದಂಗಾದರು. ಇಂದು ಓದಿದ ಧಾರಾವಾಹಿಯನ್ನು ಮೆಚ್ಚಿ ಮೆಲುಕಾಡಿಸುತ್ತಲೇ ಮುಂದಿನ ಕಂತಿಗಾಗಿ ಕಾತರದಿಂದ ಕಾಯತೊಡಗಿದರು. "ಅಯ್ಯಯ್ಯಪ್ಪೋ...ಒಬ್ಬ ಹೆಣ್ಣುಮಗಳಾಗಿ ಈ ಗೀತಾ ಸೆಕ್ಸ್ ಬಗ್ಗೆ, ಹೆಣ್ಣಿನ ಲೈಂಗಿಕ ಶೋಷಣೆಯ ಬಗ್ಗೆ ಇಷ್ಟು ಖುಲ್ಲಮ್ ಖುಲ್ಲಾ ಆಗಿ ಬರೀತಾಳಲ್ಲ...ಎಂಥ ಧೈರ್ಯ ಅಕೀದು..." ಅಂತ ಕೆಲವರು ಮೆಚ್ಚುಗೆಯ ಮಾತಾಡಿದರೆ 'ನಾಚಿಕೆಯಿಲ್ಲದವಳು' ಅಂತ ಬೆರಳ ಮೇಲೆಣಿಕೆಯ ಮಂದಿ ನನ್ನ ಹಣೆಗೆ ಲೇಬಲ್ ಅಂಟಿಸಿದರು. "ಏನು ಅಶ್ಲೀಲ ಬರೀತಾಳ್ರೀ ಇಕೀ...ಇಕಿಗಿ ಮನ್ಯಾಗ ಯಾರೂ ಹೇಳವರು ಕೇಳವರು ಇಲ್ಲಂತ ಕಾಣಸ್ತದ. ಇಕೀಗಿ ಹದ್ದು ಬಸ್ತಿನಲ್ಲಿ ಇಟ್ಟುಕೊಳ್ಳಲಾದ್ದ ಗಂಡನಾದ ಆ ನಾಗಭೂಷಣ ಎಂಥವನ್ರೀ? ಜೋರು ಕಾ ಗುಲಾಮ ಅದಾನ ಕಾಣಸ್ತದ...ಹೆಂಗಸಾಗಿ ಹಿಂಗ್ ಬರೆಯೋದಾ...ಥೂ, ನಾಚಿಗ್ಗೇಡು". ಅಂತಂದು ಮೇಲೆ ಮೂಗು ಮುರಿದರೂ ಕೈಲ ಮಡಿವಂತ ಮನಸ್ಸುಗಳು ನನ್ನ ಕಾದಂಬರಿಯನ್ನು ಕದ್ದುಮುಚ್ಚಿ ಓದಿ ಒಳಗೊಳಗೇ ತೊಡೆ ತುರಿಸಿಕೊಂಡದ್ದೂ ಸುಳ್ಳಲ್ಲ!

ಹೌದು. "ಹಸಿಮಾಂಸ ಮತ್ತು ಹದ್ದುಗಳು"" ಬರೆದಾಗ ನನ್ನ ಗಂಡ ನಾಗಭೂಷಣ ಸತ್ತು ಆಗಾಲೇ ಬಹಳ ದಿನಗಳಾಗಿತ್ತು. ಅವನು ಜೀವಂತವಿದ್ದರೂ "ಹೆಣ್ಣು ಮಗಳಾಗಿ ಹಿಂತದ್ದೆಲ್ಲಾ ಬರ್‍ದು ನೀ ಬದನಾಮಿ ಆಗಬ್ಯಾಡ...ನನಗಿದು ಬಿಲ್‌ಕುಲ್ ಪಸಂದಿಲ್ಲ ನೋಡು," ಅಂತ ಅವನೇನಾದ್ರೂ ನನ್ನನ್ನು ದಬಾಯಿಸಿ, ನನ್ನ ಬರವಣಿಗೆಯನ್ನು ಬಗ್ಗಿಸಲು ಹವಣಿಸಿದ್ದರೆ ನಾನು ಅವನಿಗೆ ಹೆದರಿ ಬರೆಯುವುದನ್ನು ಬಿಡುತ್ತಲೂ ಇರಲಿಲ್ಲ. ಆ ಮಾತು ಬೇರೆ. ಆದರೆ ನನ್ನ ನಾಗಭೂಷಣ 'ಜೋರು ಕಾ ಗುಲಾಮ್' ನಂತೂ ಖಂಡಿತ ಆಗಿರಲಿಲ್ಲ! ಅವನಿಗೂ ನನಗೂ ಯಾವಾಗಲೂ ಒಂದಿಲ್ಲಾ ಒಂದು ವಿಷಯಕ್ಕೆ ಮಾತಿನ ಚಕಮಕಿ ನಡೆಯುತ್ತಲೇ ಇರುತ್ತಿತ್ತು. ಒಂದೊಂದು ಸಲವಂತೂ 'ನನ್ನ ಬಾಯಿ ಅವನ ಕೈ' ಅನ್ನುವ ವರೆಗೂ ಬರುತ್ತಿತ್ತು. ಇದ್ದೊಬ್ಬ ಮಗ ನನ್ನ ಬರವಣಿಗೆಯ ಉಸಾಬರಿಗೇ ಬರುವುದಿಲ್ಲ. ನಾನು ಬರೆದದ್ದನ್ನು ಅವನು ಓದುವುದೂ ಇಲ್ಲ. ಇನ್ನು ನನ್ನ ಮುದ್ದಿನ ಮಗಳಿಗೆ ನಾನು ಬರೆದದ್ದೆಲ್ಲ ಅಚ್ಚುಮೆಚ್ಚು. ಹೀಗಾಗಿ ನೀನು ಗುಡಿಸಲಗೇರಿ ಹೆಂಗಸರ ಲೈಂಗಿಕ ಶೋಷಣೆಯ ಬಗ್ಗೆ, ಝೋಪಡಪಟ್ಟಿಯ ಮಂದಿಯ ಹಸಿವು-ಹಾದರ-ಕುಡಿತ-ಕಳವು ಮೊದಲಾದವುಗಳ ಬಗ್ಗೆ ಇದ್ದದ್ದಿದ್ದಂತೆಯೇ ಖುಲ್ಲಮ್ ಖುಲ್ಲಾ ಆಗಿ ಬರೆಯಲು ನನಗ್ಯಾವ ಅಡ್ಡಿ ಆತಂಕಗಳೂ ಇರಲಿಲ್ಲ. ಅಂತಾದರೂ ನನ್ನ ಅವ್ವನ ಸಿಡಿಪಿಡಿ ಇದ್ದೇ ಇತ್ತು. ಅವಳಿಗೆ ನನ್ನ ಕಾದಂಬರಿಗಳ ಅಕ್ಷರಗಳೆಂದರೆ ಕಾಗೆ ಕಾಲು ಗುಬ್ಬಿಕಾಲು ಅಂತಿರುವಾಗ ಯಾರಾದರೂ ಗಂಡಸರು ಹೊಟ್ಟೆ ಕಿಚ್ಚಿನಿಂದ "ನಿನ್

ಮಗಳು ಹಲ್ಕಟ್ ಮಾತುಗೋಳೆಲ್ಲಾ ಬರೀತಾಳ ತನ್ನ ಕಲೆ ಒಳಗೆ ಕೋಡಿ...ನೀ ಅರೆ ಬಂದಿಷ್ಟು ಬುದ್ಧಿ ಹೇಳಬಾರ್ದಾ ಅಕೀಗೀ..." ಅಂತ ಚಾಡಿ ಹೇಳಿ, ಹಚ್ಚಿಕೊಟ್ಟಾಗ ಮಾತ್ರ ಅಪ್ಪನ ಗೊಣಗಾಟ ಶುರುವಾಗುತ್ತದೆ. ನಾನದಕ್ಕೆ ನಕ್ಕು ಹಾರಿಸಿ ಬಿಡುತ್ತೇನೆ ಅಷ್ಟೇ.

"ಹಸಿ ಮಾಂಸ ಮತ್ತು ಹದ್ದುಗಳು" ಎಷ್ಟು ಜನಪ್ರಿಯವಾಯಿತೆಂದರೆ ಅದಿನ್ನೂ ಪತ್ರಿಕೆಯಲ್ಲಿ ಮೂರೇ ಮೂರು ಕಂತು ಮಾತ್ರ ಪ್ರಕಟವಾದಾಗಲೇ ಸುಪ್ರಸಿದ್ಧ ಚಲನಚಿತ್ರ ನಿರ್ದೇಶಕರಾದ ದೊರೈ-ಭಗವಾನರು ಸಿನೇಮಾಕ್ಕಾಗಿ ಅದರ ಹಕ್ಕನ್ನು ಪಡೆದುಕೊಂಡರು. ಅದು ಸಿನೇಮಾ ಆಗಿ ಬಿಡುಗಡೆಯಾದಾಗ ಮೆಚ್ಚುಗೆಯ ಮಹಾಪೂರವೇ ಹರಿದು ಬಂದಿತು. ವಿಮರ್ಶಾ ಲೋಕದಲ್ಲಿಯೂ ಅದು ಚರ್ಚಿತವಾಗಿ ಅದರಲ್ಲಿಯ ವಸ್ತು ಮತ್ತು ನಾಯಕಿ ಸರಿತಾಳ ಅಭಿನಯ ವನ್ನು ಎಲ್ಲರೂ ದೂಸರಾ ಮಾತಿಲ್ಲದೆ ಮೆಚ್ಚಿಕೊಂಡರು.

ನಾನು ಆರಿಸಿಕೊಳ್ಳುವ ವಸ್ತುವಿನ ನಾವೀನ್ಯತೆ ಮತ್ತು ಬಳಸುವ ಭಾಷೆಯಲ್ಲಿಯ ಹೊಸತನದಿಂದಾಗಿಯೇ ಇರಬೇಕು ನನ್ನ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಗಟ್ಟಿನೆಲೆಯನ್ನು ಕಂಡುಕೊಂಡಿವೆ. ಅನಕ್ಷರಸ್ಥ, ಹಳ್ಳಿಯ ಹೆಣ್ಣಿನ ಶೋಷಣೆಯ ಬಗ್ಗೆ ಈ ಹಿಂದೆ ಕನ್ನಡದಲ್ಲಿ ಎಲ್ಲಿಯೂ ಯಾವ ಲೇಖಕಿಯೂ ದಾಖಲಿಸಿಲ್ಲ. ನನಗಿಂತ ಮೊದಲು ಬಂದ ಲೇಖಕಿಯರ್‍ಯಾರೂ, ಈ ಅಮಾಯಕ ಹೆಣ್ಣುಮಕ್ಕಳ ಸ್ಥಿತಿಗತಿಯ ಬಗ್ಗೆ ಕಾಳಜಿವಹಿಸಿಲ್ಲ. ಉಪವಾಸ ವನವಾಸ ಬಿದ್ದು, ಹರಕು ಬಟ್ಟೆಯ ಈ ಹೆಂಗಸರು ಮುರುಕು ಮನೆಯಲ್ಲಿ ಬದುಕುತ್ತಿರುವುದಾದರೂ ಹೇಗೆ? ಇವರ ಸಮಸ್ಯೆಗಳೇನು? ಸಂಘರ್ಷಗಳೆಂಥವು? ಅನ್ನುವುದರ ಕಡೆಗೆ ಅವರ ಗಮನವೇ ಹರಿಯಲಿಲ್ಲ. ಈ ದುರ್ದೈವಿ ಹೆಣ್ಣುಮಕ್ಕಳಿಗೆ ಬದುಕೇ ಒಂದು ಶಾಪವೆಂಬ ಅಂಶ ನಮ್ಮ ಯಾವ ಲೇಖಕಿಗೂ ಹೊಳೆಯಲಿಲ್ಲ. ಹೀಗಾಗಿ ಇಂಥ ಹೆಂಗಸರ ದಾರುಣ್ಯತೆಯ ಹಲವಾರು ಮಗ್ಗಲುಗಳ ಬಗ್ಗೆ ಬಿಚ್ಚಿಟ್ಟಿಲ್ಲ. ಕಾರಣ ಅವರಿಗೆ ಇದೆಲ್ಲ ಗೊತ್ತೇ ಯಿರಲಿಲ್ಲ. ಜಾತಿನೆಲೆಯ ಸಾಮಾಜಿಕ ಅಪಮಾನದ ಸಂಕಟ, ದೌರ್ಜನ್ಯ ದಬ್ಬಾಳಿಕೆಯ ನೋವು, ವರ್ಗ ನೆಲೆಯ ಮಾನಸಿಕ ದೈಹಿಕ ಕ್ರೌರ್ಯ, ದಲಿತ ಜಗತ್ತಿನ ಮುಗ್ಧ ಹೆಂಗಸರ ಲೈಂಗಿಕ ಶೋಷಣೆಯ ಚಿತ್ರಹಿಂಸೆ, ಎಂಜಲುಂಡು, ಅಪಮಾನ ನುಂಗಿ, ಕಣ್ಣೀರನ್ನು ಕಣ್ಣಲ್ಲೇ ಇಂಗಿಸುವ ಅವರ ನಿತ್ಯ ಚಡಪಡಿಕೆಗಳನ್ನು 'ಈ ವೈದಿಕ ಪರಂಪರೆಯಿಂದ ಬಂದ ಲೇಖಕಿಯರು ಕನಿಕರದಿಂದ ನೋಡಿ ತಿಳಿಯಬೇಕೇ ಹೊರತು ಅನುಭವಿಸಿ ಪ್ರತಿಕ್ರಿಯಿಸುವ ಛಾತಿವಂತಿಕೆ ಯಿಂದಲ್ಲ' ಎನ್ನುವ ಡಾ. ಮಲ್ಲಿಕಾಘಂಟಿಯವರ ಮಾತುಗಳು ಅಲ್ಲಗಳೆಯುವಂತಿಲ್ಲ.

ನನಗಿಂತ ಮೊದಲು ಬಂದ ಲೇಖಕಿಯರೆಲ್ಲರೂ ಬ್ರಾಹ್ಮಣರು., ಉಂಡುಟ್ಟು ತಿಂದುತೇಗಿ, ಸುಖದ ಬದುಕು ಬದುಕಿದವರು. ಹಸಿವು, ಹಿಂಸೆ, ಅವಮಾನ, ಹೋರಾಟಗಳಿಗೆ ಅಪರಿಚಿತರು. ಹೊಟ್ಟೆಗಾಗಿ ಮೈ ಬಗ್ಗಿಸಿ ದುಡಿಯುವ ಹಂಗೇ ಇಲ್ಲದ ಅವರಿಗೆ ತಮ್ಮ ಬದುಕುವಿಕೆಗಾಗಿ ಬಡಿದಾಡುವ ಜರೂರತ್ತೇ ಇರಲಿಲ್ಲ. ಹೀಗಾಗಿ ತಣ್ಣಗಿನ ಮನೆಯಲ್ಲಿ ಕುಂತು, ನುಣ್ಣನೆಯ ಬಾಳುವೆ ಬಾಳುವ ಈ ಲೇಖಕಿಯರು ಬರೆದಿದ್ದು ಬರೀ ಸುಖಾಂತದ, ಮನರಂಜನೆಯ, ಸಿನೇಮಾದ ಕಾದಂಬರಿಗಳೇ. ಚಾಚಿವುದಾದಂತೆ ಹೊತ್ತು ಕಳೆಯುವ ಸರಕುಗಳಾಗಿ,

ಹಣಗಳಿಕೆಯ ಹುನ್ನಾರುಗಳಾದವು. ಹೆಸರು ಗಳಿಸುವ ಪ್ರಚಾರಕ್ಕಿಳಿದುವು. ಆದರೆ ಒಂದು ಮಾತು ಮಾತ್ರ ನಿಜ. ಈ ಲೇಖಕಿಯರು ಜನರಿಗೆ ಓದುವ ಚಟ ಅಂಟಿಸುವಲ್ಲಿ ಸಫಲರಾದರು. ಓದುವ ಹವ್ಯಾಸವನ್ನು ಜನರಲ್ಲಿ ಹುಟ್ಟಿಸಿದರು. ಇವರ ಕಾದಂಬರಿಗಳು ಬಾಳೆಹಣ್ಣು ಉಪ್ಪಿಟ್ಟಿನ ಕಾದಂಬರಿಗಳೇ ಅನ್ನುವ ವಿಮರ್ಶಕರ ಟೀಕೆಗೂ ಒಳಗಾದುವು. ಈ ಗುಂಪಿನಲ್ಲೇ ಬಂದರೂ ಸ್ವಲ್ಪವಾದರೂ ಸರಿದು ತಮ್ಮದೇ ಆದ ಸ್ವಂತಿಕೆ ಉಳಿಸಿಕೊಂಡ ತ್ರಿವೇಣಿ, ಎಂ.ಕೆ. ಇಂದಿರಾ, ವೀಣಾ ಶಾಂತೇಶ್ವರ ಮೊದಲಾದ ಕತೆಗಾರ್ತಿಯರೂ ಕೆಲವರಿದ್ದಾರೆ. ಏನೇ ಆದರೂ ಅವರು ಬರೆದದ್ದೆಲ್ಲ ಮಧ್ಯಮ ವರ್ಗದ ಮಹಿಳೆಯರ ಬಗ್ಗೆಯೇ ವಿನಃ ಬಡವರ ಬಗ್ಗೆಯಲ್ಲ. ಉಂಡುಟ್ಟವರ ಬಗ್ಗೆಯೇ ವಿನಃ ಉಪವಾಸವಿದ್ದವರ ಬಗ್ಗೆಯಲ್ಲ. ಕೆಳಜಾತಿಯ ನಿರ್ಗತಿಕರನ್ನು ಕುರಿತು ಅಲ್ಲ. ಕೆಲವು ಬ್ರಾಹ್ಮಣ ಮೂಲದ ಗಂಡಸರು ಬರೆದಂತೆ ದಲಿತಲೋಕದ, ಯಾತನೆಯ ಬದುಕಿನ ಬಗ್ಗೆ ನಮ್ಮ ಈ ಮಹಿಳೆಯರ್‍ಯಾರೂ ಬರೆಯುವ ಜವಾಬ್ದಾರಿ ಹೊರಲೇ ಇಲ್ಲ.

ಆದರೆ ಇತ್ತೀಚೆಗೆ ಬಂದ ದಲಿತ, ಹಿಂದುಳಿದ ಲೇಖಕಿಯರು ತಮ್ಮ ಅನುಭವಗಳನ್ನು ಹೇಳಿಕೊಳ್ಳುವ, ನೋವನ್ನು ದಾಖಲಿಸುವ ಒತ್ತಡಕ್ಕೆ ಒಳಗಾಗಿದ್ದಾರೆ. ತಮ್ಮ ಅಪಮಾನ, ತಿರಸ್ಕಾರ, ಶೋಷಣೆಗಳನ್ನು ತೆರೆದಿಡುವ ಛಾತಿವಂತಿಕೆ ತೋರುತ್ತಿದ್ದಾರೆ. ಈ ನಿಟ್ಟಿನಲ್ಲಿ ಬಂದಂಥ ಬರಹಗಾರ್ತಿಯರು ಕನ್ನಡ ಸಾಹಿತ್ಯ ಲೋಕವೇ ಬೆಚ್ಚಿ ಬೀಳುವಂಥ ಗಮನಾರ್ಹ ಕೃತಿಗಳನ್ನು ಕೊಡುತ್ತಿರುವುದು ಸುಳ್ಳಲ್ಲ.

ನೀಲಗಂಗಾ, ಘುಮ್ಮಸ, ದಂಗೆ, ಚಿಕ್ಕಿಯ ಹರೆಯದ ದಿನಗಳು, ಬದುಕಲು ಹೋದವರು, ಆಸರೆಗಳು, ಅವ್ವ, ಜ್ವಲಂತ - ಒಂದೊಂದಾಗಿ ನನ್ನ ಕಾದಂಬರಿಗಳು ಹೊರ ಬರತೊಡಗಿದುವು. ಕನ್ನಡ ಎಲ್ಲ ಪತ್ರಿಕೆಗಳು, ಪ್ರಕಾಶನಗಳು ನನ್ನ ಬರಹಗಳನ್ನು ಪ್ರಕಟಿಸಲು ಮುಂದೆ ಬಂದರು. ಲಂಕೇಶ್, ಎಂ.ಬಿ. ಸಿಂಗ್, ಗುಲ್ವಾಡಿ, ಜಿ.ಎಸ್. ಸದಾಶಿವ, ಐಬಿಹೆಚ್ ಅನಂತರಾಮ್, ನವಕರ್ನಾಟಕದ ರಾಜಾರಾಮ್ ಮೊದಲಾದವರೆಲ್ಲ ನನ್ನ ಕಾದಂಬರಿಗಳನ್ನು ಪ್ರಕಟಿಸಿ ಸಹಕರಿಸಿದರು.

ಆದರೆ ಸಮಾಜಕ್ಕೆ ಅದರ ವ್ಯವಸ್ಥೆಗೆ ಅಜೀರ್ಣವಾಗುವಂಥ ನನ್ನ ಬರಹಗಳಿಂದ ನಾನು ಬೇರೆಯದೇ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಒಂದು ಮಾತು. ನಾನು ಕತೆ, ಕಾದಂಬರಿಗಳಲ್ಲಿ ಮಾತ್ರ ಧೈರ್ಯ ತೋರಿಸಿ, ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿ ಲಡಾಯಿಗೆ ಸೆಡ್ಡು ಹೊಡೆದು ನಿಲ್ಲುತ್ತೇನೆ ಅಷ್ಟೇ. ಅದೇ ಯಾರಾದರೂ ಎದುರು ಬಂದು ನಿಂತು ಜಗಳಕ್ಕೆ ಕಾಲು ಕೆರೆದರೆ ನನ್ನ ಎದೆ ಪುಕು ಪುಕು ಅನ್ನುತ್ತದೆ. ಆದರೆ ನನ್ನ ಬರಹ ನನಗೆ ಅಸಂಖ್ಯ ದೋಸ್ತರನ್ನು ಗಳಿಸಿಕೊಟ್ಟಂತೆ ಕೆಲವು ದುಶ್ಮನ್‌ರನ್ನು ಹುಟ್ಟುಹಾಕಿತ್ತು.

ಲಂಕೇಶ್ ಪತ್ರಿಕೆಯಲ್ಲಿ, ತರಕಾರಿ ಮಾರುವ ಹೆಂಗಸರ ಬಗ್ಗೆ, ಅವರ ಸಮಸ್ಯೆ, ಸಂಕಟ, ಅಸಹಾಯಕತೆಯ ಬಗ್ಗೆ, ಅವರಿಗೆ ದಿನನಿತ್ಯ ಹಿಂಸೆ ಕೊಡುವ ಗುಂಡಾಮವಾಲಿಯೊಬ್ಬನ ಬಗ್ಗೆ ಬರೆದೆ. ಅದು ಪತ್ರಿಕೆಯಲ್ಲಿ ಪ್ರಕಟವಾದ ಮರುದಿನವೇ ಪೋಲಿಸರು ಬಂದು ನಮ್ಮ ಮನೆಯ ಬಾಗಿಲು ತಟ್ಟಿದರು. "ಯಾರು ಆ ಗೂಂಡಾ? ಎಲ್ಲಿದ್ದಾನ್ರೀ?" ಅಂತ ನನಗೇ

ದಬಾಯಿಸಿದರು. "ಅದು ನೀವು ಹೇಳಬೇಕು" ಅಂದೆ. "ಸುಳ್ಳು ಸುಳ್ಳೇ ಏನೇನರೆ ಬರ್ದು ನಮ್ಮ ಡಿಪಾರ್ಟಮೆಂಟಿಗಿ ಅವಮಾನ ಮಾಡ್ತಿರೇನ್ರಿ? ಈ ಮಾರ್ಕೆಟನಾಗ ಹಿಂಗೆಲ್ಲಾ ನಡದಿದ್ದರೆ ನಮಗೆ ತರಕಾರಿ ಮಾರೋ ಹೆಂಗಸರು ಕಂಪ್ಲೆಂಟ್ ಕೊಡ್ತಿರಲಿಲ್ಲೇನು?" ಅಂತ ಜಬರಿಸಿದರು. ಪಾಪ...ಯಾವ ಹೆಂಗಸು ಅಂಥ ಗೂಂಡಾನ ವಿರುದ್ಧ ಪೋಲಿಸರ ಹತ್ತಿರ ತಕರಾರು ಒಯ್ಯು ತ್ತಾಳೆ? ಅದೂ ಈ ಪೋಲಿಸರೇನು ಶಾಜೋಗು?

"ನೋಡ್ರೀ... ತರಕಾರಿ ಮಾರ್ಕೆಟ್ಟಿನ್ಯಾಗ ಏನೇನು ನಡೀತದಂತ ನೀವು ಪತ್ತೆ ಹಚ್ಚಬೇಕು. ನಾನು ಬರೆದದ್ದು ಸುಳ್ಳೋ ಖರೇನೋ ಅಂತ ತಿಳ್ಕೊಂಡು ಬಂದು ನನ್ನ ಜತಿ ಮಾತಾಡ್ರಿ..." ಅಂತ ಹೇಳಿದೆ.

"ಹೂಂ...ಹೂಂ...." ಅಂತ ಭುಸುಗುಟ್ಟುತ್ತ ಬೂಟುಗಾಲಿನ ಆವಾಜು ಮಾಡುತ್ತ ಹೋದ ಆ ಇನ್ಸ್‌ಪೆಕ್ಟರ್ ಮತ್ತೆ ಎಂದೂ ನನ್ನನ್ನು ಮಾತಾಡಿಸುವ ಗೋಜಿಗೇ ಬರಲಿಲ್ಲ. ಆದರೆ ಜನರು ನನಗೆ ಆ ಗೂಂಡಾನ ಹೆದರಿಕೆ ಹಾಕತೊಡಗಿದರು.

"ಈ ವಿಷಯ ಆ ಗೂಂಡಾನಿಗೆ ತಿಳಿದರೆ ಅಂವ ನಿಮಗ ಸುಮ್ಮನ ಬಿಡಂಗಿಲ್ಲ ನೋಡ್ರಿ. ಹುಷಾರಾಗಿರ್ರಿ...." ಅಂದರು. ಗಂಡಸರಿಲ್ಲದ ಮನೆ ನಂದು. ನಾನು ಮತ್ತು ನನ್ನ ಎರಡು ಸಣ್ಣ ಮಕ್ಕಳು. ರಾತ್ರಿಯಾದರೆ ಸಾಕು ಹೆದರಿಕೆ ಶುರುವಾಗುತ್ತಿತ್ತು. ಗಾಳಿಗೆ ಬಾಗಿಲಕಂಡಿ ಸದ್ದು ಮಾಡಿದರೆ ಸಾಕು. ಅವನೇ ಬಂದನೇನೋ ಅಂತ ತಟ್ಟನೆ ಎದ್ದು ಕುಂತು ಮಕ್ಕಳ ಮೈ ಸವರುತ್ತಿದ್ದೆ. ಇಂಥದ್ದೆಲ್ಲ ಬರೆದು ಯಾಕೆ ಫಜೀತಿ ಪಡ್ಬೇಕು ಅಂತಲೂ ಅನ್ನಿಸುತ್ತಿತು. ಆದರೆ ನನ್ನ ಬರೆಯುವ ಚಟ ಸುಮ್ಮನಿರುತ್ತಿರಲಿಲ್ಲ. ಬರೆಯುವುದು ಬಿಟ್ಟರೆ ಭಣ ಭಣ ಅನ್ನಿಸುತ್ತದೆ.

ಸಂಗಾತಿ ಕತೆ 'ಸುಧಾ' ದಲ್ಲಿ ಪ್ರಕಟವಾಗಿತ್ತು. ಒಂದು ಹಳ್ಳಿಯಿಂದ ಗೌಡರ ಕಡೆಯ ಮಂದಿ ಬಂದು ಜಗಳಕ್ಕೆ ನಿಂತಿದ್ದರು. "ನಮ್ಮ ಗೌಡ್ತಿ ಬಗ್ಗೆ ನೀವು ಬರೆದದ್ದು ತಪ್ಪು. ಅಂತ. ನಾನು ಒಬ್ಬ ವಿಧವೆ ಗೌಡ್ತಿ ಮತ್ತವಳ ಮಾದಿಗ ಆಳು ಮಗನ ಪ್ರೀತಿ, ಪ್ರೇಮ, ಮರು ಮದುವೆಯ ಬಗ್ಗೆ ಬರೆದದ್ದು ಕಾಕತಾಳೀಯವಾಗಿ ಆ ಗೌಡ್ತಿಗೇ ಅನ್ವಯಿಸಿತ್ತು! ಅವರಿಗೆ ತಿಳಿಸಿ ಹೇಳಿ ಸಮಜಾಯಿಸಿ, ಅವರ ಸಿಟ್ಟು ಇಳಿಸಿ ಕಳಿಸಬೇಕಾದರೆ ನಾನು ಕಲಿತದ್ದೆಲ್ಲ ಖರ್ಚು ಮಾಡಬೇಕಾಯಿತು.

ಕುದುರೆ ಮೋತಿ ಪ್ರಕರಣದಲ್ಲಿ ನಾನು ಸ್ಥಳಕ್ಕೆ ಧಾವಿಸಿ, ಬೆತ್ತಲೆ ಮೆರವಣಿಗೆಗೆ ಒಳಗಾಗಿ ಘಾಸಿಗೊಂಡು ನೆಲಹಿಡಿದ ಹೆಣ್ಣುಮಕ್ಕಳಿಬ್ಬರೊಂದಿಗೆ ನಡೆಸಿದ ಸಂದರ್ಶನದ ವರದಿ 'ತರಂಗ'ದಲ್ಲಿ ಪ್ರಕಟವಾದಾಗ, ದಿನನಿತ್ಯ ಬರುತ್ತಿದ್ದ ಬೆದರಿಕೆಯ ಫೋನುಗಳು, ನನ್ನನ್ನು ಕೊಲ್ಲೇ ಬಿಡುತ್ತೇವೆಂಬ ಪತ್ರಗಳಿಂದ ನಾನು ಖರೇವಂದ್ರ ತಲ್ಲಣಗೊಂಡಿದ್ದೆ. ಇಂಥದ್ದೇ ಹೆದರಿಕೆಗಳು ನನ್ನ 'ಮಾಪುರ ತಾಯಿಯ ಮಕ್ಕಳು'' ಕಾದಂಬರಿ ಪ್ರಕಟವಾದಾಗಲೂ ಎದುರಿಸಬೇಕಾಗಿತ್ತು. ಇವೆಲ್ಲ ಕಹಿ ನೆನಪುಗಳು ಈಗಲೂ ಆಗಾಗ ಧುತ್ತೆಂದು ಬಂದು ನನ್ನ ಮುಂದೆ ನಿಂತು ಕಿಸಿ ಕಿಸಿ ನಗುತ್ತವೆ.

ನನಗೆ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ

ಪ್ರಶಸ್ತಿ, ನನ್ನ ಪುಸ್ತಕಗಳಿಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ದೊರಕಿದಾಗ ನನಗೆ ಖುಷಿಯಾಗಿತ್ತು ಖರೇ. ಆದರೆ ಆ ಖುಷಿಯಲ್ಲಿ ನಾನು ನಡೆದು ಬಂದ ದಾರಿಯಲ್ಲಿಯ ಕಲ್ಲು ಮುಳ್ಳು, ಕಂಟಿಕಮರಿಗಳನ್ನು ಮರೆಯಲು ಸಾಧ್ಯವಾಗಲೇ ಇಲ್ಲ. ಇತ್ತೀಚಿನ ನನ್ನ "ಬದುಕು" ಐದುನೂರು ಪುಟಗಳ ಬೃಹತ್ ಕಾದಂಬರಿಯನ್ನು ಪ್ರಕಟಿಸಿದವರು ಬಳ್ಳಾರಿಯ ಲೋಹಿಯಾ ಪ್ರಕಾಶನದ ಚನ್ನಬಸವಣ್ಣನವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಕಾದಂಬರಿಗೆ ಐದು ಪುರಸ್ಕಾರ ಪ್ರಶಸ್ತಿಗಳು ಬಂದಿವೆ. ನನ್ನ ಪುಸ್ತಕಗಳು ಬೇರೆ ಭಾಷೆಗೆ ತರ್ಜುಮೆಗೊಂಡಿವೆ. ಸಿನೇಮಾ, ಆಕಾಶವಾಣಿ, ದೂರದರ್ಶನಗಳಲ್ಲಿ ತೆರೆಕಂಡಿವೆ. ಇದೆಲ್ಲ ನೆನೆಸಿಕೊಂಡರೆ ಒಂದು ರೀತಿಯ ನೆಮ್ಮದಿ ಅನ್ನಿಸಿದರೂ ನನಗೆ ಸಂಪೂರ್ಣ ತೃಪ್ತಿ ಸಿಕ್ಕಿಲ್ಲ. ಬರೆಯುವುದರಲ್ಲಿ ಮರೆಯ ಬೇಕೆಂದಿದ್ದ ನನ್ನ ಬದುಕಿನ ವೈಯಕ್ತಿಕ ನೋವುಗಳು ಇನ್ನೂ ನನ್ನನ್ನು ಘಾಸಿಗೊಳಿಸುವುದು ನಿಲ್ಲಿಸಿಲ್ಲ. ಹಿಂದುಳಿದ ವರ್ಗದ ಬಡ, ಅನಕ್ಷರಸ್ಥ ಕುಟುಂಬದಲ್ಲಿ ಹುಟ್ಟಿ ಬಂದ ನನಗೆ ನನ್ನ ಜೀವನವೇ ಒಂದು ಸಂಘರ್ಷ. ಜೀವನದಲ್ಲಿ ಏನೆಲ್ಲ ಆಗಿ, ನನ್ನವರೆನ್ನಿಸಿಕೊಂಡ ಎಲ್ಲರನ್ನೂ, ಇಡೀ ನನ್ನ ಸಮಾಜವನ್ನೇ ಎದುರು ಹಾಕಿಕೊಂಡು ನಾಗಭೂಷಣನನ್ನು ಮದುವೆ ಯಾಗಿ ಸುಖವಾಗಿರುತ್ತೇನೆನ್ನುವ ಖಾತರಿಯೂ ಕುಸಿದಾಗ, ಧಾರವಾಡದಲ್ಲಿದ್ದು ಎಂ.ಎ. ಓದಬೇಕೆಂಬ ನನ್ನ ಸಣ್ಣ ಕನಸೂ ಬಣ್ಣ ಕಳೆದುಕೊಂಡು, ಬೂದಿಯಾದಾಗ, ಕತೆಕಾದಂಬರಿಗಳ ತೆಕ್ಕೆಗೆ ಓಡಿಬಂದೆ. ಈ ಬರಹದಲ್ಲಿಯೇ ನೆಮ್ಮದಿ ಸಿಗಬಹುದೇನೋ ಅನ್ನುವ ಹುಡುಕಾಟ ಇನ್ನೂ ಜಾರಿಯಲ್ಲಿದೆ. ಹೀಗೆಂದ ಮಾತ್ರಕ್ಕೆ ನನ್ನ ವೈಯಕ್ತಿಕ ನೋವುಗಳನ್ನು ಬಯಲಿಗಿಟ್ಟು, ಸಂಘರ್ಷವನ್ನು ಸಾರಿ, ಸಮಾಜದ ಸಹಾನುಭೂತಿ ಗಳಿಸುವ ಮನಸ್ಸು ನನಗೆ ಬಿಲ್‌ಕುಲ್ ಇಲ್ಲ. ಇನ್ನು ನನ್ನ ಬದುಕಿನ ಹೋರಾಟ, ಸಂಘರ್ಷಗಳು ಮುಂದಿನ ಬರಹಗಾರ್ತಿಯರಿಗೆ ಎಚ್ಚರಿಕೆಯ ಗಂಟೆಗಳಾಗುತ್ತವೆಂಬ ಭ್ರಮೆಗಳೂ ಇಲ್ಲ. ನನ್ನ ಪರಿಸರ, ನನ್ನ ನೋವು ಅಪಮಾನ ಗಳು, ನನ್ನ ಹೋರಾಟಗಳು - ಇವೆಲ್ಲ ನನ್ನವೇ. ಇವು ಅನ್ಯರಿಗೆ ಸಹಕಾರಿ ಹೇಗೆ ಆದವು? ಇತ್ತೀಚೆಗೆ ಆತ್ಮಚರಿತ್ರೆ ಬರೆಯುವ ಹುಚ್ಚು ಹಿಡಿದಂತಿದೆ ಸಾಹಿತಿಗಳಿಗೆ. ಬರೆದರೆ ತಮ್ಮ ತೀರ ವೈಯಕ್ತಿಕ ಬದುಕನ್ನೆಲ್ಲಾ ಬಯಲಾಗಿಸುವ ಛಾತಿವಂತಿಕೆಯಿರಬೇಕು. ಕೆಲವನ್ನು ಪವಾಡವೆಂಬಂತೆ ವೈಭವೀಕರಿಸಿ ಮತ್ತೆ ಕೆಲವುದರ ಮೇಲೆ ಪಾವಡ ಮುಚ್ಚಿ ಓದುಗರಿಗೆ ಗುಮಾನಿ ಬರುವಂಥ ಜೀವನಚರಿತ್ರೆಗಳಿಂದ ಏನು ಲಾಭ?

ಕೆಲವು ಹಿರಿಯರು ನಮ್ಮ ಲೇಖಕಿಯರ ಬಗ್ಗೆ ಎಲ್ಲಿಲ್ಲದ ಕೃತ್ರಿಮ ಕಾಳಜಿ ತೋರಿಸುತ್ತಿದ್ದಾರೆ ಈಗೀಗ. ಆ ಮಾತುಗಳು ಕನ್ನಡದ ಲೇಖಕಿಯರಿಗೆ ಬುದ್ಧಿ ಮಾತುಗಳು ಅಥವಾ ಕಿವಿ ಮಾತುಗಳಂತೆ ಮೇಲ್ನೋಟಕ್ಕೆ ಕಂಡು ಬಂದರೂ ಅದರೊಳಗಿನ ವ್ಯಂಗ್ಯ ತಣ್ಣಗೆ ಮೈ ಕೊರೆಯುತ್ತದೆ. ಹಿಂಸೆ ಚೇಳಿನ ಕೊಂಡಿಯ ವಿಷ ಮುಳ್ಳಿನಂತೆ ಕಟುಕುತ್ತದೆ. ಆ ಮಾತುಗಳು ಅದೆಷ್ಟು ಕಾಳಜಿ ಕುಕ್ಕಲತೆಯಿಂದ ಕೂಡಿದವುಗಳಾಗಿರುತ್ತವೆಂದರೆ ನಮಗೇ ಕಕ್ಕಾಬಿಕ್ಕಿಯಾ ಗುತ್ತದೆ. ಒಮ್ಮೆ ನನಗೇ ಅವು ಪ್ರಶ್ನೆಗಳಾಗಿ ಬಂದು ದಾರಿಗಡ್ಡ ಗಟ್ಟಿ ನಿಂತಿದ್ದುವು. "ನಮ್ಮಲ್ಲಿ ಅಮೃತಾ ಪ್ರೀತಮ್, ಮಹಾದೇವಿ ವರ್ಮಾ, ಮಾಧವಿ ಕುಟ್ಟಿ, ಇಂದಿರಾಗೋಸ್ವಾಮಿಯವರಂಥ

ಲೇಖಕಿಯರು ಇನ್ನೂ ಯಾಕೆ ಹುಟ್ಟಿ ಬಂದಿಲ್ಲ?'' ಇಂಥ ಪ್ರಶ್ನೆ ಕನ್ನಡ ಲೇಖಕಿಯರ ಕಪಾಳಕ್ಕೆ ತಟ್ಟನೆ ಹೊಡೆದು, ಅವರ ಅಸಮರ್ಥತೆಯನ್ನು ಸಾರುತ್ತ ಅಪಮಾನಿಸುತ್ತವೆ. ನೀವು ಅವರಂತೆ ಬರೆಯಲಾರಿರಿ ಅನ್ನುವ, ನಮ್ಮನ್ನು ಅಂಡರ್ ಎಸ್ಟಿಮೇಟ್ ಮಾಡುವ ಯಾವ ಮೂಲಾಜೂ ಇಲ್ಲದೆ, ಸಾಲಿನಲ್ಲಿ ಸುತ್ತಿ ಹೊಡೆದ ಚಪ್ಪಲಿ ಏಟುಗಳು ಇವು!

ಗಂಡಸರೇ ಆಗಲಿ ಹೆಂಗಸರೇ ಆಗಲಿ, ಬರಹಗಾರರ ಬರಹಗಳು ಆಯಾ ಲೇಖಕರು ಹುಟ್ಟಿದ ಕುಟುಂಬ, ಬೆಳೆದ ಪರಿಸರ, ಎದುರಿಸಿದ ಸವಾಲುಗಳು, ಬರೆಯಲು ನೂಕಿದ ಜರೂರತ್ತುಗಳನ್ನು ಅವಲಂಬಿಸಿರುತ್ತವೆ. ಬದುಕು ಕೊಡಮಾಡಿದ ಒತ್ತಡಗಳ ಅನುಭವದ ಹಿನ್ನೆಲೆಯೇ ವ್ಯಕ್ತಿಯ ಸಾಹಿತ್ಯ ಕೃತಿಗಳನ್ನು ಹುಟ್ಟುಹಾಕುವ ತಾಕತ್ತು. ನೆರೆ ರಾಜ್ಯದ ಲೇಖಕಿಯರು ಬೆಳೆದ ಪರಿಸರ, ಸಮಸ್ಯೆ, ಸವಾಲುಗಳು, ಅವರನ್ನು ಬರೆಯಲು ಬಲವಂತ ಮಾಡಿದ ಜರೂರತ್ತುಗಳೇ ಬೇರೆ. ನಮ್ಮವರದ್ದೇ ಬೇರೆ. ಹೀಗಿರುವಾಗ ಅವರಂತೆ ನಾವು ಬರೆಯುವುದಾದರೂ ಹೇಗೆ? ಬರೆಯ ಬೇಕಾದರೂ ಯಾಕೆ? ನಾವು ನಮ್ಮ ಅಸಲೀತನವನ್ನು ಉಳಿಸಿಕೊಂಡು ಬರೆದು ಬೆಳೆಯಬೇಕೇ ಹೊರತು ಅನ್ಯರನ್ನು ಅನುಸರಿಸಲು ಹೋಗಿ ಭ್ರಮೆಯ ಬೆನ್ನು ಹತ್ತಬಾರದು. ಪ್ರಶಸ್ತಿ ಪುರಸ್ಕಾರಗಳೇ ಒಬ್ಬ ಸಾಹಿತಿಯ ಸಾಮರ್ಥ್ಯವನ್ನು ಅಳೆಯುವ ಖರೇ ಅಳತೆಗೋಲುಗಳಲ್ಲ ಎಂಬ ಮಾತನ್ನು ಮರೆಯಲಾಗದು. ಹಾಗೆ ನೋಡಿದರೆ ಖರೇ ಕಾಳಜಿಯ, ಗಟ್ಟಿ ಲೇಖಕರ್‍ಯಾರೂ ಪ್ರಶಸ್ತಿ ಪುರಸ್ಕಾರಗಳಿಗಾಗಿ ಬರೆಯುವುದೇ ಇಲ್ಲ. ಅವು ಮನೆಯ ಮುಂದೆ ಬಂದು ನಿಂತು ಬಾಗಿಲು ತಟ್ಟಿದಾಗ ಬರ್‍ರಿ ಅಂತ ಕದ ತೆರೆಯಬೇಕೇ ವಿನಃ ಅವುಗಳ ಬೆನ್ನು ಹತ್ತಿ ಓಡಬಾರದು. ಇವು ಯಾವುದಕ್ಕೂ ಹಿಗ್ಗದೆ ಕುಗ್ಗದೆ, ಮಂತ್ರಿಗಳ ಮನೆಯ ಮುಂದೆ ನಿಂತು ಹಸ್ತ ಹೊಸೆದು ಹಲ್ಲುಗಿಂಜದೆ, ನಮ್ಮ ಕೆಲಸವನ್ನು ನಾವು ಪ್ರಾಮಾಣಿಕವಾಗಿ ಜಾರಿಯಲ್ಲಿಟ್ಟರೆ ಅದೇ ಸಾಕು.

ಆದರೆ ಇಂಥ ಪ್ರಶ್ನೆ ಕೇಳುವವರು ಗಂಡಸರೇ ಅನ್ನುವುದು ಗಮನಿಸಬೇಕಾದಂಥ ಅಂಶ. ಮಹಿಳೆಯರು ಪುರುಷ ಸಾಹಿತಿಗಳಿಗೆ ಇಂಥ ಪ್ರಶ್ನೆಯನ್ನು ಬಹುಶಃ ಕೇಳುವುದಿಲ್ಲವೇನೋ... ಆದರೆ ಪುರುಷರು ಮಾತ್ರ ಒಂದು ರೀತಿಯ ಕೊಂಕಿನಿಂದಲೇ ಇಂಥ ಪ್ರಶ್ನೆಗಳನ್ನು ಮಹಿಳಾ ಸಾಹಿತಿಗಳಿಗೆ ಹಾಕುತ್ತಿರುತ್ತಾರೆ. ಕಾರಣ ಈ ವ್ಯವಸ್ಥೆ ಅವರಿಗೇ ಪ್ರಾಧಾನ್ಯತೆಯನ್ನು ಕೊಟ್ಟು ಮನೆಯ ಯಜಮಾನನ ಪಟ್ಟ ಕಟ್ಟಿದೆಯಲ್ಲ! ಅದಕ್ಕೆ, ಕೇಳುವ ಹಕ್ಕು ತಮ್ಮದೇ ಅಂತ ಅವರು ತಿಳಿದುಕೊಂಡಿರುತ್ತಾರೆ ಪಾಪ! ಗಂಡನೆಂಬ ಒಂದೇ ಕಾರಣದಿಂದಾಗಿ ಅವನಿಗೆ ದಕ್ಕುವ ಮನೆಯ ಮಾಲೀಕನ ಕುರ್ಚಿ, ಈ ಕುರ್ಚಿಯ ಮೇಲೆ ಕುಂತು ಹೆಣ್ಣಿನ ಬದುಕಿನ ಸುತ್ತ ಪಂಜರ ಕಟ್ಟುವ ಹುನ್ನಾರು, ಆ ಕುಟುಂಬದ ಪರಿಮಿತಿಯಲ್ಲೇ ಅವಳ ಅನುಭವಕ್ಕೆ ಸೆರೆವಾಸದ ಸಜೆ ವಿಧಿಸುವ ಗಂಡಸಿನ ಚಾಲಾಕುತನದಿಂದಾಗಿ ಹೆಣ್ಣುಗಳಿಗೆ ಹೊರಜಗತ್ತಿನ, ಹೊಸ ಅನುಭವಗಳನ್ನು ತಮ್ಮದಾಗಿಸಿಕೊಂಡು ಹೊಸ ದಾಖಲೆಗಳನ್ನು ಸೃಷ್ಟಿಸುವುದು ಕಷ್ಟಸಾಧ್ಯವಾಗುತ್ತಿರುವುದಂತೂ ಸುಳ್ಳಲ್ಲ. ಗಂಡಸು ಬರೆದುದನ್ನೆಲ್ಲ ದೂಸರಾ ಮಾತಿಲ್ಲದೆ ಒಪ್ಪಿಕೊಂಡು, ಹೆಮ್ಮೆಯಿಂದ ಹೇಳಿಕೊಂಡು, ಪ್ರಚಾರ ಮಾತುಗಳನ್ನು ಹಾಕಲಾಗುತ್ತದೆ.

ಅದೇ ಹೆಣ್ಣು ಬರೆಯುವ ಕ್ರಿಯೆಯ ಬಗ್ಗೆಯೇ ಸಂದೇಹ ಪಡುತ್ತೇವೆ. ತಕ್ಕಡಿಯಲ್ಲಿಟ್ಟು ತರಕಾರಿಯಂತೆ ಅವರ ಬರಹಗಳ ತಾಕತ್ತನ್ನು ತೂಗಿ ನೋಡುತ್ತೇವೆ. ಕಚ್ಚಿ ತಿಂದು ಕಿಮ್ಮತ್ತು ಕಟ್ಟುವ ಗಿರಾಕಿಯಂತೆ ಚೌಕಾಶಿಗಿಳಿಯುತ್ತೇವೆ. ನೋವು, ಅವಮಾನ, ಲೈಂಗಿಕ ಕಿರುಕುಳಗಳ ಬಗ್ಗೆ ಹೆಣ್ಣು ಧೈರ್ಯ ಮಾಡಿ ಬರೆದಾಗ ಅವಳ ಚಾರಿತ್ರ್ಯದ ಬಗ್ಗೆಯೇ ಗುಮಾನಿ ಪಡುತ್ತೇವೆ. ಅದರ ಹಿಂದಿರುವ ಕಾರಣಗಳನ್ನು ನಮಗನ್ನಿಸಿದಂತೆ ನಾವೇ ಸೃಷ್ಟಿಸಿಕೊಂಡು ಅವಕ್ಕೆ ಭೂತಗನ್ನಡಿ ಹಿಡಿಯುತ್ತೇವೆ. ಕಾಮಾಲೆಯ ಕಣ್ಣುಗಳಿಂದ ಅವುಗಳನ್ನು ನೋಡುತ್ತ ಅವುಗಳಿಗೆ ಹಳದೀ ಜಾಕೀಟು ಹೊಲೆದು ಹಾಕುತ್ತೇವೆ. ಇದು ಬರೀ ಗಂಡಸರೇ ಅಲ್ಲ ಕೆಲವು ಹೆಂಗಸರೂ ಮತ್ತು ಬುದ್ಧಿ ಜೀವಿಗಳೆನ್ನಿಸಿಕೊಳ್ಳುವ ಕೆಲವರೂ ಸಹ ಈ ಹುನ್ನಾರಿನಲ್ಲಿ ಶಾಮೀಲಾಗಿರುವುದು ನೋವಿನ ಸಂಗತಿ. ಇದರ ಬಗ್ಗೆ ಗಂಭೀರ ಚಿಂತನೆ ನಡೆಯಬೇಕಾದದ್ದು ಈ ದಿನಗಳ ತುರ್ತು ಬೇಡಿಕೆಯಾಗಿದೆ.

ಇಂದಿನ ಲೇಖಕಿಯರೆಲ್ಲ ಗರತಿ ಗಂಗವ್ವನ ಪಟ್ಟ ಬೇಡುವ, ಪತಿವ್ರತೆಯರಾಗ ಬಯಸಿದರೆ ಮಾತ್ರ ಫಲವಿಲ್ಲ. ಅಗ್ನಿದಿವ್ಯ, ಸರ್ಪದಿವ್ಯಗಳಂಥ ಜೀವಕೊಲ್ಲುವ ದಿವ್ಯಗಳಿಗೆ ತಮ್ಮನ್ನೇ ತಾವು ಒಡ್ಡಿಕೊಂಡು ಗೆದ್ದು ಬರಬೇಕಾದುದು ಅನಿವಾರ್ಯ. ನಮ್ಮ ಚರಿತ್ರೆಯುದ್ದಕ್ಕೂ ಗಂಡಸು ಒಡ್ಡುವ ಇಂಥ ದಿವ್ಯಗಳನ್ನು ಒಪ್ಪಿಕೊಂಡು ಗೆದ್ದು ಬಂದೇ ಹೆಂಗಸರು ತಮ್ಮ ಗರತಿತನವನ್ನು, ಸಾಮರ್ಥ್ಯವನ್ನು ಸಾಬೀತು ಪಡಿಸಿದುದು ಸಂಪ್ರದಾಯವೇ ಅನ್ನುವಂತೆ ಬೆಳೆದು ಬಂದದ್ದು ಸುಳ್ಳಲ್ಲ. ಇಂದೂ ನೀವು ನಮ್ಮ ಬರಹದ ಗಟ್ಟಿತನವನ್ನು, ಸತ್ವವನ್ನು ಗಂಡಸ ರೊಡ್ಡುವ ಇಂಥ ದಿವ್ಯಗಳನ್ನು ಗೆದ್ದೇ ಸಾಧಿಸಿ ತೋರಿಸಬೇಕಾಗಿದೆ. ಗೆಲ್ಲುವ ಛಲಮಾತ್ರ ನಮ್ಮಲ್ಲಿರಬೇಕು. ಮಹಿಳಾ ಸಾಹಿತಿಗಳಿಗೆ ಇದು ಸಂದಿಗ್ಧ ಕಾಲ. ಇವೇ ದಿನಗಳು ಯಾವಾಗಲೂ ಇರುವುದಿಲ್ಲ ವೆಂಬುದನ್ನೂ ಮರೆಯಬಾರದು. ಪೂರ್ವಾಗ್ರಹ ಪೀಡಿತರಲ್ಲದ, ಆರೋಗ್ಯವಂತ ಮನಸ್ಸಿನ ವಿಮರ್ಶಕರು ಹುಟ್ಟಿ ಬಂದೇ ಬರುತ್ತಾರೆ. ಸ್ವಲ್ಪ ತಾಳ್ಮೆಯಿಂದ ಕಾಯಬೇಕು ಅಷ್ಟೆ.

●

## ಲೇಖನಗಳು

## ಹೊಸ ನಿರೀಕ್ಷೆಯ 'ಅಭಿನವ ಶಾಕುಂತಲ'

ಜಯಶ್ರೀ ಹೆಗಡೆ

ಮಾಸ್ತಿಯವರ "ಸಣ್ಣ ಕತೆಗಳು ಭಾಗ ೫" ರಲ್ಲಿ "ಹೇಮಕೂಟದಿಂದ ಬಂದ ಮೇಲೆ" ಕೇವಲ ೧೨ ಪುಟಗಳ ಸಣ್ಣ ಕತೆ. ರಾಕ್ಷಸ ಸಂಹಾರ ಕೆಲಸವನ್ನು ಮುಗಿಸಿಕೊಂಡು ಮರಳುವಾಗ, ದಾರಿಯಲ್ಲಿ ಹೇಮಕೂಟ ಪರ್ವತದಲ್ಲಿ ನೆಲೆಸಿದ್ದ ಮಾರೀಚ ಋಷಿಗಳ ಆಶ್ರಮದಲ್ಲಿ ಏಳು ವರ್ಷಗಳಿಂದ ಅಗಲಿದ ಶಕುಂತಲೆ - ದುಷ್ಯಂತರ ಸಮಾಗಮ ಸಾಧ್ಯವಾಗುತ್ತದೆ. ಇದು ಕಾಳಿದಾಸನ ಲೋಕ ಪ್ರಸಿದ್ಧ "ಅಭಿಜ್ಞಾನ ಶಾಕುಂತಲ"ದ ಸುಖಾಂತ್ಯ. ಹೀಗೆ ಬದುಕಿನ ಅಭದ್ರತೆ ಕೊನೆಗೊಂಡು ಅರಮನೆ ಸೇರಿದ ಶಕುಂತಲೆ ಸಹಜವಾಗಿಯೇ ತಾನು ಬಿಟ್ಟು ಬಂದ ತವರನ್ನು ನೋಡಬೇಕೆಂಬ ಅಪೇಕ್ಷೆಯಿಂದ ಕಣ್ವಾಶ್ರಮಕ್ಕೆ ಪಯಣಿಸುವ ಒಂದು ಚಿಕ್ಕ ಘಟನೆಯ ಸುತ್ತ ಮಾಸ್ತಿಯವರು ಈ ಕಥೆಯನ್ನು ಕಲ್ಪಿಸಿದ್ದಾರೆ. ಆಯಾ ಪಾತ್ರಗಳ ಔಚಿತ್ಯವರಿತು, ಹಿತಮಿತವಾಗಿ, ಮೇರೆಮೀರದ ಪ್ರಶಾಂತ ನಡಿಗೆ, ಮಾಸ್ತಿಯವರಿಗೆ ವಿಶಿಷ್ಟವಾದ ರೀತಿ. ಒಮ್ಮೊಮ್ಮೆ ಇದು ಸನ್ನಿವೇಶಕ್ಕೆ ಸ್ವಾರಸ್ಯವನ್ನೇ ಕೊಡದ ಸಪ್ಪೆ ಸಂಯಮವಾಗಿ ಬಿಡುವುದೇನೋ ನಿಜ. ಆದರೆ ಪ್ರಕ್ಷುಬ್ಧತೆ, ಅಶಾಂತಿ, ಅತೃಪ್ತಿಗಳು ಮಾಸ್ತಿಯವರ ದರ್ಶನವಲ್ಲ ಎಂಬುದನ್ನು ನಾವು ಮರೆಯಬಾರದು. ವಿವೇಕ ಪೂರ್ಣದಾರಿಯೆ ಅವರ ಆಯ್ಕೆ. ಪ್ರಸ್ತುತ ಕಥೆಯಲ್ಲಿ ತಾನು ಈಗ ಕೇವಲ ಆಶ್ರಮವಾಸಿ ಕನ್ಯೆಯಲ್ಲ. ಆರ್ಯಾವರ್ತದ ಮಹಾರಾಜ ದುಷ್ಯಂತನ ರಾಣಿ ಎನ್ನುವುದನ್ನು ಮರೆಯದೆ, ತನ್ನ ಬಾಲ್ಯ, ತಾರುಣ್ಯಗಳ ಭಾವ ಸ್ಥಾನದ ಸಂಗಮದಲ್ಲಿಯೂ ಶಕುಂತಲೆ ತನ್ನನ್ನು ನಿಯಂತ್ರಿಸಿಕೊಳ್ಳುವಳು. - ಸರಿ. ಬಾಲ್ಯವನ್ನು ಮುಗ್ಧಗೊಳಿಸಿದ ಪ್ರತಿಯೊಂದು ಸ್ಥಾನವನ್ನು, ತಾರುಣ್ಯಕ್ಕೆ ಉತ್ಸಾಹ ತುಂಬಿದ, ಪ್ರತಿಯೊಂದು ಎಡೆಯನ್ನು ಮತ್ತೆ ಮುಟ್ಟಿದಳು, ತುಳಿದಳು, ತಟ್ಟಿದಳು. ಮಾಸ್ತಿ ಬರೆಯುತ್ತಾರೆ - "ಅಂದಿನ ಆ ಉಲ್ಲಾಸವೇನು, ಆ ಸರಳ ಭಾವನೆ ಏನು.....ಶಕುಂತಲೆ ಬಹಳ ಖಿನ್ನಳಾದಳು. ಅವಳ ಅಂದಿನ ಬಾಳು ಯಾರದೋ ಬೇರೆಯೊಬ್ಬರ ಬಾಳೆಂಬಂತೆ ಕಂಡಿತು......ಹಿಂದೆ ಅವಳು ಆಶ್ರಮದಿಂದ ಹೊರಟ ಸಂದರ್ಭ ಅವಳಿಗೂ ಉಳಿದೆಲ್ಲರಿಗೂ ಚೆನ್ನಾಗಿ ನೆನಪುಂಟು...ಶಕುಂತಲೆಗೆ ಮಾತ್ರ ಮನಸ್ಸಿನ ಸ್ಥಿತಿ ಅಂದಿನ ಸ್ಥಿತಿಯಿಂದ ಬಹಳ ಬೇರೆಯಾಗಿರಲಿಲ್ಲ. ಕಾರಣವರಿಯದೆ ಅವಳು ಅಂದಿನಂತೆಯೇ ಉತ್ಕಂಠಿತೆಯಾಗಿದ್ದಳು.....ನೋವನ್ನು ಕಾಣದೆ ನಕ್ಕ ನಗೆಯೇ ನಗೆ: ನೊಂದು ನೋವವನ್ನು

ನುಂಗಿ ಆಮೇಲೆ ನಗುವ ನಗೆ ನಗೆಯಲ್ಲ...." ಎಂಥಾ ಅದ್ಭುತ ಸಂವೇದನೆ! ಕಾಡಿನ ಸ್ವಚ್ಛಂದ ಪರಿಸರದಲ್ಲಿ ಜಿಂಕೆಯೊಂದಿಗೆ ಮಾಧವೀ ಲತೆಯೊಂದಿಗೆ, ಮಾಲಿನೀ ತೀರದಲ್ಲಿ ಬೆಳೆದ ಮುಗ್ಧ ಬಾಲೆಯೊಬ್ಬಳು, ಅರಮನೆಯ ಬದುಕನ್ನು ಆಯ್ಕೆ ಮಾಡಿಕೊಂಡು ಎದುರಿಸಿದ ಆಘಾತ, ಬಿದ್ದ ಪೆಟ್ಟುಗಳು, ಸಹಿಸಿದ ವೇದನೆಯೊಂದನ್ನೂ ಮಾಸ್ತಿ ಬರೆಯುವುದಿಲ್ಲ. ಇದೆಲ್ಲದರ ಪರಿಣಾಮವನ್ನು ನಾಲ್ಕು ವಾಕ್ಯಗಳಲ್ಲಿ ಚಿತ್ರಿಸಿರುತ್ತಾರೆ. ಪ್ರತಿಫಲದ ಮೂಲಕ ಅದಕ್ಕೆ ಕಾರಣ ವಾದ ಕಾರ್ಯ ಪರಂಪರೆಯ ಊಹೆಯತ್ತ ಕೊಂಡೊಯ್ಯುತ್ತಾರೆ. ಇಂದಿನ ಶಕುಂತಲೆಯ ಮನಃಸ್ಥಿತಿಗೆ ಕಾರಣವಾದ ಬದುಕಿನ ದಾರುಣತೆಯನ್ನು ಬರೆಯದೆ ಕಟ್ಟಿಕೊಡುತ್ತಾರೆ. ಕಥೆಯ ಕೊನೆಯ ಈ ಒಂದು ಸಣ್ಣ ಸಂವೇದನೆಗಾಗಿ ಮಾಸ್ತಿ ಹನ್ನೆರಡು ಪುಟಗಳನ್ನು ಬರೆದರು ಎನಿಸಿಬಿಟ್ಟಿತು. ಇಲ್ಲ, ಈ ನಾಲ್ಕು ಮಾತುಗಳನ್ನು ಬರೆದಾಗ ಆ ಪುಟಗಳು ಇದಕ್ಕಾಗಿ ದುಡಿದವು.

ಮರಳಿ ದುಷ್ಯಂತನ ಅರಮನೆಯನ್ನು ಸೇರಿದ ಶಕುಂತಲೆಯ ಮೊದಲ ಅನಿಸಿಕೆ-ತನ್ನ ಕ್ಷೇಮಕ್ಕಾಗಿ ತುಡಿಯುವ ಆಶ್ರಮದ ಜೀವಗಳಿಗೆ ತನ್ನ ಕುಶಲವನ್ನು ತಿಳಿಸಬೇಕು ಎಂದು. ಆದರೆ ಬದುಕು ಅವಳಿಗೆ ಸಾವಧಾನತೆಯನ್ನು ಕಲಿಸಿದೆ. ಎಷ್ಟೋ ದಿನಗಳವರೆಗೆ ತನ್ನ ಮನಸ್ಸನ್ನು ನಿಯಂತ್ರಿಸಿಕೊಂಡು ನಿಧಾನವಾಗಿ ತನ್ನ ಬಯಕೆಯನ್ನು ದುಷ್ಯಂತನಿಗೆ ತಿಳಿಸುತ್ತಾಳೆ. ಮಾಸ್ತಿ ಇದನ್ನು ಎಷ್ಟು ನಿರ್ವಿಕಾರವಾಗಿ ಚಿತ್ರಿಸುತ್ತಾರೆಂದರೆ - ಈ ನಡವಳಿಕೆ ಅವಳಿಗೆ ತೀರ ಅನಿವಾರ್ಯ ಸಹಜವೆಂಬಂತೆ, ಅಲ್ಲಿ ಯಾವ ತೀವ್ರ ತುಡಿತಕ್ಕೂ ಅವಕಾಶವಿಲ್ಲ. ಯಾಕೆಂದರೆ ಮಾಸ್ತಿ ವಸ್ತು ಸ್ಥಿತಿಯನ್ನು ಒಪ್ಪಿಕೊಂಡವರು. ವಾಸ್ತವದೊಂದಿಗೆ ಹೊಂದಾಣಿಕೆ ಅವರಿಗೆ ಒಪ್ಪಿತ. ಹಾಗಂತ ಅನಪೇಕ್ಷಿತ ಅನುದಾತ್ತ ಸ್ಥಿತಿಯನ್ನು ಎಂದೂ ಅವರು ಪ್ರೋತ್ಸಾಹಿಸಲಾರರು. ಅವರ ಬಗೆಗೆ ಅವರಿಗೆ ತೀವ್ರ ಕಳವಳವಿದೆ - ಆದರೆ ಪ್ರತಿಭಟನೆ ಅವರ ಜಾಯಮಾನವಲ್ಲ. ಅದೇನೇ ಇರಲಿ, ಲೋಕ ವಿಖ್ಯಾತ ಶಾಕುಂತಲದ ಸುಖಾಂತ್ಯದ ತೆರೆಯ ಮರೆಯ ನೋವಿನ ಎಳೆಯನ್ನು ಎತ್ತಿಕೊಂಡು ಮೀಟಿ ಬಿಟ್ಟಿದ್ದಾರೆ ಮಾಸ್ತಿ. ಅದರ ಅನುರಣನ ನನಗೆ ಕೇಳತೊಡಗಿತು. ಸಾವಿರ ಶಕುಂತಲೆಯರ ಆಂತರ್ಯ ನನ್ನೊಳಗೆ ಭೋರ್ಗರೆಯ ತೊಡಗಿತು. ಇದು ಸಾಧುವಲ್ಲ, ಇದು ಎಲ್ಲಿಯವರೆಗೆ ಅನಿವಾರ್ಯ? ನೋವಿನ ಆಳವನ್ನು ಅಗೆಯುತ್ತ ಕೂಡುವ ಅಸಹಾಯಕತೆಗೆ ಕೊನೆಯೇ ಇಲ್ಲವೇ? ಬರೀ ವೇದನೆಯನ್ನ ಚಿತ್ರಿಸುತ್ತ ಹೋಗುವುದರ ಅರ್ಥವೇನು? ಇದಕ್ಕೆ ಪರಿಹಾರ ಸಾಧ್ಯವಿಲ್ಲ ಅಂತಲೇ? ಅದರ ಹುಡುಕಾಟ ನನ್ನ ಅಗತ್ಯ ವಾಯಿತು. ಆ ದಿಕ್ಕಿಗೆ ಕೈ ಚಾಚುವ ಪ್ರಯತ್ನ ಅಭಿನವ ಶಾಕುಂತಲ. ಇದನ್ನಲ್ಲದಿದ್ದರೆ ಮತ್ತೇನನ್ನಾದರೂ ಬರೆಯಲೇ ಬೇಕಿತ್ತು, ಹೆಸರು ಬೇರೆಯಾಗಬಹುದಿತ್ತು ಅಷ್ಟೆ.

ನಾಟಕ ಬರೆದು ಮುಗಿಸಿದ ನಂತರ ನನ್ನ ಮುಂದೆ ಒಂದೆರಡು ಪ್ರಶ್ನೆಗಳಿವೆ. ಈ ವಸ್ತುವನ್ನೇ ಯಾಕೆ ಆಯ್ದುಕೊಂಡೆ, ಹಾಗೆ ನೋಡಿದರೆ ಈ ನಾಟಕದ ಕೇಂದ್ರವಾಗಿರುವ ಸಮಸ್ಯೆಗೆ, ವರ್ತಮಾನದ ಸನ್ನಿವೇಶ, ಪಾತ್ರ, ಪರಿಹಾರಗಳು, ಹೆಚ್ಚು ಸುಲಭವಾಗಿಯೇ ಒದಗುತ್ತಿರಲಿ ಲ್ಲವೇ? ಇತಿಹಾಸ-ಪುರಾಣ ಕಾವ್ಯ-ನಾಟಕಗಳಿಗೆ ಸೇರಿದ ವಸ್ತುವಿನ ಆಯ್ಕೆ ಕೆಲವು ದೃಷ್ಟಿಯಿಂದ ಸಮಸ್ಯೆಯನ್ನೇ ತಂದೊಡ್ಡುತ್ತದೆ. ವರ್ತಮಾನದ ಸನ್ನಿವೇಶಕ್ಕೆ ಸ್ಪಂದಿಸುವುದಕ್ಕೂ ಭೂತಕ್ಕೆ

ಸಂದುಹೋದ ಪರಿಸರದ ಪ್ರವೇಶಕ್ಕೂ ತೀವ್ರ ವ್ಯತ್ಯಾಸಗಳಿವೆ. ನಾನು ಹುಡುಕ ಹೊರಟ ಪರಿಹಾರ ನಾಟಕದಲ್ಲಿ ಸಿಕ್ಕಿದೆಯೆ?

ವ್ಯಾಸರ ಶಕುಂತಲೋಪಾಖ್ಯಾನದ ಶಕುಂತಲೆಯಾಗಲಿ, ಕಾಳಿದಾಸನ ಕಾವ್ಯ ನಾಯಕಿಯಾಗಲಿ, ವಾಲ್ಮೀಕಿಯ ಸೀತೆಯಾಗಲಿ ಅನುಭವಿಸಿದ ಅಸಹಾಯಕತೆಯಲ್ಲಿ ಸಾವಿರಾರು ವರ್ಷಗಳು ಸಂದರೂ ವ್ಯತ್ಯಾಸವಾಗಿಲ್ಲವೆನ್ನುವುದನ್ನ ಗಮನಿಸಬೇಕು. ಇವರೆಲ್ಲ ಯಾವ ದುಃಖಾಗ್ನಿಯಲ್ಲಿ ಬೆಂದು, ಯಾತನೆಯ ಮಡುವಿನಲ್ಲಿ ಮಿಂದು ಶುಚಿರ್ಭೂತರಾಗಿ, ಲೋಕದೆದುರು ಪಾವನೆಯರಾಗಿ ನಿಂತಿದ್ದಾರೋ, ಅದೇ ಪ್ರಕ್ರಿಯೆಯೇ ಅವರ ಅಸಹಾಯಕತೆಯನ್ನು ನಿರರ್ಥಕ ಬದುಕನ್ನು ಧ್ವನಿಸುವ ವ್ಯಂಗ್ಯದತ್ತ ನಮ್ಮ ಸ್ಪೊಟ್ ಲೈಟ್ ಕೇಂದ್ರೀಕೃತವಾಗಬೇಕಾಗಿದೆ. ವಿಪರ್ಯಾಸದ ವಿಷಯವೆಂದರೆ, ಲೋಕ ಮಾತೆಯರಾಗಿರುವ ಇತಿಹಾಸ - ಪುರಾಣದ ಇಂಥ ಪಾತ್ರಗಳು ಸಾವಿರಾರು ವರ್ಷಗಳ ನೋವಿನ ನಿರಂತರತೆಗೆ ಸಾಕ್ಷಿ, ಸಂಕೇತಗಳಾಗುತ್ತಿವೆ. ಮುಸುಕಿನೊಳಗಿನ ಗುದ್ದು ಇಂದು ಬಯಲಾಗಬೇಕಿದೆ. ಯಾವ ಸಮಾಜ ಸ್ತ್ರೀಯರಿಗೆ ದೈವತ್ವವನ್ನು ಆರೋಪಿಸಿ ಪೂಜಿಸುವ ನಾಟಕವಾಡುತ್ತಿದೆಯೋ ಅವರ ಬದುಕನ್ನು ಹಾಡುಹಗಲೇ ದರೋಡೆ ಮಾಡಿದೆ. ಪಂಚಕನ್ಯೆಯರಲ್ಲಿ ಮೊದಲ ಸ್ಥಾನ ಸೀತೆಗೆ! ಯಾಕೆಂದರೆ ಅಗ್ನಿದಿವ್ಯ ಸೀತಾಪರಿತ್ಯಾಗವೆಂಬ ಘನ ಘೋರ ಪರೀಕ್ಷೆಗಳನ್ನು ಅವಳು ಪಾಸು ಮಾಡಿದಳು! ರಾಮನ ಪ್ರಜಾನಿಷ್ಠೆಯ ಸ್ಥಾಪನೆಗಾಗಿ ತನ್ನ ಬದುಕನ್ನೇ ಸಮಾಪ್ತಿಗೊಳಿಸಿಕೊಂಡ ಮೇಲೆ ಮುಗಿಯಿತಲ್ಲ! ಇಂಥ ಆತ್ಮಹತ್ಯೆಗೆ ಸಲ್ಲಬೇಡವೇ ಪ್ರಥಮ ಸ್ಥಾನ?! ಅವತಾರ ಪುರುಷ, ದೇವಮಾನವ, ಅಲೌಕಿಕ ನಿಮಿತ್ತಗಳೆಂಬ ಬಳಸು ದಾರಿ ನಮಗೆ ಪ್ರಸ್ತುತವಲ್ಲ. ಪ್ರಜೆಯೇ ಪ್ರತ್ಯಕ್ಷ ದೈವವಾದ ರಾಮರಾಜ್ಯದ ಔನ್ನತ್ಯದ ಪರಮೋಜ್ವಲ ಉದಾಹರಣೆಯಾಗಿ ನಿಂತಿದೆಯಲ್ಲವೆ ಸೀತಾಪರಿತ್ಯಾಗ? ಅಂದಮೇಲೆ ಆ ಸಮಾಜದ ಸಾಮಾನ್ಯ ಸ್ತ್ರೀಯರ ಪಾಡೇನಾಗಿರಬೇಡ? ಅಮಾನವೀಯ ಆಕ್ರಮಣಕ್ಕೊಳಗಾದ, ಸಂದರ್ಭಕ್ಕೆ ವಶವಾದ ಅಸಹಾಯಕ ಕ್ಷಣಗಳಿಗೆ ತುತ್ತಾದ ಸ್ತ್ರೀಯರಿಗೆ ರಾಮರಾಜ್ಯದಲ್ಲಿ ಜಾಗವಿಲ್ಲ! ಅಥವಾ ರಾಮನಿಗೆ ಸೀತೆಯ ಮೇಲೆ ಅಪನಂಬಿಕೆಯೆ? ಛೆ ಎಂದಿಗೂ ಸಾಧ್ಯವಿಲ್ಲ. ಎಂದ ಮೇಲೆ ರಾಮನ ಆತ್ಮ ಸಾಕ್ಷಿ ಸಾರಿ ಹೇಳಬೇಕು-ಸೀತೆ ಪವಿತ್ರಳು. ಈಗ ರಾಮನ ಮುಂದೆ ಎರಡು ಆಯ್ಕೆಗಳಿವೆ - ಆತ್ಮನಿಷ್ಠ ಸತ್ಯ, ಲೋಕಾರೂಢಿಯ ಧರ್ಮ. ಮುಂದೆ ಏನಾಯಿತು ನಮಗೆಲ್ಲ ಗೊತ್ತೇ ಇದೆ. ಆತ್ಮಸಾಕ್ಷಿಯ ಸಮಾಧಿಯ ಮೇಲೆ ಲೋಕಾರಾಧನೆಯ ವ್ರತ ವಿಜೃಂಭಿಸಿತು. ಸಿಂಹಾಸನ, ಪ್ರಜಾಪಾಲನೆ ಪರಂಪರಾಗತವಾಗಿ ಬಂದಿರತಕ್ಕ ಕರ್ತವ್ಯ ಜವಾಬ್ದಾರಿ. ಇದನ್ನು ಕಡೆಗಣಿಸುವ ಪ್ರಶ್ನೆಯೇ ಇಲ್ಲ. ಇದರ ಮುಂದೆ ಆತ್ಮ ಸಾಕ್ಷಿ, ಪತೀ ಧರ್ಮ (ಹೀಗೊಂದು ಧರ್ಮ ಈ ಸಮಾಜದಲ್ಲಿ ಇರುವುದಾದರೂ ಎಲ್ಲಿ!) ಕ್ಷುಪದಾರ್ಥಗಳು. ಪರಪುರುಷರ ಸಂಪರ್ಕಕ್ಕೆ ಬಂದ ಸ್ತ್ರೀ ಬಹಿಷ್ಕಾರಕ್ಕೆ ಯೋಗ್ಯಳು ಎನ್ನುವುದು ಯುಗಧರ್ಮ. ಮತ್ತೆ ಇಲ್ಲಿ ಅನ್ಯ ವಿಚಾರಗಳು ಅಧಿಕ ಪ್ರಸಂಗ. ಈ ಯುಗ ಧರ್ಮದಲ್ಲಿ ಅಂತರ್ಗತವಾದ ಅಪಚಾರಗಳಿಗೆ ರಾಮ ಹೇಗೆ ಹೊರತಾದಾನು? ಆದರೆ ಸತ್ಯದ ದಾರಿ ನಿಷ್ಠುರವಾದದ್ದು. ಅದು ಯುಗಧರ್ಮವನ್ನು ಮೀರಿ ಪ್ರಕಾಶಿಸುವಂಥದು. ಅಲ್ಲಿ ಸಂಪ್ರದಾಯ,

ಪರಂಪರೆ, ಸಮಾಜ ಸ್ವಾಸ್ಥ್ಯ, ರಾಜ ಧರ್ಮಗಳೆಂಬ ಗೋಡೆಗಳು ನಿಲ್ಲಲಾರವು. ರಾಮನಿಗೆ ರಾಜ್ಯಭಾರ ಕರ್ತವ್ಯವಾಗಿದ್ದಂತೆ ಬುದ್ಧನಿಗೆ ರಾಜ್ಯಭಾರದ ಕರ್ತವ್ಯವಿರಲಿಲ್ಲವೆ? ಎಲ್ಲಿ ಅಂಥ ಒಂದು ದಿನ ಬಂದೀತೋ ಎಂದು ಹೆದರಿಯೇ ಅಲ್ಲವೆ ಅವನನ್ನು ಅಂಥ ಕಣ್ಗಾವಲಿನಲ್ಲಿ ಇಟ್ಟದ್ದು? ಅಂದಮೇಲೆ ಬುದ್ಧನ ಕರ್ತವ್ಯ ಭಾರ ಎಷ್ಟಿರಬೇಡ? ಅಷ್ಟು ದೂರ ಯಾಕೆ, ಇಡಿಯ ದೇಶ ಒಂದಲ್ಲ ಒಂದು ರೀತಿಯಲ್ಲಿ ತೊಡಗಿಸಿಕೊಂಡು ಪಡೆದ ಸ್ವಾತಂತ್ರ್ಯ ಸೋರಿ ಹೋಗದಂತೆ, ಆಡಳಿತದ ಸೂತ್ರ ಹಿಡಿಯುವುದು ಗಾಂಧೀಜಿಗೆ ಕರ್ತವ್ಯವಾಗಿರಲಿಲ್ಲವೇ? ಸತ್ಯ ಶೋಧನೆ ಯಾವುದೋ ಬಾಹ್ಯ ಸಂಗತಿಗಳ ಹಂಗಿನಲ್ಲಿ ಎಂದೂ ನಡೆದಿಲ್ಲ. ಒಂದು ವೇಳೆ ರಾಮ, ಆತ್ಮ ಸಾಕ್ಷಿಗೆ ಓಗೊಟ್ಟು ಸೀತೆಯೊಂದಿಗೆ ಅಡವಿಗೆ ತೆರಳಿದ್ದರೂ ಸೀತೆಯ ಮೇಲಿನ ಲೋಕಾಪವಾದವೇನೂ ಅಳಿಯುತ್ತಿರಲಿಲ್ಲವೆನ್ನುವುದು ಮಾನ್ಯ ಡಿ.ವಿ.ಜಿಯವರ ಅಭಿಪ್ರಾಯ (ಶ್ರೀರಾಮ ಪರೀಕ್ಷಣಂ-ಪು-೧೦೫) ಸರಿಯೆ. ಹೇಗಿದ್ದರೂ ಸೀತೆಯ ಮೇಲಿನ ಲೋಕಾಪವಾದವಂತೂ ತಪ್ಪದು. ಆದ್ದರಿಂದ ಸೀತೆಯನ್ನು ಪರಿತ್ಯಾಗ ಮಾಡಿ, ತಾನೂ ಅದನ್ನು ಸಮರ್ಥಿಸಿ ಲೋಕದೊಂದಿಗೆ ನಿಲ್ಲುವುದರಿಂದ ಲೋಕದ ಕಣ್ಣಿನಲ್ಲಿ ತಾನು ನಿರಪರಾಧಿ, ಧರ್ಮ ಪರಿಪಾಲಕ! ಇದು ಧರ್ಮಾತ್ಮರಾಮನ ಅಂತರಾತ್ಮ! ಇನ್ನು ಅಗ್ನಿ ದಿವ್ಯದ ಸಂಗತಿ ಮತ್ತೊಂದು ರೀತಿಯಲ್ಲಿ ಸಮರ್ಥಿಸಲ್ಪಡುತ್ತದೆ. ಅಯೋನಿಜೆ ಎಂತಿದ್ದರೂ ಇದರಿಂದ ಪಾರಾಗುತ್ತಾಳೆಂಬ ಖಾತ್ರಿ ರಾಮನಿಗಿತ್ತು. ಇದೇನೋ ಸರಿ. ಆಗ ಉಳಿದ ಸಾಮಾನ್ಯ ಸ್ತ್ರೀಯರ ಗತಿಯೇನು? ಸೀತೆಯಂತೆಯೇ ದುರಾಕ್ರಮಣಕ್ಕೊಳಗಾದ ಸಾಮಾನ್ಯ ಸ್ತ್ರೀಯರೆಲ್ಲ ಇವರು ಒಡ್ಡಿದ ಕಿಚ್ಚಿಗೆ ಆಹುತಿಯಾಗಬೇಕೆ? ಇದು ರಾಮರಾಜ್ಯದ ನ್ಯಾಯ!

ಏನೂ ಗುದ್ದಾಡಿದರೂ ಸತ್ಯ ಸೂರ್ಯಸ್ಪಷ್ಟವಿದೆ. ಸಮಾಜ ಸ್ವಾಸ್ಥ್ಯದ ಹೆಸರಿನಲ್ಲಿ ಸ್ತ್ರೀಯ ಬದುಕಿಗೆ ಕಡಿವಾಣಗಳನ್ನು ಹೇರಲಾಯಿತು. ಒಂದು ಪಾರ್ಶ್ವದಲ್ಲಿ ಅವಳ ಪ್ರಾಕೃತಿಕ ಜವಾಬ್ದಾರಿಗಳನ್ನು ವೈಭವೀಕರಿಸುತ್ತ ಶೀಲವೆಂಬ ಪಟ್ಟದ ಕತ್ತಿ ತೂಗಾಡಿತು. ಸಮಾಜದ ಅವ್ಯವಸ್ಥೆಗೆ ಕಾರಣವೆಂದು ನಂಬಿಕೊಂಡಿರುವ ಸಂಗತಿಯಲ್ಲಿ ಪುರುಷನೂ ಸಮಭಾಗಿ ಎಂಬ ಸರಳ ಸತ್ಯ ಎಂದೂ ಈ ಸಮಾಜದಲ್ಲಿ ಪ್ರಮುಖವಾಗಲೇ ಇಲ್ಲ. ಸಮಾಜದ ಇತರ ಅನ್ಯಾಯ ಗಳಿಗೆ, ವರ್ಗ, ಜಾತಿ, ಶೋಷಣೆಗೆ ತೀವ್ರವಾಗಿ ಸ್ಪಂದಿಸುವ ಸಂವೇದನಾಶೀಲ ವಿವೇಕಿಗಳು, ಮಹಿಳೆಯ ಶೋಷಣೆಯ ವಿಷಯದಲ್ಲಿ ದಿವ್ಯ ಮೌನವಹಿಸಿದಾಗ ಆಶ್ಚರ್ಯಾಘಾತ ಗಳಾಗುತ್ತವೆ. ಕೇವಲ ಅನ್ಯಾಯಕ್ಕೆ ಸ್ಪಂದಿಸುವ ವ್ಯಕ್ತಿಯಾಗಿ ಕಾಣಿಸಿಕೊಂಡವರೇ ಸ್ತ್ರೀಯ ಅನ್ಯಾಯಕ್ಕೆ ಸ್ಪಂದಿಸದೇ ಹೋದಾಗ ದಿಗ್ಭ್ರಮೆಯಾಗುತ್ತದೆ. ಯಾವುದೋ ಒಂದು ಸುಭಾಷಿತ ವನ್ನು ಮುಂದೆ ಮಾಡಿಕೊಂಡು, ಮೇಲಿನ ವರ್ಣಕ್ಕೆ ಸೇರಿದ ಮೈತ್ರೇಯಿ, ಗಾರ್ಗಿ ಎಂಬೆರಡು ಹೆಸರಿನ ಧ್ವಜ ಹಿಡಿದುಕೊಂಡು ಈ ಸಮಾಜದ ಸ್ತ್ರೀಯರೆಲ್ಲರ ಬದುಕು ಬಂಗಾರವಾಗಿತ್ತೆಂದು ನಿರ್ಣಯಿಸುವ ಪರಿಸ್ಥಿತಿ ಯಾವ ಇತಿಹಾಸ-ಕಾವ್ಯ-ನಾಟಕಗಳಿಂದಲೂ ಸ್ಥಿರೀಕರಿಸಲು ಸಾಧ್ಯ ವಾಗಿಲ್ಲ. ಯಾರೂ ಪೂಜ್ಯ ಸ್ತ್ರೀ ಸಮೂಹದ ಪತಿವ್ರತಾ ಪ್ರತಿನಿಧಿಗಳಾ ಗಿರುವರೋ ಅವರೆಲ್ಲ ತಮ್ಮ ತಮ್ಮ ಬದುಕಿನಲ್ಲಿ ಆಘಾತಗಳನ್ನನುಭವಿಸಿ, ಕನಲಿ ಬದುಕನ್ನು ಬಲಿಕೊಟ್ಟವರೇ.

ಸಾಮಾನ್ಯ ಸ್ತ್ರೀಯರ ಮಾತು ಬಿಡಿ. ಪ್ರತಿಷ್ಠಿತ ವಂಶಗಳ ಪ್ರತಿಷ್ಠೆ ಕೂಡ ಸ್ತ್ರೀಯರ ಪಾಲಿಗೆ ಮುಳುವಾದದ್ದಿದೆ, ಆಗುತ್ತಲಿದೆ. ಯಾರದೋ ಹಗೆಗೆ, ಯಾರದೋ ತತ್ವ ನಿಷ್ಠೆಗೆ, ಯಾರದೋ ಸೋದರ ಸೌಹಾರ್ದತೆಗೆ, ತಪಸ್ಸಿನ ಸಾಮರ್ಥ್ಯಕ್ಕೆ, ಧರ್ಮ ದುರಂಧರತೆಗೆ, ಪ್ರಜಾ ವಾತ್ಸಲ್ಯಕ್ಕೆ, ಗಾಂಧಾರಿಯರು, ಅಂಬೆ, ಅಹಲ್ಯೆಯರು, ಸೀತೆ, ದ್ರೌಪದಿ, ಮಂಡೋದರಿಯರು ದಾಳವಾಗಿದ್ದಾರೆ. ಪಣವಾಗಿದ್ದಾರೆ. ಸ್ವಾರ್ಥಕ್ಕೆ ಒದಗುವ ಸಾಧನ ವಾಗಿದ್ದಾರೆ.

ಈ ಯಾವ ಅನ್ಯ ಉದ್ದೇಶಕ್ಕೆ ಸಲಕರಣೆಯಾಗದೆಯೂ ಶಕುಂತಲೆಯ ಬದುಕು ಸೂರೆಯಾಯಿತು.

ಕಾಳಿದಾಸನ **"ಅಭಿಜ್ಞಾನ ಶಾಕುಂತಲ"** ಉದಾತ್ತ ಪ್ರೇಮದ ಪರಿಪೂರ್ಣ ಕೃತಿ ಎಂದು ಲೋಕ ವಿಖ್ಯಾತವಾಗಿದೆ. ಬೇಕಾದಷ್ಟು ಜನ ವಿದ್ವಾಂಸರು ಅದನ್ನು ಇಂಚಿಂಚಾಗಿ ಶೋಧಿಸಿ ಹೊಗಳಿಕೆ ಸಲ್ಲಿಸಿದ್ದಾರೆ. ಇದರ ಬಗೆಗೆ ನನ್ನ ಆಕ್ಷೇಪಣೆ ಏನಿಲ್ಲ. ಕಾಳಿದಾಸನ ದುಷ್ಯಂತನ ದೋಣಿಯೇನೋ ಅಲೌಕಿಕ ಅಸಂಭವನೀಯ ಅಲೆಗಳ ಮೇಲೆ ಸರಾಗವಾಗಿ ತೇಲಿ ಹೋಗುತ್ತದೆ. ಒಂದು ವೇಳೆ ನಾವು ಈ ಅಲೌಕಿಕ ವ್ಯಾಪಾರಗಳನ್ನು ಸ್ವೀಕರಿಸದಿದ್ದರೆ ಏನಾಗಬಹುದು? ಆಗ ರಾಜ ಸಹಜ ಸ್ವೇಚ್ಛೆ, ಅನಾದರ, ಅನುದಾತ್ತ ದೋಷಾರೋಪಣೆಗಳನ್ನೆಲ್ಲ ಹೊರಬೇಕು. ಆಗ ಶಕುಂತಲಾ ತಿರಸ್ಕಾರಕ್ಕೆ ಪಶ್ಚಾತ್ತಾಪ, ಆ ಮೂಲಕ ಸ್ಥಿರಗೊಳ್ಳುವ ಉದಾತ್ತ ಒಲವು, ಯಾವುದೂ ಸಲ್ಲದೆ ಹೋಗುತ್ತದೆ. ವ್ಯಾಸ ಭಾರತದ ಶಕುಂತಲೋಪಾಖ್ಯಾನದ ದುಷ್ಯಂತನ ಅನುಚಿತ ವರ್ತನೆಗೆ "ಅಭಿಜ್ಞಾನ...."ದಲ್ಲಿ ಈ ಅಲೌಕಿಕ ವಿದ್ಯಮಾನಗಳು ಹೊಣೆಯಾಗುವುದರಿಂದ ದುಷ್ಯಂತ ಆ ದೋಷಾರೋಪಣೆಯಿಂದ ಮುಕ್ತನಾಗಿ ಬಿಟ್ಟಿದ್ದಾನೆ. ಸರಿ. ಕವಿಯ ಉದ್ದೇಶಕ್ಕೆ ಕೃತಿಯ ರಚನೆ ಬದ್ಧವಾಗಿದೆ. ಇದರ ಚರ್ಚೆ ನಮಗೀಗ ಅಪ್ರಸ್ತುತ. ನಮ್ಮ ಅಂತರಂಗದಲ್ಲಿ ಏಳುವ ಪ್ರಶ್ನೆಗಳು ಬೇರೆಯೇ ಇವೆ. ವಿದ್ವಾಂಸರಾದಿಯಾಗಿ ನಾವೆಲ್ಲ ತೀರ್ಮಾನಿಸಿರುವಂತೆ ಇದು ನಾಟಕದ ಸುಖಾಂತ್ಯವೆ? ಇಲ್ಲಿಗೆ ಈ ನಾಟಕ ಮುಗಿಯುತ್ತದೆಯೇ? ಒಂದು ಮುಗ್ಧ ನಿಷ್ಕಪಟ ಮನಸ್ಸಿನ ಜೀವನೋತ್ಸಾಹವನ್ನೇ ಚಿಗುಟಿ ಹಾಕಿ, ಚೈತನ್ಯವನ್ನೇ ಸೂರೆಗೊಳ್ಳುವ ಕ್ರೂರ ಸತ್ಯ ತಿಳಿಯಲು ನಮಗೆ ಇಂಥ ಅಲೌಕಿಕ ನೆಪಗಳ ಆಧಾರ ಬೇಕೆ? ಈ ಮೂರು ಸಂಗತಿಗಳು ನಮ್ಮ ಅಂತರಂಗಕ್ಕೆ ಅಲಗಿಕ್ಕಿದಾಗ "ಅಭಿನವ ಶಾಂಕುಂತಲ" ಹುಟ್ಟಿಕೊಳ್ಳುವುದು ಅನಿವಾರ್ಯವಾಗುತ್ತದೆ.

ದುಷ್ಯಂತನಿಂದ ತಿರಸ್ಕೃತಳಾದ ಶಕುಂತಲೆ, ಮರಳಿ ಅವನನ್ನು ಸೇರಿದ ಮೇಲೆ ಮುಗಿಯಿತಲ್ಲ? ಅವಳ ಭೌತಿಕ ಜಗತ್ತು ಸುಸೂತ್ರವಾಯಿತು. ಉಂಟಾದ ತಪ್ಪನ್ನು ಸರಿಪಡಿಸಿದ ಮೇಲೆ ಸುಖಾಂತ್ಯವೇ ಅಲ್ಲವೆ? ಇದು ಸಾಮಾನ್ಯ ಅನಿಸಿಕೆ. ಆದರೆ ಕೊನೆಯಲ್ಲಿ ಘಟಿಸುವ ಈ ಪುನಃ ಸಮಾಗಮದ ಕಾಲಕ್ಕೆ ಶಕುಂತಲೆಯ ಮನಸ್ಥಿತಿ ಏನಿದ್ದೀತು ಎಂದು ಯೋಚಿಸುವ ಅಗತ್ಯ ಇರುವದಾದರೆ ಸಂಗತಿ ಇಷ್ಟು ಸರಳವಾಗಿರಲಾರದು. ಅವಳ ಈಗಿನ ಮನಸ್ಥಿತಿಯನ್ನು ಅರಿತುಕೊಳ್ಳಲು ಅದರ ಹಿಂದಿನ ಅವಳ ಭಾವ ಜಗತ್ತು ಬೆಳೆದ ಬಗೆಯನ್ನು ಗಮನಿಸ ಬೇಕಾಗುತ್ತದೆ. ಕಾಡಿನ ಸ್ವಚ್ಛಂದ ಪರಿಸರದಲ್ಲಿ ಬಳ್ಳಿಯೊಂದಿಗೆ ಬಳ್ಳಿಯಾಗಿ, ಜಿಂಕೆಯೊಂದಿಗೆ

ಜಿಂಕೆಯಾಗಿ, ಹೊಳೆಯೊಂದಿಗೆ ಹೊಳೆಯಾಗಿ ಅರಳಿದ ಮುಗ್ಧ ತರುಣಿಯ ಪ್ರೇಮಭಾವ ಕೂಡ ಅಷ್ಟೇ ನಿಷ್ಕಪಟವಾಗಿರುವಂಥದು. ಅವಳಿಗೆ ದುಷ್ಯಂತ, ಅವನು ದೊರೆಯುವುದಕ್ಕಿಂತ ಮೊದಲೇ ಜೀವ ಭಾವಗಳಲ್ಲಿ ನೆಲೆಸಿರುವಂಥವನು. (ಭಾರತೀಯ ಸ್ತ್ರೀ ಈ ನಿಷ್ಠೆಯನ್ನು ತಲೆಮಾರುಗಳಿಂದ ಬಳುವಳಿಯಾಗಿ ಪಡೆದಿರುತ್ತಾಳೆ ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ?) ಅವಳಿಗೆ ಅವನೇ ಮೊದಲ ಪ್ರಣಯಿ, ಅವನೇ ಕೊನೆಯ ಪ್ರಣಯಿ. ಅನುರಾಗದ ಅರ್ಥ ಅವಳಿಗೆ ಅಚಲ ವಿಶ್ವಾಸ. ಅದಕ್ಕೆಂದೇ ತನ್ನ ಭವಿಷ್ಯವನ್ನು ಅದಕ್ಕೆ ಒಪ್ಪಿಸಿದಳು. ಹಿರಿಯರು, ಸಂಪ್ರದಾಯ, ಸಮಾಜ ಯಾವುದೊಂದು ಅವಳ ಬದುಕಿಗೆ ಹೊಣೆ ಯಲ್ಲ. ಯಾವ ನಂಬಿಕೆಯ ಮೇಲೆ ಅವಳ ಬದುಕು ಅವಲಂಬಿತವಾಗಿತ್ತೋ ಅದು ಅಪನಂಬಿಕೆ ಯಾದಾಗ ಅವಳು ಸಂಪೂರ್ಣ ನಿರಾಧಾರಳಾದಳು. (ಮೇನಕೆ ಬಂದು ಅವಳನ್ನು ಎತ್ತಿಕೊಂಡು ಹೋಗುವ ಪವಾಡ ನಡೆಯದೆ ಹೋದರೆ ಅವಳಿಗೆ ಆಶ್ರಯವೇನಿತ್ತು?) ಬದುಕು ಸಂಪೂರ್ಣ ವಾಗಿ ಛಿದ್ರವಾಯಿತು. ಹುಟ್ಟಿ ಬೆಳೆದ ಆಶ್ರಮವಲ್ಲ, ಅರಸಿಕೊಂಡು ಹೋದ ಅರಮನೆಯೂ ಅಲ್ಲ, ಯಾವುದೋ ಪರಸ್ಥಳದಲ್ಲಿ ಪರದೇಶಿಯಂತೆ ಕೇವಲ ಮಗುವಿಗಾಗಿ ತಪಸ್ವಿನಿಯಂತೆ ಬದುಕುತ್ತಿರುವ ಶಕುಂತಲೆಯಲ್ಲಿ ಯಾವ ಉತ್ಸಾಹ ಉಳಿದಿರಬಹುದು? ಈ ಪರಿಸ್ಥಿತಿಗೆ ದೂರ್ವಾಸ ಶಾಪದ ನೆಪ ಒಡ್ಡಿದರೂ ಶಕುಂತಲೆಯ ಈ ಮನಸ್ಥಿತಿಯಲ್ಲಿ ಬದಲಾವಣೆ ಏನೂ ಇಲ್ಲ. ಕಾರಣ ಯಾವುದಾದರೂ ಬದುಕು ಮೂರಾಬಟ್ಟೆಯಂತೂ ಆಯಿತಲ್ಲ.? ಮೂಲ ಶಕುಂತಲೋಪಾಖ್ಯಾನದಲ್ಲಿ ಇಂಥ ಹನ್ನೆರಡು ವರ್ಷಗಳು ಉರುಳಿ ಹೋಗುತ್ತವೆ. ("ಅಭಿಜ್ಞಾನ....."ದಲ್ಲಿ ಏಳು ವರ್ಷ) ಈ ದೀರ್ಘ ಕಾಲಾಂತ್ಯದಲ್ಲಿ ಆಸೆ ಭರವಸೆ, ಉತ್ಸಾಹ ಸಮರ್ಪಣೆಗಳೆಲ್ಲ ಅಳಿದು ನಿಷ್ಠುರ ನಿರಾಶೆಯಲ್ಲದೆ ಅವಳಲ್ಲಿ ಮತ್ತೇನು ನೆಲೆಸಿರಲು ಸಾಧ್ಯ? ಈ ಪುನಃಸಮಾಗಮದಲ್ಲಿರುವುದು ವಿಷಾದದ ಒಂದು ಕಿರುನಗೆ, ಅಸಹಾಯಕ ಕಂಬನಿ. - ಇದು ಕವಿಗೆ, ಕೃತಿಗೆ, ಪ್ರೇಕ್ಷರಿಗೆ ಯಾರಿಗಾದರೂ ಸುಖಾಂತ್ಯದ ಭ್ರಮೆಯನ್ನು ತರಬಹುದು - ಆದರೆ ಶಕುಂತಲೆಗೆ ಅಲ್ಲ. ಇನ್ನು ಅವಳ ಬದುಕು ನಿತ್ಯ ನಿರಂತರ ಹುಡುಕಾಟ, ಕಳೆದುಕೊಂಡ ವಿಶ್ವಾಸಕ್ಕಾಗಿ, ಅಪನಂಬಿಕೆಯ ಸ್ಪರ್ಶವಿರದ ಅಪ್ಪಟ ಜಗತ್ತಿಗಾಗಿ, ಕಳೆದುಹೋದ ಶಕುಂತಲೆ ಗಾಗಿ. ಇದು ಅನಿವಾರ್ಯ "ಅಭಿನವ ಶಾಕುಂತಲ".

ಇನ್ನು ದುಷ್ಯಂತ ಶಕುಂತಲೆಗಾಗಿ ಪರಿತಪಿಸಿದ್ದು ಕಡಿಮೆಯೆ? ನಡೆದ ಅಚಾತುರ್ಯಕ್ಕೆ ಹೊಣೆ ದೂರ್ವಾಸ ಶಾಪವಾದರೂ ಅವನು ಪಟ್ಟ ಪಶ್ಚಾತ್ತಾಪ ಕಡಿಮೆ ಏನಿವಲ್ಲವಲ್ಲ? ಎಂದ ಮೇಲೆ ಯಾವುದನ್ನಾದರೂ ದೂರುವುದಕ್ಕೆ ಇಲ್ಲಿ ಅವಕಾಶವೇನಿದೆ? ಸರಿ. ಅಭಿಜ್ಞಾನದ ಕೇಂದ್ರ ಉದಾತ್ತ ಪ್ರೇಮವಾದ್ದರಿಂದ ದುಷ್ಯಂತ ಶಕುಂತಲೆಯರು ಅಪ್ಪಟ ಪ್ರೇಮಿಗಳಾಗಿ ಕಾಣಿಸಿಕೊಳ್ಳುವುದಕ್ಕೆ ನಾಟಕದಲ್ಲಿ ಬೇಕಷ್ಟು ಅವಕಾಶವಿದೆ. ಆದರೆ ಅಭಿಜ್ಞಾನದ ಚೌಕಟ್ಟಿನ ಮಿತಿಯಾಚೆಗೆ ಪ್ರವರ್ತಿಸುವ ಕೆಲವು ವಿದ್ಯಮಾನಗಳು ಸಂಪೂರ್ಣವಾಗಿ ಎರಡು ವಿಭಿನ್ನ ಜಗತ್ತುಗಳನ್ನು ತೆರೆದಿಡುತ್ತವೆ. ಅದೀಗ ನಮ್ಮ ಲಕ್ಷ್ಯ.

ಮುಖ್ಯವಾಗಿ ಗಮನಿಸತಕ್ಕ ಮಾತೊಂದಿದೆ. ತಿರಸ್ಕರಿಸುವವನು ದುಷ್ಯಂತ. ತಿರಸ್ಕಾರಕ್ಕೆ

ಒಳಗಾದವಳು ಶಕುಂತಲೆ. ಅವಳ ಅಘಾತಕ್ಕೂ ಅವನ ಪಶ್ಚಾತ್ತಾಪಕ್ಕೂ ಅಗಾಧ ಅಂತರವಿದೆ. ಆಘಾತ ಪಶ್ಚಾತ್ತಾಪಗಳು ಒಂದೇ ಅಲ್ಲ. ಇಷ್ಟಕ್ಕೂ ಶಕುಂತಲೆಯಂತೆ ದುಷ್ಯಂತನಿಗಿದು ಪ್ರಥಮ ಪ್ರಣಯವಲ್ಲ. ಅರಮನೆಯ ಅಂತಃಪುರದ ನಾಗರಿಕತೆಯಲ್ಲಿಲ್ಲದ ನಿರ್ಮಲ ಪ್ರೇಮವನ್ನು ಶಕುಂತಲೆಯಲ್ಲಿ ದುಷ್ಯಂತ ಕಂಡನೆಂಬುದು ವಿದ್ವಾಂಸರ ವಿಶ್ಲೇಷಣೆ. ಆದ್ದರಿಂದ ಇದು ಅವನ ಉಳಿದ ವಿವಾಹಗಳಿಂದ ಪ್ರತ್ಯೇಕಿಸಲ್ಪಡುತ್ತದೆಂದೇ ಇಟ್ಟುಕೊಳ್ಳೋಣ. ದುಷ್ಯಂತನಿಗೇನೋ ಹೀಗೆ ಯವನರ ಹುಡುಗಿಯೊಂದಿಗೆ ಮೊದಲಾಗಿ ನಾನಾ ನಮೂನೆಯ ನಾಗರಿಕ, ಅರಣ್ಯಕ, ದೇಶೀ, ವಿದೇಶೀ ಪ್ರೇಮ ವ್ಯವಹಾರಗಳು (ಇವೆಲ್ಲಕ್ಕೂ ಅಭಿಜ್ಞಾನದಲ್ಲಿಯೇ ಸೂಚನೆಗಳು ಸಿಕ್ಕುತ್ತವೆ.) ಸಾಮಾನ್ಯ. ಹೀಗೆ ದುಷ್ಯಂತನ ಪ್ರಣಯ ಜೀವನ ನಾನಾ ರೀತಿಯಲ್ಲಿ ಸಾರ್ಥಕತೆ ಪಡೆಯುವುದು ಸ್ವೀಕೃತ ವ್ಯವಹಾರವೆನಿಸಿದ ಮಾತ್ರಕ್ಕೆ ಅಂತಃಪುರದ ರಾಣೀ ವಾಸದ ವಿವಂಚನೆ ಯಾಕೆ; ಹೇಗೆ ಅಲಕ್ಷಿಸಬಹುದು? ಹಿರಿಯ ರಾಣಿ ವಸುಮತಿ, ರಾಜ ಪರಂಪರೆಯ ಯಾವುದೋ ಒಂದು ಭಾಗವಾಗಿ ಅರಮನೆ ಸೇರಿದಳೆಂದ ಮಾತ್ರಕ್ಕೆ ಅವಳ ಭಾವ ಜಗತ್ತು ಬರಿದಾಗಿರಲಿ ಕ್ಕಿಲ್ಲವೆ? ಶಕುಂತಲೆಯಂತೆಯೆ ತನ್ನ ವಿಶುದ್ಧ ಸೌಂದರ್ಯದಿಂದ ದುಷ್ಯಂತನನ್ನು ಗೆದ್ದ ಹಂಸ ಪದಿಕೆಯ ಸ್ಥಾನ ಮತ್ತೇನಾಯಿತು? ಶಕುಂತಲೆಯಂತಲ್ಲದಿದ್ದರೂ ಮತ್ತೊಂದು ರೀತಿಯಲ್ಲಿ ಇವರೆಲ್ಲ ಈ ಧೀರೋದಾತ್ತ ನಾಯಕನಿಂದ ವಿಶ್ವಾಸಘಾತ ಅನುಭವಿಸಿದ್ದನ್ನು ಹೇಗೆ ಅಲಕ್ಷಿ ಸುವುದು? ಇದೆಲ್ಲ ಯಾಕೆ ತೇಲಿ ಹೋಗಬೇಕು.? ಯಾಕೆಂದರೆ ಇದು ಅಂದಿಗೆ ಯುಗಧರ್ಮ! ಬಹುಪತ್ನಿತ್ವ ಯುಗಧರ್ಮ, ಸತೀ ಸಹಗಮನ ಯುಗಧರ್ಮ, ಪುರುಷರ ವಿವಾಹಬಾಹಿರ ಪ್ರಣಯಗಳೆಲ್ಲ, ಒಂದಲ್ಲ ಒಂದು ಹೆಸರಿನಲ್ಲಿ ಸಕ್ರಮವೆನಿಸಿಸುವುದು ಕೂಡ ಸಮಾಜದಲ್ಲಿ ಒಪ್ಪಿತ ಮೌಲ್ಯ! ಆದರೆ ರಾಕ್ಷಸನಿಂದ ಅಪಹರಿಸಲ್ಪಟ್ಟ ಸ್ತ್ರೀ ಮಾತ್ರ ಬಹಿಷ್ಕೃತಳಾಗುವುದು ಅದೇ ಸಮಾಜ ಒಪ್ಪಿಕೊಂಡ ನೀತಿ! ಕೊನೆಗೆ ಈ ಋಷಿಶಾಪಗಳು ಸಹಿತ, ಪುರುಷರು ಸ್ತ್ರೀಯರನ್ನು ತಿರಸ್ಕರಿಸುವ ಅವಕಾಶಗಳನ್ನೇ ಹುಡುಕಿಕೊಳ್ಳುತ್ತವೆ!

ಇದರ ಹಿಂದಿನ ಸೂಕ್ಷ್ಮ ಇನ್ನಾದರೂ ಅನಾವರಣಗೊಳ್ಳುವುದು ಬೇಡವೇ? ಒಂದು ಪರಂಪರೆ ಸ್ಥಿತಗೊಳ್ಳುವುದಕ್ಕೆ ಕಾರಣಗಳಿರುತ್ತವೆ. ಪುರುಷ ಪರವಾದ ಸ್ಥಿತಿಯಲ್ಲಿ ಸಮಾಜಕ್ಕೇಕೆ ಪಕ್ಷಪಾತ? ಅದರಲ್ಲಿ ಅದಕ್ಕಿರುವ ಸ್ವಾರ್ಥವೇನು? ಎಂಬ ಚಿಂತನೆಯೂ ಅಸಾಧುವೇನಲ್ಲ. ಜಾತಿ, ವರ್ಗ ಸಂಘರ್ಷಗಳು ಕೂಡ ಈ ವ್ಯವಸ್ಥೆಯ ಅಂಗಗಳೇ ಆಗಿವೆಯಲ್ಲ. ಈ ಪಕ್ಷಪಾತ ಗಳು ಚರಿತ್ರೆಯುದ್ದಕ್ಕೂ ತಾಂಡವವಾಡುತ್ತಲೇ ಬಂದಿವೆ. ಇದಕ್ಕೇನು ಕಾರಣ? ಇದಕ್ಕೆ ದೊರೆಯಬಹುದಾದ ಉತ್ತರವೇ ಪುರುಷ ಪರವಾದ ಸ್ಥಿತಿಗೂ ಅನ್ವಯಿಸುತ್ತದೆ. ನಮ್ಮ ವೈವಾಹಿಕ ವ್ಯವಸ್ಥೆಯಲ್ಲಿ ಸಾರಾ ಸಗಟಾಗಿ ಸ್ತ್ರೀಯ ವ್ಯಕ್ತಿತ್ವವನ್ನೇ ನಿರಾಕರಿಸಲಾಗಿದೆಯಲ್ಲ! ಇದಕ್ಕೆ ನೆಪಗಳು ಯಾಕೆ ಬೇಕು? ಇದಕ್ಕೆ ಅಗಸನ ಬೀದಿ ಮಾತು, ದೂರ್ವಾಸನ ಶಾಪ, ಇಂದ್ರನ ಪ್ರವೇಶ, ಏನು ಬೇಕಾದರೂ ಒದಗುತ್ತವೆ. ಸ್ತ್ರೀಯ ಜೀವ ಭಾವಗಳು, ಯಾವುದಕ್ಕೆ ಬೇಕಾದರೂ ಒತ್ತೆಯಾಗಿ ಹೋಗಿವೆ. ಅವಳು ತನ್ನನ್ನು ಹೋರಾಟ ಮಾಡಿ ಪಡೆಯಬೇಕಾಗಿದೆ. ಒತ್ತೆಯಾದ ಬದುಕನ್ನು ಕಸಿದುಕೊಳ್ಳಬೇಕಾಗಿದೆ. ಅದಕ್ಕಾಗಿ ಅವಳು ಅನ್ಯಾಯವನ್ನು ಎದುರಿಸಿ

ನಿಲ್ಲಬೇಕಾಗಿದೆ. ಅಪ್ರಾಮಾಣಿಕತೆಯನ್ನ ಪ್ರಶ್ನಿಸಬೇಕಾಗಿದೆ. ಅವಳ ವ್ಯಕ್ತಿತ್ವವನ್ನು ಅವಮಾನಿಸುವ ಸಂದರ್ಭಗಳನ್ನು ಧಿಕ್ಕರಿಸುವುದು ಅನಿವಾರ್ಯವಾಗಿದೆ. ಶಕುಂತಲೆಯರು ದುಷ್ಯಂತರನ್ನು ತಿರಸ್ಕರಿಸುವುದು ಸಮಸ್ಯೆಯನ್ನ ಪರಿಹರಿಸಲಿಕ್ಕಿಲ್ಲ. ಆದರೆ ಸಹನೆಯ ಪರಾಕಾಷ್ಠೆ ಪರಿವರ್ತನೆಯನ್ನು ತರದೆ ಹೋದಾಗ ಅನ್ಯ ಮಾರ್ಗಗಳನ್ನು ಹುಡುಕಲೇಬೇಕಾಗುತ್ತದೆ. ಅಗ್ನಿಕುಂಡಗಳನ್ನು ಹಾಯ್ದು ಭೂಮಿಯ ಒಡಲು ಸೇರುವ ಸೀತೆಯರು ಪಡೆದದ್ದೇನು? ಯಾವ ಸಹನೆ, ಸಂಯಮ ತಾತ್ವಿಕ ನೆಲೆಯಲ್ಲಿ ವಿವೇಕವೆನಿಸುತ್ತದೆಯೋ ಅದೇ ಅಧಿಕಾರಶಾಹಿಯ ಕಪಿಮುಷ್ಠಿಯಲ್ಲಿ ದೌರ್ಬಲ್ಯವಾಗಿ ಸಮಾಜ ಸ್ವಾಸ್ಥ್ಯವನ್ನು ಹಾಳುಗೆಡುವುತ್ತದೆ. ಆಗ ಪ್ರತಿಭಟನೆ ಅನಿವಾರ್ಯವಾಗುತ್ತದೆ. ಇದು ಪ್ರತಿಭಟನೆಗಾಗಿ ಮಾತ್ರವೇ ಪ್ರತಿಭಟನೆಯಲ್ಲ, ಅಸ್ತ್ರಕ್ಕೆ ಪ್ರತಿ ಅಸ್ತ್ರವಲ್ಲ. ಸಹನೆ ಸಂಯಮಗಳು ದೌರ್ಬಲ್ಯವಲ್ಲ ಎಂಬುದನ್ನು ತಿಳಿಸುವುದಕ್ಕಾಗಿ, ಸ್ಥಾಪಿಸುವುದಕ್ಕಾಗಿ. ಇದು ಕೇವಲ ನ್ಯಾಯಕ್ಕೆ ಸಲ್ಲುವ ನಿಷ್ಠೆ, ಇದು ಸತ್ಯಾಗ್ರಹ. ಈಗಲೂ ಅದೇ ದುಷ್ಯಂತನಿಗೆ ಜೋತು ಬೀಳುವ ಬಂದಳಿಕೆಯಾಗುವುದರಲ್ಲಿ ಅರ್ಥವಿದ್ದರೆ ಅದನ್ನೇ ಮಾಡೋಣ. ಅದರಿಂದ ಬದುಕಿನ ಅರ್ಥವೇ ಕಳೆಯುತ್ತಿದ್ದರೆ ಯಾವ ಪರಾರ್ಥಕ್ಕಾಗಿ ಅದನ್ನ ಉಳಿಸಿಕೊಳ್ಳಬೇಕು? ತಿರಸ್ಕಾರ ಮಾತ್ರವೇ ಉದ್ದೇಶವಲ್ಲ. ಮನುಷ್ಯತ್ವದ ನೆಲೆಯಲ್ಲಿ ವೈವಾಹಿಕ ಒಡನಾಟ ಸಂಪನ್ನವಾಗ ಬೇಕಾಗಿದೆ. ಆದ್ದರಿಂದಲೇ ವ್ಯವಸ್ಥೆಯ ದಾಸನಾದ ದುಷ್ಯಂತನನ್ನು ತಿರಸ್ಕರಿಸಿ, ಅವನು ಕೇವಲ ಮನುಷ್ಯನಾಗುವ ದಿನಕ್ಕಾಗಿ ಅಭಿನವ ಶಕುಂತಲೆ ಕಾಯುತ್ತಿದ್ದಾಳೆ; ಅವಳ ಆತ್ಮ ಸಾಕ್ಷಿಯನ್ನು ಬದುಕಲು ಹೊರಟಿದ್ದಾಳೆ.

●

# ಬಿ. ಪುಟ್ಟಸ್ವಾಮಯ್ಯನವರ ಸಾಹಿತ್ಯ ಮತ್ತು ಸ್ತ್ರೀಪರ ನಿಲುವುಗಳು

ಎಂ.ಎಸ್. ವೇದಾ

ಹಾಗೆ ನೋಡಿದರೆ ಪುಟ್ಟಸ್ವಾಮಯ್ಯನವರನ್ನು ನವೋದಯ ಸಾಹಿತ್ಯ ಘಟ್ಟಕ್ಕಷ್ಟೇ ಸೀಮಿತಗೊಳಿಸಿಕೊಳ್ಳಲು ಸಾಧ್ಯವಿಲ್ಲ. ನವೋದಯ ಸಾಹಿತ್ಯ ಮುನ್ನಡೆಯಲ್ಲಿದ್ದ ಸಮಯಕ್ಕೆ ಪುಟ್ಟಸ್ವಾಮಯ್ಯನವರು ಪತ್ರಿಕೋದ್ಯಮಿಯಾಗಿ, ರಂಗಭೂಮಿ ನಾಟಕಕಾರರಾಗಿ ಹೆಸರು ಪಡೆದಿದ್ದರು. ಐವತ್ತರ ದಶಕದಲ್ಲಿ ಕಾದಂಬರಿ ಕ್ಷೇತ್ರಕ್ಕೆ ಪ್ರವೇಶ ಮಾಡಿದ ಅವರು ೧೯೮೦ರ ತನಕ ಬರೆಯುತ್ತಲೇ ಬಂದವರು. ಕನ್ನಡ ಸಾಹಿತ್ಯದ ಮುಖ್ಯ ಕಾಲಘಟ್ಟಗಳ ಜೊತೆಜೊತೆಗೇ ಪುಟ್ಟಸ್ವಾಮಯ್ಯನವರು ತಮ್ಮ ಸಾಹಿತ್ಯ ಸೃಷ್ಟಿಯನ್ನು ಮಾಡಿಕೊಂಡು ಬಂದಿದ್ದಾರೆ. ಆದರೆ ಆಯಾಯಾ ಕಾಲಘಟ್ಟಗಳ ಪ್ರಭಾವ, ಪ್ರೇರಣೆಗಳು ಅವರ ಸಾಹಿತ್ಯದ ಮೇಲೆ ಸೈದ್ಧಾಂತಿಕ ಸ್ವರೂಪದಲ್ಲಿ ತೀವ್ರವಾದ ಪರಿಣಾಮ ಬೀರಿದ ಹಾಗೆ ಕಂಡು ಬರುವುದಿಲ್ಲ. ಅವರು ತಮ್ಮ ಕೃತಿಗಳ ವಸ್ತುವಾಗಿ ಆಯ್ಕೆ ಮಾಡಿಕೊಂಡ ಪೌರಾಣಿಕ ಮತ್ತು ಐತಿಹಾಸಿಕ ವಿಷಯಗಳು ಅದಕ್ಕೆ ಮುಖ್ಯ ಕಾರಣ ಎನ್ನಬಹುದು. ನವೋದಯದಲ್ಲಿ ಮಾಸ್ತಿಯಂಥವರು, ಪ್ರಗತಿಶೀಲರಲ್ಲಿ ತ.ರಾ.ಸು. ರಂಥವರು ಐತಿಹಾಸಿಕ ಕಾದಂಬರಿಗಳನ್ನು ಬರೆದಿದ್ದರೂ, ಪುಟ್ಟಸ್ವಾಮಯ್ಯ ಅವರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಆ ಭಿನ್ನತೆಯಲ್ಲಿ ನವೋದಯ, ಪ್ರಗತಿಶೀಲ, ನವ್ಯ, ಆಧುನಿಕ ವಿಚಾರವಾದಗಳ ಸ್ಥೂಲ ನೆಲೆಯ ಪ್ರಭಾವ ಹಾಗೂ ತೀವ್ರವಾದ ಮಾನವತಾವಾದದ ಕಡೆಗೆ ತುಡಿಯುವಂಥದ್ದು - ಈ ಗುಣ ಅವರ ಹಲವು ಕೃತಿಗಳಲ್ಲಿ ಗುರುತಿಸಲು ಬರುವುದು ಮುಖ್ಯವಾದುದು.

ಪುಟ್ಟಸ್ವಾಮಯ್ಯನವರ ಸಾಹಿತ್ಯವನ್ನು ಇಡಿಯಾಗಿ ಗಮನಿಸುವಾಗ ಅವರು ಯಾವುದೇ ಒಂದು ತಾತ್ವಿಕ ಇಲ್ಲವೆ ಸೈದ್ಧಾಂತಿಕ ಹಿನ್ನೆಲೆಯ ಸ್ತ್ರೀವಾದಿ ಅರಿವನ್ನು ಪಡೆದುಕೊಂಡಿದ್ದಾರೆ ಎನ್ನಿಸುವುದಿಲ್ಲ. ಹಾಗೆಂದು ಅವರು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸುವ ಸ್ತ್ರೀಪರ, ಸ್ತ್ರೀ ಕೇಂದ್ರಿತ ನಿಲುವುಗಳು ಪ್ರಶ್ನಾರ್ಹವಾಗಿ ಉಳಿದುಕೊಳ್ಳುವುದಿಲ್ಲ. ನಾಲ್ಕು ಗೋಡೆಗಳ ಶಾಲೆಯಲ್ಲಿ ಕಲಿತದ್ದಕ್ಕಿಂತ ಜೀವನದ ಬಯಲಿನಲ್ಲಿಯೇ ಹೆಚ್ಚು ಕಲಿತ ಪುಟ್ಟಸ್ವಾಮಯ್ಯನವರು ಹೆಣ್ಣನ್ನು ಕುರಿತಂತೆ ಹೊಂದಿರುವ ಶ್ರದ್ಧೆ, ಗೌರವ, ಅವಳಲ್ಲಿ ಗುರುತಿಸ ಬಯಸುವ ಘನತೆ, ಅವಳನ್ನು ಕುರಿತ ನೋಟದಲ್ಲಿನ ಉದಾರತೆ ಪ್ರಶ್ನಾರ್ಹವಲ್ಲ. ಹಾಗಾಗಿಯೆ ಒಂದೆರಡು ಸಂದರ್ಭಗಳನ್ನು

ಬಿಟ್ಟರೆ ಪುಟ್ಟಸಾಮಯ್ಯ ಸಾಹಿತ್ಯದಲ್ಲಿ ಸ್ತ್ರೀಪರ ನಿಲುವುಗಳು ಇಲ್ಲವೆ ಸ್ತ್ರೀ ಕೇಂದ್ರಿತ ನಿಲುವುಗಳು ಪ್ರಜ್ಞಾಪೂರ್ವಕವಾಗಿ ಇಡುಕಿ ತುರುಕಿದ್ದಾಗಿ ಕಂಡು ಬರುವುದಿಲ್ಲ. ಕೃತಿಯೊಳಗಿನದೇ ಸನ್ನಿವೇಶದಲ್ಲಿ ಅತ್ಯಂತ ಸಹಜವಾಗಿ ಹೊಮ್ಮುವ ಅಂಶವಾಗುತ್ತದೆ. ಆದರೂ ಅವರ ಸಾಹಿತ್ಯ ದಲ್ಲಿನ ಸ್ತ್ರೀಪರ ನಿಲುವು ಅಖಂಡ ಇಲ್ಲವೆ ಸಮಗ್ರ ಎಂದು ಹೇಳಲಾಗುವುದಿಲ್ಲ. ಐತಿಹಾಸಕ ಇಲ್ಲವೆ ಪೌರಾಣಿಕ ವಸ್ತುಗಳನ್ನು ನಿರ್ವಹಿಸುವಾಗಿನ ಅವರ ಸ್ತ್ರೀಪರ ನಿಲುವುಗಳು, ಸಾಮಾಜಿಕ ವಸ್ತುವನ್ನು ನಿರ್ವಹಿಸುವಾಗಿನ ಸಂದರ್ಭದಲ್ಲಿ ಪ್ರಶ್ನಾರ್ಹವಾಗದೆ ಉಳಿಯುವುದಿಲ್ಲ. ಇಲ್ಲೆಲ್ಲಾ ಪುಟ್ಟಸ್ವಾಮಯ್ಯ ಪೂರ್ವಗ್ರಹ ದೃಷ್ಟಿಕೋನ ಹೊಂದಿದ್ದಾರೆ ಎಂಬ ಗುಮಾನಿ ಬಂದೇ ಬರುತ್ತದೆ. ಅಂತಹ ಕಡೆಯಲ್ಲೆಲ್ಲಾ ಹೆಣ್ಣು ಕಪ್ಪು ಅಥವಾ ಬಿಳಿಪಿನಲ್ಲಿ, ದೇವತೆ ಇಲ್ಲ ರಾಕ್ಷಸಿಯ ಆಯಾಮದಲ್ಲಿ ಮಾತ್ರ ನಿಂತು ಬಿಡುತ್ತಾಳೆ. ಆದರೆ ಆ ಬದುಕಿನಲ್ಲಿಯೂ ಹೆಣ್ಣುಗಳ ಸಂಘರ್ಷ, ಹೋರಾಟ ಪೂರ್ಣವಾಗಿ ತೆರೆದುಕೊಂಡಿದೆ.

ಪುಟ್ಟಸ್ವಾಮಯ್ಯನವರ ಇಡೀ ಸಾಹಿತ್ಯವನ್ನು ಗಮನಿಸಿದಾಗ ಅದು ಸ್ತ್ರೀ ಕೇಂದ್ರಿತ ಸಾಹಿತ್ಯವಾಗಿಯೇ ಕಂಡು ಬರುತ್ತದೆ. ಬಸವಣ್ಣ-ಬಿಜ್ಜಳರನ್ನು ನಾಯಕ-ಪ್ರತಿನಾಯಕರನ್ನಾಗಿ ಒಳಗೊಂಡಿರುವ 'ಕ್ರಾಂತಿ ಕಲ್ಯಾಣ' ಬೃಹತ್ ಕಾದಂಬರಿ ಮಾಲೆಯಂತಹ ಕಡೆಯೂ ನಾಯಕ-ಪ್ರತಿನಾಯಕರನ್ನು ಮೀರಿ ಕಾಮೇಶ್ವರಿಯಂಥ ಪಾತ್ರ ತನ್ನೆಲ್ಲಾ ಸಂಕೀರ್ಣತೆಗಳೊಂದಿಗೆ ಬೆಳೆಯುವುದನ್ನು ಕಾಣಬಹುದು. ಪುಟ್ಟಸ್ವಾಮಯ್ಯನವರನ್ನು ಹೆಚ್ಚು ಖ್ಯಾತಗೊಳಿಸಿದ ನಾಟಕ ಸಾಹಿತ್ಯವಾಗಲಿ, ಅವರ ಬರಹವನ್ನು ಮಹತ್ತ್ವವಾಗಿಸಿದ ಕಾದಂಬರಿ ಸಾಹಿತ್ಯವಾಗಲಿ, ಬಹುತೇಕ ಕೃತಿಗಳು ಪರಂಪರೆಯ ಒಳಗಿನ ಮೌಲ್ಯಗಳಲ್ಲಿರಬಹುದು, ಇಲ್ಲವೆ ಪರಂಪರೆಯ ಹೊರಗಿನ ವಿಷಯಗಳಲ್ಲಿ ಇರಬಹುದು - ಒಂದು ಹೆಣ್ಣು ಸಾಧಿಸುವ ಔನ್ನತ್ಯ ಇಲ್ಲ, ಪತನಗಳನ್ನು ಕಟ್ಟಿಕೊಡುವ ಕಾರ್ಯವನ್ನು ನಿರ್ವಹಿಸುತ್ತವೆ. ನೂರಾರು ಸಂಖ್ಯೆಯಲ್ಲಿ ಸ್ತ್ರೀಯರನ್ನು, ಅವರ ಸಂವೇದನೆ, ಸಂಕೀರ್ಣತೆಗಳನ್ನು ಹೊಂದಿರುವ ಪುಟ್ಟಸ್ವಾಮಯ್ಯನವರ ಸಾಹಿತ್ಯ, ಗಣಿಕೆಯಿಂದ ಹಿಡಿದು ಗರತಿಯವರೆಗೆ, ಹಳ್ಳಿಯ ಓರ್ವ ಸಾಮಾನ್ಯ ಗ್ರಾಮೀಣೆಯಿಂದ ಹಿಡಿದು ಪಟ್ಟಣದಲ್ಲಿನ ಅತ್ಯಾಧುನಿಕ ತರುಣಿಯವರೆಗೆ, ದಾಸಿಯಿಂದ ಹಿಡಿದು ಮಹಾರಾಣಿಯವರೆಗೆ, ಸಾಮಾನ್ಯ ಹೆಣ್ಣಿನಿಂದ ಹಿಡಿದು ಆಧ್ಯಾತ್ಮಿಕತೆಯ ಅತ್ಯುನ್ನತಿಯನ್ನು ಮುಟ್ಟಿದ ಸಾಧಕಿಯವರೆಗೆ-ಎಲ್ಲ ಬಗೆಯ, ವರ್ಗದ, ಮೌಲ್ಯದ ಹೆಣ್ಣುಗಳನ್ನು ಸೃಷ್ಟಿಸಿದೆ. ಅವರ ಬಹುತೇಕ ಕೃತಿಗಳ ಶೀರ್ಷಿಕೆ ಕೂಡ ಸ್ತ್ರೀ ಸಂಬಂಧಿತ ವಾಗಿರುವುದನ್ನು ಗಮನಿಸಬಹುದು.

ಈ ಹಿನ್ನೆಲೆಯಲ್ಲಿ ಪುಟ್ಟಸ್ವಾಮಯ್ಯನವರ ಸಾಹಿತ್ಯ ಬೆರಳೆಣಿಕೆಯ ಕೆಲವು ಅಪವಾದಗಳನ್ನು ಬಿಟ್ಟರೆ ಒಟ್ಟಾರೆ ಸ್ತ್ರೀ ಕೇಂದ್ರಿತವಾದದ್ದು, ಕೆಲವು ಪ್ರಶ್ನೆಗಳು ಮತ್ತು ಪರಿಮಿತಿಗಳನ್ನು ಸಾಪೇಕ್ಷ ವಾಗಿ ಒಳಗೊಂಡು ಅವರ ಸ್ತ್ರೀಪರ ನಿಲುವುಗಳು, ಕಾಳಜಿಗಳು ಅವರ ಕೃತಿಗಳಲ್ಲಿ ಅಭಿವ್ಯಕ್ತ ಗೊಂಡಿವೆ - ಎಂಬ ನಿಲುವನ್ನು ತಾಳಬಹುದಾಗಿದೆ.

ಪುಟ್ಟಸ್ವಾಮಯ್ಯನವರು ವೃತ್ತಿರಂಗ ಭೂಮಿಗಾಗಿಯೇ ನಾಟಕಗಳನ್ನು ಬರೆದವರು. ಹಾಗಾಗಿ ಅವರ ನಾಟಕ ಸಾಹಿತ್ಯದ ಸಾಧನೆ ಮತ್ತು ಇತಿಮಿತಿಗಳು ಮತ್ತು ವೃತ್ತಿರಂಗಭೂಮಿ ಇವೆರಡರ

ನಡುವಿನಲ್ಲಿ ಸಾಪೇಕ್ಷವಾದ ಸಂಬಂಧ ಇದ್ದೇ ಇದೆ. ಪುಟ್ಟಸ್ವಾಮಯ್ಯನವರ ನಾಟಕಗಳು ಸಾಂಪ್ರದಾಯಕ ನಾಟಕ ಪರಂಪರೆಯಲ್ಲಿಯೇ ಬಂದವುಗಳಾದರೂ, ಅಂದಿನ ವೃತ್ತಿರಂಗಭೂಮಿ ನಾಟಕಗಳ ಕಲಾತ್ಮಕತೆಯನ್ನು ಅದರ ನಾಟಕಗಳು ತಮ್ಮ ಮಿತಿಯಲ್ಲಿಯೇ ಚೂಪುಗೊಳಿಸಿ ವೃತ್ತಿರಂಗಭೂಮಿ ನಾಟಕಗಳಿಗೆ ಬೇರೆಯದೇ ಹಾದಿಯನ್ನು ತೋರಿಸಿದ್ದು ಈಗ ಇತಿಹಾಸ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ವಸ್ತುಗಳನ್ನು ಒಳಗೊಂಡ ಸುಮಾರು ೨೨ ನಾಟಕಗಳು ಪುಟ್ಟಸ್ವಾಮಯ್ಯನವರದು. ಅಂದಿನ ದಿನಗಳಿಗೆ ತಕ್ಕಂತೆ ಪುಟ್ಟಸ್ವಾಮಯ್ಯ ಐತಿಹಾಸಿಕ ಮತ್ತು ಪುರಾಣದ ವಸ್ತುಗಳನ್ನೇ ಬಹುತೇಕ ತಮ್ಮೆಲ್ಲ ನಾಟಕಗಳ ವಸ್ತುವಾಗಿಸಿಕೊಂಡಿದ್ದಾರೆ. ಅಕ್ಕಮಹಾದೇವಿ, ಸತೀ ತುಲಸಿ, ಯಾಜ್ಞಸೇನಿ, ಅಭಿನೇತ್ರಿ, ಬಭ್ರುವಾಹನ, ರಾಣಿ, ಪಿಟ್ಟಿನಕೋಳಿ, ನೆಲೆಯಾಗು ಕಲೆಯಾಗು ಶಿಲೆಯಾಗು ದೇವಿ - ಈ ನಾಟಕಗಳು ಸಂಪೂರ್ಣ ವಾಗಿ ಸ್ತ್ರೀ ಕೇಂದ್ರಿತವಾಗಿಯೇ ರಚನೆಗೊಂಡವುಗಳಾಗಿವೆ. ದಶಾವತಾರ, ಕುರುಕ್ಷೇತ್ರಗಳಂತಹ ನಾಟಕಗಳಲ್ಲಿಯೂ ಸಂದರ್ಭ ಸಿಕ್ಕ ಕಡೆಯೆಲ್ಲಾ ಪುಟ್ಟಸ್ವಾಮಯ್ಯನವರ ಸ್ತ್ರೀ ಪಾತ್ರಗಳನ್ನು ಉದಾರಗೊಳಿಸುವ, ಉನ್ನತಗೊಳಿಸುವ ಪ್ರಯತ್ನವನ್ನು ಗಮನಿಸಬಹುದು.

ಪೌರಾಣಿಕ ವಸ್ತುಗಳನ್ನು ನಾಟಕವಾಗಿಸುವ ನಿರ್ವಹಣೆಯಲ್ಲಿ ಪುಟ್ಟಸ್ವಾಮಯ್ಯನವರದೇ ವೈಶಿಷ್ಟ್ಯ ಇದೆ. ಪೌರಾಣಿಕ ವಸ್ತುವನ್ನು ಆಧುನಿಕ ದೃಷ್ಟಿಕೋನದಿಂದ ನೋಡಿ, ಅದರ ಸತ್ಯಾಸತ್ಯತೆಯನ್ನು ಒರೆಹಚ್ಚಿ, ವಾಸ್ತವವೆಂಬಂತೆ ಚಿತ್ರಿಸುವ ಪ್ರಯತ್ನದಲ್ಲಿ ಆ ವೈಶಿಷ್ಟ್ಯ ಇದೆ. ಅವರ ನಾಟಕಗಳ ಪ್ರಮುಖ ಸ್ವರೂಪವಾದ ಈ ಲಕ್ಷಣ ಆ ಕಾಲಕ್ಕೆ ಆ ನಾಟಕಗಳ ಅಂತಸ್ಸತ್ತ್ವವಾಗಿದೆ ಎಂದು ಗುರುತಾದರೂ ಮತ್ತೊಂದು ವಿಧದಿಂದ ಅದೇ ಗುಣ ಅವರ ನಾಟಕಗಳ ಒಂದು ಪರಿಮಿತಿಯೂ ಆಗಿ ಬಿಟ್ಟಿದೆಯೆಂಬುದನ್ನು ಮರೆಯವಂತಿಲ್ಲ. ಪೌರಾಣಿಕ ಪ್ರಪಂಚವನ್ನು ಆಧುನಿಕ ದೃಷ್ಟಿಯಿಂದ, ತಮ್ಮ ಯುಗ ಧರ್ಮದಿಂದ - ವೈಜ್ಞಾನಿಕತೆಯನ್ನು ಮೂಲವಾಗಿಟ್ಟುಕೊಂಡು ಅರ್ಥೈಸುತ್ತಾ ತಮ್ಮದೇ ಆದ ಮತ್ತೊಂದು ನವ್ಯ ಪುರಾಣವನ್ನು ಅವರು ಸೃಷ್ಟಿಸುತ್ತಾರೆ. ಹಾಗಾಗಿ ಪುರಾಣ ಸಂದರ್ಭದ ಪ್ರಾಕೃತಿಕತೆ, ಸಂಕೀರ್ಣತೆಗಳು ಮಾಯ ವಾಗಿ, ವಸ್ತು ನಿರ್ವಹಣೆಯಲ್ಲಿ ವಸ್ತುವನ್ನು ಅತಿ ಸರಳೀಕರಣಗೊಳಿಸುವ ಆತಂಕವನ್ನು ಆ ಸೃಷ್ಟಿ ಒಳಗೊಂಡಿದೆ. ಬಹುತೇಕ ನಾಟಕಗಳು ಈ ಆತಂಕವನ್ನು ಎದುರಿಸಿವೆ. ಮುಖ್ಯವಾಗಿ ಸ್ತ್ರೀಯರನ್ನು ಕುರಿತಂಥ ಮಧ್ಯಮವರ್ಗದ ಮೌಲ್ಯಗಳ ಹೇರುವಿಕೆಯ ಮೂಲಕ ಪುರಾಣದ ವಸ್ತು, ಪಾತ್ರ, ಮೌಲ್ಯಗಳನ್ನು ಪ್ರಶ್ನಿಸುವ, ಪರಿವರ್ತಿಸುವ, ಅರ್ಥೈಸುವ ಪುಟ್ಟಸ್ವಾಮಯ್ಯನವರ ಪ್ರಯತ್ನ, ಮೂಲದ ಸಂಕೀರ್ಣತೆ, ಸತ್ತ್ವಗಳನ್ನೇ ಕಳೆದು ಸಂಸ್ಕೃತೀಕರಣಗೊಂಡ ಸರಳೀಕರಣ ಗಳಾಗಿ ನಾಟಕಗಳು ಸೀಮಿತ ಪರಿಮಿತಿಯಲ್ಲಿಯೇ ನಿಂತುಬಿಟ್ಟ ಅನುಭವವನ್ನು ತಂದು ಕೊಡುತ್ತದೆ.

ಸತೀತುಲಸಿ, ಯಾಜ್ಞಸೇನಿ, ನೆಲೆಯಾಗು ಕಲೆಯಾಗು ಶಿಲಾಯಾಗು ದೇವಿ, ಅಕ್ಕಮಹಾ ದೇವಿ - ಇಂತಹ ಅವರ ಮುಖ್ಯ ನಾಟಕಗಳಲ್ಲಿಯೇ ಈ ಆತಂಕವನ್ನು ಗಾಢವಾಗಿ ಗಮನಿಸ ಬಹುದು. ಇವೆಲ್ಲವೂ ಸ್ತ್ರೀ ಕೇಂದ್ರಿತ ನಾಟಕಗಳೇ. ಪುರಾಣ ಪ್ರತಿಮೆಗಳನ್ನು ಒಡೆದು

ಮತ್ತೊಂದು ಪ್ರತಿಮೆಯನ್ನು ಸೃಷ್ಟಿಸಬೇಕೆಂದು ಪ್ರಾಮಾಣಿಕವಾಗಿ ಆಶಿಸುವ ನಾಟಕಗಳೇ. ಹೊಸದಾಗಿಯೇ ಸೃಷ್ಟಿಗೊಳ್ಳುವ ತುಲಸಿಯ ಪುರಾಣ, 'ಬಭ್ರುವಾಹನ'ದಲ್ಲಿ ಅಭಿವ್ಯಕ್ತಗೊಳ್ಳುವ ಗಂಗೆಯ ಮಾತೃಪ್ರೇಮದಲ್ಲಿ, ಚಿತ್ರಾಂಗದೆಯನ್ನು ಆಧುನಿಕ ದೃಷ್ಟಿಯಲ್ಲಿ ಅಧಿಕಾರದಲ್ಲಿರುವ ಹೆಣ್ಣೊಬ್ಬಳ ಶೀಲಶಂಕೆ ನಾಡಿನ ರಾಜಕೀಯ ಚದುರಂಗದಾಟದಲ್ಲಿ ಉಪಯೋಗಗೊಳ್ಳದ ರೀತಿಯಲ್ಲಿ ಸೃಷ್ಟಿಸುವ ಬಗೆಯಲ್ಲಿ, 'ಹಿಟ್ಟಿನ ಕೋಳಿ'ಯಲ್ಲಿ ತಾಯಿ ಮತ್ತು ಮಗನ ಸಂಬಂಧ ದಲ್ಲಿ ಬೇರೊಂದು ಅರ್ಥ ಹುಡುಕಿ ಅಮೃತಮತಿಯ ಪಾತ್ರಕ್ಕೆ ಬೇರೆಯದೆ ಆಯಾಮ ತಂದು ಕೊಡುವಲ್ಲಿ, ಭಿನ್ನ ದೃಷ್ಟಿ, ವಯಸ್ಸು, ಮನಸ್ಸು, ರೂಪ, ಅಭಿರುಚಿ-ಹೀಗೆ ಹಲವು ವಿಷಯಗಳಲ್ಲಿ ಪತಿ-ಪತ್ನಿಯರ ನಡುವೆ ಇರುವ ಮುಚ್ಚಲಾರದ ಕಂದಕಗಳ ನಡುವೆ ಅಹಲ್ಯೆಯ ಪಾತ್ರಕ್ಕೆ ಕೊಡುವ ಹೊಸ ಹಿನ್ನೆಲೆಯಲ್ಲಿ - ವಸ್ತು, ಪಾತ್ರ, ಮೌಲ್ಯಗಳಿಗೆ ತಮ್ಮದೇ ಛಾಪನ್ನು ಒತ್ತಲು ಪುಟ್ಟಸ್ವಾಮಯ್ಯ ಯತ್ನಿಸುತ್ತಾರೆ. ಆ ಯತ್ನದಲ್ಲಿ ಅವರು ಮಧ್ಯಮವರ್ಗದ ಮನೋಭಿರುಚಿ, ಮೌಲ್ಯಗಳ ಆಶಯಕ್ಕೆ ಅನುಗುಣವಾಗಿಯೇ ಪ್ರವರ್ತಿಸುವುದರಿಂದ-ಹೊಸದೇನನ್ನೂ ಸಂಪೂರ್ಣ ವಾಗಿ ಸಾಧಿಸಲಾರದೆ ಅರ್ಧದಲ್ಲಿಯೇ ನಿಂತು ಬಿಡುತ್ತಾರೆ. ಎಷ್ಟೋ ಸಂದರ್ಭಗಳಲ್ಲಿ ಮೂಲ ಪುರಾಣದಲ್ಲಿ ಇದ್ದದ್ದಕ್ಕಿಂತ ಮತ್ತೆಯೂ ಹಿಂದಿನ ಕಾಲಕ್ಕೆ ಹೆಣ್ಣನ್ನು ಕುರಿತಾದ ನಿಲುವುಗಳು ಪ್ರತಿಗಾಮಿಯಾಗಿ ಬಿಡುತ್ತದೆ. ತುಲಸಿ, ಅಹಲ್ಯೆ, ರೇಣುಕೆ, ದ್ರೌಪದಿ, ಅಕ್ಕ - ಈ ಮುಂತಾದ ಪಾತ್ರಗಳು ಪುರಾಣ, ಇತಿಹಾಸದಲ್ಲಿರುವ ಸಂಕೀರ್ಣತೆಯನ್ನೇ ಕಳೆದುಕೊಂಡು ಬಿಡುತ್ತವೆ. ಮಧ್ಯಮವರ್ಗದ ಸ್ತ್ರೀಯರನ್ನು ಕುರಿತಾದ, ಪರಂಪರೆಯೊಳಗಿನ ಮೌಲ್ಯಗಳ ಮೂಲಕ ಶೀಲ, ಪಾತಿವ್ರತ್ಯ - ಇವುಗಳ ನಡುವಿನಲ್ಲಿಯೇ ಉಸಿರುಗಟ್ಟಿ ತೊಳಲಾಡುವ ಅನುಭವ ಮೂಡಿಸುತ್ತವೆ. ಪುರಾಣ ಪ್ರತಿಮೆ ಛಿದ್ರಗೊಂಡು ಆ ಸ್ಥಾನದಲ್ಲಿ ಮತ್ತೊಂದು ಪ್ರತಿಮೆ ಮೂಡಬಹುದೆಂಬ ನಿರೀಕ್ಷೆಯಲ್ಲಿರುವಾಗಲೇ ಅದು ನಿಜವಾಗದೆ ಪುರಾಣ ಪ್ರತಿಮೆಗಳಿಗಿಂತ, ಆ ಪಾತ್ರಗಳ ಔನ್ನತ್ಯ ವನ್ನು, ಅವುಗಳಿಗಿರುವ ಬದುಕಿನ ಸಾಧ್ಯತೆಗಳನ್ನು ಸಂಕುಚಿತಗೊಳಿಸಿ ಬಿಡುತ್ತವೆ. ಕೃಷ್ಣನಿಂದ ತುಲಸಿಯ ಪಾತಿವ್ರತ್ಯ ಭಂಗವಾಗದೆ ಉಳಿದು ಕೃಷ್ಣನ ಪಾತ್ರವನ್ನೇ ಉದಾರಗೊಳಿಸುವಲ್ಲಿ, 'ಯಾಜ್ಞಸೇನಿ'ಯಲ್ಲಿ ಪ್ರೀತಿ, ಪ್ರೇಮ, ಕೋಮಲತೆಗಳಲ್ಲಿಯೇ ವ್ಯಕ್ತಗೊಳ್ಳುವ ದ್ರೌಪದಿಯ ಪಾತ್ರದಲ್ಲಿ. ತಾಯಿಯೆಂದು ತಿಳಿಯದೆ ಬೇರಾರೋ ಸ್ತ್ರೀಯೆಂದು ಹಿಂದು ಮುಂದೆ ನೋಡದೆ ಹತ್ಯೆ ಮಾಡುವ 'ದಶಾವತಾರ' ನಾಟಕದ ಪರಶುರಾಮನಲ್ಲಿ, ಅಮೃತಮತಿಯ ಪಾತ್ರದ ಉದಾತ್ತೀಕರಣದ ಪ್ರಯತ್ನದಲ್ಲಿ, ತಾಯಿ ಚಂದ್ರಾವಳಿಯ ಪಾತ್ರವನ್ನೇ ಪತನಕ್ಕೆಳೆಯುವಲ್ಲಿ - ಹೀಗೆ ಗುರುತಿಸುತ್ತಾ ಹೋಗಬಹುದು. ಅಹಲ್ಯೆಯ ಬದುಕಿಗೆ ನಾಟಕದ ಮೊದಲರ್ಧ ಭಾಗದಲ್ಲಿ ವಾಸ್ತವತಾ ಧೋರಣೆಯ ವಿಶ್ಲೇಷಣೆಯನ್ನು ಓದುಗರು ಒಪ್ಪಿಕೊಳ್ಳುವಂತೆ ಕೊಡುವ ಪುಟ್ಟಸ್ವಾಮಯ್ಯನವರು ದ್ವಿತೀಯಾರ್ಧದಲ್ಲಿ ಇಂದ್ರ-ಅಹಲ್ಯೆಯರ ಸಂಬಂಧವನ್ನೇ ನಿರಾಕರಿಸಿ ಬಿಡುತ್ತಾರೆ. ಮಧ್ಯಮವರ್ಗದ ಮನೋಭಿರುಚಿಗೆ ತೋರಿದಂತೆ ಗೌತಮನ ಶಾಪ, ಶಾಪಕ್ಕೆ ಕಾರಣ ಇವುಗಳೆಲ್ಲಾ ತೀರಾ ಬಾಲಿಶವಾದ ವಿಶ್ಲೇಷಣೆ ಪಡೆದುಕೊಳ್ಳುತ್ತವೆ. ಮನೋ ವಿಶ್ಲೇಷಣೆಯ ಮೂಲಕ ಅಹಲ್ಯೆಯ ಪಾತ್ರವನ್ನು ಅರ್ಥೈಸುವ ಪುಟ್ಟಸ್ವಾಮಯ್ಯನವರ ಪ್ರಯತ್ನ,

ಅಹಲ್ಯೆ ಮತ್ತು ಇಂದ್ರರ ನಡುವೆ ಏರ್ಪಟ್ಟ ಸಂಬಂಧವನ್ನೇ ನಿರಾಕರಿಸುವ ಮೂಲಕ ಅರ್ಥ ಕಳೆದುಕೊಳ್ಳುತ್ತದೆ. ಮೂಲ ಕಥೆಯ ಸಂಕೀರ್ಣತೆಯೂ ಕಳೆಯುತ್ತದೆ. ಯಾವ ತಪ್ಪನ್ನೂ ಮಾಡದೆ ಒಂದು ಹೆಣ್ಣು ಪಡಬೇಕಾದ ಪಾಡನ್ನಷ್ಟೇ ಕಟ್ಟಿಕೊಡುವ ಕೆಲಸ ಮಾತ್ರ ಇಲ್ಲಿನದಾಗಿ ಬಿಡುತ್ತದೆ. ಪೌರಾಣಿಕ ವಸ್ತುವನ್ನೊಳಗೊಂಡ ಎಲ್ಲ ಸ್ತ್ರೀ ಪ್ರತಿಮೆಗಳು ಇದೇ ಬಗೆಯ ಆತಂಕವನ್ನು ಪುಟ್ಟಸ್ವಾಮಯ್ಯನವರ ನಾಟಕಗಳಲ್ಲಿ ಎದುರಿಸಿವೆ.

ಐತಿಹಾಸಿಕ ವ್ಯಕ್ತಿಯಾಗಿರುವ ಅಕ್ಕನ ಪಾತ್ರದಲ್ಲಿಯೂ ನಾವು ಇದೇ ಬಗೆಯ ಆತಂಕವನ್ನು ಎದುರಿಸುತ್ತೇವೆ. ಅಕ್ಕಮಹಾದೇವಿ, ಕೌಶಿಕನನ್ನು ಮದುವೆಯಾಗಿ ಆತನೊಡನೆ ಸಂಸಾರ ನಡೆಸಿದ್ದನ್ನು ಒಪ್ಪುವ ಪುಟ್ಟಸ್ವಾಮಯ್ಯನವರು, ಅದೇ ಸಂಬಂಧ, ಸಂಸಾರಗಳನ್ನು ಧಿಕ್ಕರಿಸಿ ದಿಗಂಬರೆಯಾದುದನ್ನು ಒಪ್ಪುವುದಿಲ್ಲ. ಅಷ್ಟೇ ಅಲ್ಲ ಅಕ್ಕಮಹಾದೇವಿಯ ಪಾತ್ರ ನಾಟಕದಲ್ಲಿ ಓರ್ವ ಸಾಮಾನ್ಯ ಗ್ರಾಮಿಣಿಯ ಮಟ್ಟದಲ್ಲಿಯೇ ಉಳಿದುಬಿಡುತ್ತದೆ. ಮಹಾದೇವಿಯ ಭಕ್ತಿ ಆಂತರಿಕ ಭಕ್ತಿಯಾಗದೆ ಬಾಹ್ಯ ಭಕ್ತಿಯಾಗಿ ತೀವ್ರತೆಯನ್ನು ಕಳೆದುಕೊಳ್ಳುತ್ತದೆ. ಅಪೂರ್ವ ಜ್ಞಾನ, ಅನನ್ಯ ಭಕ್ತಿ, ಅಪೂರ್ವ ಪ್ರೀತಿ-ತ್ರಿವೇಣಿ ಸಂಗಮವಾದ ಅಕ್ಕಮಹಾದೇವಿ ನಾಟಕದಲ್ಲಿ ಕೇವಲ ಮುಗ್ಧ ಭಕ್ತೆಯಾಗಿ, ಗ್ರಾಮಿಣಿಯಾಗಿ ಚಿತ್ರತಳಾಗುತ್ತಾಳೆ. ಆಕೆಯ ಒಳಮುಖ ಸಂಘರ್ಷವನ್ನು ಚಿತ್ರಿಸದ ನಾಟಕ ಹೊರಮುಖ ಸಂಘರ್ಷದಲ್ಲಿ ಅಕ್ಕನನ್ನು ಹಿಡಿದಿಡಲು ಪ್ರಯತ್ನಿಸಿ ತನಗೆ ತಾನೇ ಪರಿಮಿತಿಯನ್ನು ಹಾಕಿಕೊಳ್ಳುತ್ತವೆ.

ಪುಟ್ಟಸ್ವಾಮಯ್ಯನವರ ನಾಟಕಗಳಲ್ಲಿನ ಸ್ತ್ರೀಯರುಗಳಿಗೆ ಸಲ್ಲುವ ಈ ಬಗೆಯ ಪರಿಮಿತಿ ಪುಟ್ಟಸ್ವಾಮಯ್ಯನವರು ರಂಗಭೂಮಿಗೆಂದೇ ನಾಟಕ ರಚಿಸಿದ ಹಿನ್ನೆಲೆಯನ್ನು ಹೊಂದಿದೆ. ರಂಗಭೂಮಿ ಪ್ರೇಕ್ಷಕರ ಮಧ್ಯಮವರ್ಗದ ಮನೋಧರ್ಮ, ಮನೋಭಿರುಚಿಗಳಿಗಾಗಿಯೇ ಹೊಸದನ್ನು ಕೊಡ ಹೊರಟ ಕಾಲದಲ್ಲಿ ನಾಟಕದ ಒಟ್ಟಾರೆ ಸ್ವರೂಪ, ಭಾಷೆ, ಶೈಲಿ, ಸಂಗೀತ ಇವುಗಳಿಗೆ ಹೆಚ್ಚು ಒತ್ತು ಬಿದ್ದು ವಸ್ತು ಮತ್ತು ಪಾತ್ರ ನಿರ್ವಹಣೆಯಲ್ಲಿ ಪುಟ್ಟಸ್ವಾಮಯ್ಯನವರ ಪರಿಮಿತಿ ಏರ್ಪಟ್ಟಿದ್ದನ್ನು, ಆ ಕಾರಣವಾಗಿ ವಸ್ತುಗಳು ಸಂಸ್ಕೃತೀಕರಣ, ಸರಳೀಕರಣ ಹೊಂದಿದ್ದನ್ನು ನೋಡುತ್ತೇವೆ. ಇವೆಲ್ಲವೂ ಸ್ತ್ರೀಪಾತ್ರಗಳ ಪರಿಮಿತಿಗೆ ವೇದಿಕೆಯಾಗಿವೆ. ಹೆಣ್ಣನ್ನು ಕುರಿತಂತೆ ಪಾರಂಪರಿಕ, ಸಾಂಪ್ರದಾಯಿಕ ಮೌಲ್ಯಗಳ ಒಳಗೇ ಕಟ್ಟಿಕೊಡುವ ಪ್ರಯತ್ನಗಳೇ ಇಲ್ಲಿ ಸಾಧಿತವಾಗುವುದರಿಂದ ಅಹಲ್ಯೆ, ತುಲಸಿ, ದ್ರೌಪದಿ, ರೇಣುಕೆ, ಅಕ್ಕಮಹಾದೇವಿಯಂತಹ ಪಾತ್ರಗಳು ಶೀಲ, ಪಾತಿವ್ರತ್ಯ. ಸತೀಧರ್ಮಗಳಂತಹ ಸಂಕೋಲೆಗಳ ನಡುವೆ ತಾವು ಇದ್ದ ಕಾಲಕ್ಕಿಂತ ಹಿಂದೆ ಹೋದ ಅನುಭವವನ್ನು ಮೂಡಿಸುತ್ತವೆ. ಸ್ತ್ರೀ ಕೇಂದ್ರಿತವಾದ, ಸ್ತ್ರೀಯ ಸಮಸ್ಯೆಗಳನ್ನು ಕೇಂದ್ರವಾಗಿ ಹೊಂದಿರುವ ಈ ನಾಟಕಗಳು ಸ್ತ್ರೀಪರವಾದ ನಿಲುವಿಗೆ ಸಂಬಂಧಪಟ್ಟಂತೆ ತಮ್ಮ ಗರ್ಭದಲ್ಲಿ ಈ ಬಗೆಯ ಅಪಾಯವನ್ನು ಅಡಗಿಸಿಟ್ಟುಕೊಂಡಿರುವುದು ಪುಟ್ಟಸ್ವಾಮಯ್ಯನವರ ನಾಟಕಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ನೋಡುವಾಗಿನ ಬಹುದೊಡ್ಡ ನೇತ್ಯಾತ್ಮಕ ಅಂಶವಾಗಿದೆ.

* * * *

ಪುಟ್ಟಸ್ವಾಮಯ್ಯನವರ ಕಾದಂಬರಿಗಳಲ್ಲಿ ಹೆಚ್ಚು ಕೃತಿಗಳ ವಸ್ತು ಇತಿಹಾಸವೇ ಆಗಿದೆ. ಕೆಲವು ಸಾಮಾಜಿಕ ವಸ್ತುವನ್ನು ಒಳಗೊಂಡಿವೆ. ಕಾದಂಬರಿ ಸಾಹಿತ್ಯದಲ್ಲಿ ಇತಿಹಾಸ ಲೋಕದ ಸ್ತ್ರೀಯರು ಮತ್ತು ಸಾಮಾಜಿಕ ಲೋಕದ ಸ್ತ್ರೀಯರುಗಳನ್ನು ಕುರಿತಂತೆ ಪುಟ್ಟಸ್ವಾಮಯ್ಯನವರ ನೋಟ ಮತ್ತು ನಿಲುವುಗಳು ಅಖಂಡವಾಗದೆ ಭಿನ್ನವಾಗಿರುವುದನ್ನು ಸ್ಪಷ್ಟವಾಗಿ ಗುರುತಿಸ ಬಹುದು. ಅವರ ಐತಿಹಾಸಿಕ ಕಾದಂಬರಿಗಳನ್ನು ಗಮನಿಸಿದರೆ ಸಾಂಪ್ರದಾಯಿಕ ಚೌಕಟ್ಟಿನೊಳಗೆ ಯಾದರೂ ಹೆಣ್ಣು ಹಲವು ಬಗೆಯ ಸಾಧ್ಯತೆಗಳುಳ್ಳ ವೇದಿಕೆಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಪುರುಷ ಪ್ರಧಾನ ಸಮಾಜದಲ್ಲಿಯೂ ಅವಳು ಕಾಲೂರಿ ನಿಲ್ಲಬಲ್ಲಂಥ ಅವಕಾಶಗಳನ್ನು ವಿಪುಲವಾಗಿ ಸೃಷ್ಟಿಕೊಳ್ಳಬಲ್ಲಳು ಎಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತಾಳೆ. ಅದೇ ತಮ್ಮ ಕಾಲದ ಸಾಮಾಜಿಕ ಪಾತ್ರಗಳನ್ನು ನಿರ್ವಹಿಸುವಾಗ ಪುಟ್ಟಸ್ವಾಮಯ್ಯನವರು ಹೆಣ್ಣನ್ನು ಶೀಲ, ಪಾತಿವ್ರತ್ಯ, ಅಸೂಯೆ, ಸೇಡು - ಈ ಮುಂತಾದ ಸಂಪ್ರದಾಯದ ಪಾರಂಪರಿಕ ದೃಷ್ಟಿಕೋನದ ಚೌಕಟ್ಟಿನೊಳಗೆ ತಂದು ಪಾತ್ರಗಳನ್ನು ಕಪ್ಪು-ಬಿಳುಪಾಗಿ ಸೃಷ್ಟಿಸಿಬಿಡುತ್ತಾರೆ.

ಪುಟ್ಟಸ್ವಾಮಯ್ಯನವರ 'ಕ್ರಾಂತಿ ಕಲ್ಯಾಣ'' ಕಾದಂಬರಿ ಮಾಲೆ ಅವರ ಮಹಾಕಾವ್ಯ ಕಾದಂಬರಿ (Epic Novel)ಯಾಗಿದೆ. ಹನ್ನೆರಡನೆಯ ಶತಮಾನದ, ಬಸವಯುಗದ ರಾಜಕೀಯ, ಧಾರ್ಮಿಕ, ಸಾಮಾಜಿಕ ವಸ್ತುವನ್ನು ತಮ್ಮದೇ ಆದ ಒಂದು ವಿಶಿಷ್ಟ ದೃಷ್ಟಿಕೋನ ದಲ್ಲಿ ಕಲಾಕೃತಿಯಾಗಿಸುವ ಪ್ರಯತ್ನವನ್ನು ಪುಟ್ಟಸ್ವಾಮಯ್ಯನವರು ಇಲ್ಲಿ ಮಾಡಿದ್ದಾರೆ. ಹನ್ನೆರಡನೆಯ ಶತಮಾನ ಬಹುಮುಖ ವೈಶಿಷ್ಟ್ಯವನ್ನುಳ್ಳ ಕಾಲ. ಪ್ರತಿಯೊಂದು ನೆಲೆಯಲ್ಲಿಯೂ ಜಡ್ಡುಗಟ್ಟಿದ್ದ ವ್ಯವಸ್ಥೆಯ ವಿರುದ್ಧವಾಗಿ ಮೌಲ್ಯಗಳ ಪುನರ್‌ಚಿಂತನೆ ಮತ್ತು ಹೊಸ ಮೌಲ್ಯಗಳ ಪ್ರತಿಪಾದನೆ ನಡೆದ ಕಾಲ. ಹಲವು ಬಗೆಯ ಅಸಮಾನತೆಗಳಿಂದ ಕೂಡಿದ ಸಮಾಜದ ವೈರುಧ್ಯ ಗಳನ್ನು ಪ್ರಶ್ನಿಸಿ, ಪ್ರತಿಭಟಿಸಿದ ಕಾಲ. ಅವರು ಎತ್ತಿದ ಪ್ರಶ್ನೆ, ಪ್ರತಿಭಟನೆಗಳಲ್ಲಿ ಸಮಾಜದಲ್ಲಿ ಹೆಣ್ಣು, ಮತ್ತವಳ ನೆಲೆಗಳನ್ನು ಕುರಿತಾದುವು ಇದ್ದವು. ಈ ಸಂಕ್ರಮಣ ಕಾಲ ಹಲವು ಪರಿಮಿತಿ ಗಳನ್ನು ಇಟ್ಟುಕೊಂಡು ಸಹ ಹೆಣ್ಣಿಗೆ ಒಂದು ಹೊಸ ಆಯಾಮವನ್ನು ಸೃಷ್ಟಿಸಲು ಯತ್ನಿಸಿತು. ಹಾಗಾಗಿಯೇ ಈ ಕಾಲದ ವೈಶಿಷ್ಟ್ಯದ ನಿರ್ಮಾಣದಲ್ಲಿ ಹೆಣ್ಣುಮಕ್ಕಳ ಕೊಡುಗೆಯೂ ಹಿರಿದಾಗಿದೆ. ಅಕ್ಕ, ನೀಲಾಂಬಿಕೆ, ಮುಕ್ತಾಯಕ್ಕ, ಗಂಗಾಂಬಿಕೆ, ಲಿಂಗಮ್ಮ - ಈ ಮುಂತಾದ ಸಶಕ್ತ ಮಹಿಳೆಯರು ಆ ಚಳುವಳಿಯ ಅವಿಭಾಜ್ಯ ಅಂಗವಾಗಿದ್ದಾರೆ. ಎಷ್ಟೋ ವೇಳೆ ಪುರುಷರನ್ನು ಅವರ ಸಂಧಿಗ್ಧ ಸಮಯಗಳಲ್ಲಿ ಕೈ ಹಿಡಿದು ನಡೆಸಿದವರಾಗಿದ್ದಾರೆ. ಹೆಣ್ಣು ಮಾಯೆಯೆಂಬ ಮೌಲ್ಯ ನಿರಾಕೃತಗೊಂಡು ''ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬ ನಿಲುವು ಅಭಿವ್ಯಕ್ತಗೊಂಡ ಕಾಲವಿದು.

ಇಂತಹ ಇತಿಹಾಸವನ್ನು ಧಾರ್ಮಿಕ ಮತ್ತು ರಾಜಕೀಯದ ಎರಡು ನೇರ ಹಾಗೂ ಪ್ರಮುಖ ನೋಟಗಳನ್ನು ಇಟ್ಟುಕೊಂಡು 'ಕ್ರಾಂತಿ ಕಲ್ಯಾಣ' ಕಾದಂಬರಿಮಾಲೆ ಆ ಯುಗದ ಸಂಶ್ಲಿಷ್ಟ ಚಿತ್ರಣವನ್ನು ಕೊಡುತ್ತದೆ. ಹಾಗಾಗಿ ಈಗಾಗಲೇ ಸ್ಪಷ್ಟರೂಪು ಹೊಂದಿರುವ ಧಾರ್ಮಿಕಲೋಕದ ಐತಿಹಾಸಿಕ ಸ್ತ್ರೀ ಪಾತ್ರಗಳು ಮಾತ್ರವಲ್ಲದೆ, ರಾಜಕೀಯ ಲೋಕದ ಐತಿಹ್ಯ ಇಲ್ಲವೆ ಕಾಲ್ಪನಿಕ

ಪಾತ್ರಗಳು ಇಲ್ಲಿ ಸೃಷ್ಟಿಗೊಂಡಿವೆ. ಇಲ್ಲಿಯ ಪಾತ್ರಗಳು ಕೇವಲ ದೇವಿ ಇಲ್ಲವೇ ದೇವತೆಯೆಂಬ ಹೆಚ್ಚುಗಾರಿಕೆಗಾಗಲಿ, ಪತನದ ಹಾದಿಗೆ ಸಂಕೇತವಾದ ಬೇರಾವುದೇ ಕೀಳುತನಕ್ಕಾಗಲಿ 'ಇದು ಹೀಗೇ' ಎಂಬಂತೆ ನಿರ್ಮಿತವಾಗಿಲ್ಲ. ಬದಲಿಗೆ ಎಲ್ಲವನ್ನೂ ಮೀರಿದಂತಹ ಬದುಕಿನ ಸಂಘರ್ಷಗಳಲ್ಲಿ ತೊಡಗಿಕೊಂಡು ಹೊಸ ಬಗೆಯ ಸ್ತ್ರೀಯಾತ್ಮಕ ಆಯಾಮವನ್ನು ತಮ್ಮ ತಮ್ಮ ನೆಲೆಗಳಲ್ಲಿ ಪಡೆದುಕೊಳ್ಳುತ್ತವೆ.

ಆರು ಭಾಗಗಳನ್ನೊಳಗೊಂಡ ಕಾದಂಬರಿ ಮಾಲೆಯ ಪ್ರಥಮ ಭಾಗ 'ಉದಯರವಿ' ಬಸವಣ್ಣನ ಬಾಳಿನ ಪ್ರಮುಖ ಘಟ್ಟಗಳಲ್ಲಿ ನಿರ್ಣಾಯಕ ಪಾತ್ರವಹಿಸುವ, ಆ ಮೂಲಕ ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ವಿಷಯಗಳನ್ನು ನಿಯಂತ್ರಿಸುವ ಗಂಗಾಂಬಿಕೆ, ನೀಲಾಂಬಿಕೆ, ಲಾವಣ್ಯವತಿಯರ ಮೂಲಕವೇ ಆರಂಭವಾಗುತ್ತದೆ. 'ಮೂವರು ತರುಣಿಯರು' ಶೀರ್ಷಿಕೆಯ ಮೊದಲನೆಯ ಅಧ್ಯಾಯ ಆ ಶತಮಾನದ ಇತಿಹಾಸದಲ್ಲಿ ಸ್ತ್ರೀಯರು ವಹಿಸಬಹುದಾದ ಪಾತ್ರವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಗಂಗಾಂಬಿಕೆಯೊಡನೆ ನಡೆದ ಬಸವಣ್ಣನ ವಿವಾಹ ಆತನನ್ನು ಕಲ್ಯಾಣಕ್ಕೆ ಕರೆತಂದು ರಾಜಕೀಯಕ್ಕೆ ಪ್ರವೇಶಿಸುವಂತೆ ಮಾಡಿದರೆ, ನೀಲಲೋಚನೆಯ ಜೊತೆಗಿನ ವಿವಾಹ ಬಸವಣ್ಣ-ಬಿಜ್ಜಳರ ಸಲಿಗೆಯ ಸ್ನೇಹಕ್ಕೆ ಸಂಬಂಧದ ಬೆಸುಗೆ ಹಾಕುತ್ತದೆ. ಲಾವಣ್ಯವತಿ-ಶೀಲವಂತರ ಪ್ರೇಮ, ವಿವಾಹಗಳು ಬಸವಣ್ಣನ ಕಲ್ಯಾಣ ನಿರ್ಗಮನಕ್ಕೆ ಕಾರಣವಾಗುತ್ತದೆ. ಅದು ಐತಿಹಾಸಿಕ ದುರಂತ ನಿರ್ಮಾಣದ ಸಂಘರ್ಷದ ಪ್ರಮುಖ ಘಟ್ಟ.

ಹಾಗೆ ನೋಡಿದರೆ ಅಂದಿನ ಕಾಲದ ರಾಜಾಂತಃಪುರದ ಕಾಮಮಯ, ಹಿಡಿತವಿಲ್ಲದ ಜೀವನಶೈಲಿಗೆ ಪರ್ಯಾಯವಾಗಿ ಶರಣ ಸಂಸ್ಕೃತಿ ಮೂಡಿದ ಬಗೆಯನ್ನು ಕಾದಂಬರಿ ಮಾಲೆ ನೇರವಾಗಿಯೇ ಚಿತ್ರಿಸುತ್ತದೆ. ರಾಜಾಂತಃಪುರದ ಕಲುಷಿತ, ಸ್ವೇಚ್ಛಾಚಾರ ಜೀವನದಲ್ಲಿಯೇ ಒಡ ಮೂಡಿದ ಶಕ್ತ ಪಾತ್ರಗಳು ಹಲವು ಕಾಣಿಸಿಕೊಳ್ಳುತ್ತವೆ. ಕಾಮೇಶ್ವರಿ, ಕುಸುಮಾವಳಿ, ಪ್ರೇಮಾವಳಿ, ಉಷಾ - ಮುಂತಾದುವನ್ನು ಇಲ್ಲಿ ಹೆಸರಿಸಬಹುದು. ಈ ಪಾತ್ರಗಳು ತಾವು ನಡೆವ, ತಮ್ಮದೇ ಸಾಧನಗಳುಳ್ಳ ಹಾದಿಯಲ್ಲಿ ಪ್ರಾಮಾಣಿಕವಾಗಿ ನಡೆದು ತಮ್ಮ ನಂಬಿಕೆಯ ಮೇಲೆ ತಮ್ಮ ಗುರಿ ಸಾಧಿಸಿಕೊಳ್ಳುತ್ತವೆ. ಕೆಲವು ಪಾತ್ರಗಳು ಪ್ರೇಮ, ಪಾತಿವ್ರತ್ಯ, ಆರಾಧನೆ, ಧನ್ಯತೆಗಳತ್ತ ವಾಲಿದರೆ ಕಾಮೇಶ್ವರಿಯಂಥ ಪಾತ್ರ ತನ್ನ ಸತ್ಯಕ್ಕೆ ಮಾತ್ರ ತಾನು ತೆರೆದುಕೊಳ್ಳುತ್ತಾ ಬೇರೆಯದೇ ರೀತಿಯಲ್ಲಿ ಬೆಳವಣಿಗೆ ಹೊಂದುತ್ತದೆ. ಕಾಮೇಶ್ವರಿಯನ್ನು ಒಳಗೊಂಡಂತೆ ಈ ಪಾತ್ರಗಳು ದುರಂತದ ವ್ಯಾಖ್ಯಾನಗಳಾದರೂ ಆ ಪಾತ್ರಗಳ ಸತ್ತ್ವವನ್ನು ಮರೆಯುವಂತಿಲ್ಲ. ಪ್ರವಾಹಕ್ಕೆ ವಿರುದ್ಧವಾಗಿ ಈಜಲು ಹೋಗುವ ಆ ಪಾತ್ರಗಳ ಗಟ್ಟಿತನವನ್ನು ಪ್ರಶ್ನಿಸಲು ಸಾಧ್ಯವಾಗುವುದಿಲ್ಲ. ಎಷ್ಟೋ ವೇಳೆ ಧಾರ್ಮಿಕ ಲೋಕದ ಪಾತ್ರಗಳಿಗಿಂತ, ರಾಜಕೀಯ ಲೋಕದ ಸ್ತ್ರೀ ಪಾತ್ರಗಳು ಯಾವುದೇ ಒಂದು ಚೌಕಟ್ಟಿಗೆ ಒಳಪಡದೆ ಬಿಡು ಬೀಸಾಗಿ ಬೆಳೆಯುತ್ತಾ ಹೋಗುತ್ತದೆ. ಈ ಲೋಕದ ಸ್ತ್ರೀಯರು ಆ ಸಮಾಜದ ಪುರುಷ ಪ್ರಧಾನ ಮೌಲ್ಯಗಳ ತುಳಿತಕ್ಕೆ ಒಳಗಾದ ಸ್ಪಷ್ಟ ಉದಾಹರಣೆಗಳಾಗಿದ್ದಾರೆ. ಆ ಮೌಲ್ಯಗಳು ಎಷ್ಟರ

ಮಟ್ಟಿಗೆ ತಳವೂರಿವೆಯೆಂದರೆ ಇಪ್ಪತ್ತನೆಯ ಶತಮಾನದಲ್ಲಿ ನಿಂತು ಕೃತಿ ರಚಿಸುತ್ತಿರುವ ಪುಟ್ಟಸ್ವಾಮಯ್ಯನವರೂ ಸಹ ಕಾಮೇಶ್ವರಿಯಂತಹ ಗಟ್ಟಿ ಪಾತ್ರದ ಅಂತ್ಯವನ್ನು ಬಿಜ್ಜಳನ ಕೈಯಿಂದ ಅತ್ಯಾಚಾರಕ್ಕೆ ಒಳಗಾದ ಸಂದರ್ಭದಲ್ಲಿ, ಅದೂ ಒಂದು ಕಾರಣ ಎಂಬಂತೆ ಅವಳ ಆತ್ಮಹತ್ಯೆಯಲ್ಲಿ ಮೂಡಿಸುವಷ್ಟು! ಆದರೆ ಅಂತಹ ಪಾತ್ರಗಳೇ ಅದೇ ಸಮಾಜವನ್ನು ಪ್ರಶ್ನಿಸುವ, ಪ್ರತಿಭಟಿಸುವ ಸ್ಪಷ್ಟ ಸವಾಲುಗಳೂ ಸಹ ಆಗಿದ್ದಾರೆ. ಸವಾಲು, ಸಂಘರ್ಷ, ತಲ್ಲಣಗಳ ನಡುವೆಯೂ ಆ ಪಾತ್ರಗಳ ಜೀವನಮುಖಿ ನೆಲೆ ಅದ್ಭುತವಾದ ಗುಣವಾಗಿದೆ. ತಮ್ಮ ಬದುಕಿನ ಕೊನೆಯ ಕ್ಷಣದ ತನಕವೂ ಅವು ಜೀವವಿರೋಧಿ ನೆಲೆಯತ್ತ ನೋಡುವುದಿಲ್ಲ. ಬದುಕಿಗಾಗಿ, ಬದುಕಲಿಕ್ಕಾಗಿ ಹಲವು ಸಾಧ್ಯತೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತವೆ. ಮಾನವ ಸಹಜ ದೌರ್ಬಲ್ಯಗಳನ್ನು ಒಳಗೊಂಡೇ ಮಾನವೀಯ ಮೌಲ್ಯಗಳ ಕಡೆಗೆ ದಾಂಗುಡಿ ಇಡುತ್ತವೆ. ಹಾಗಾಗಿಯೇ ಧಾರ್ಮಿಕ ಲೋಕದ ಪಾತ್ರಗಳು ಆದರ್ಶದತ್ತ ತುಡಿದರೆ, ರಾಜಕೀಯ ಲೋಕದ ಪಾತ್ರಗಳು ಜೀವಂತಿಕೆಯತ್ತ ತುಡಿಯುತ್ತವೆ. ಕಾಮೇಶ್ವರಿಯಂಥ ಪಾತ್ರವೇ ಅದಕ್ಕೆ ಸ್ಪಷ್ಟ ಉದಾಹರಣೆಯಾಗಿದೆ. ಯಾವುದನ್ನು ಕಾಮೇಶ್ವರಿಯಂಥ ಪಾತ್ರದ ದೌರ್ಬಲ್ಯ ಎಂದು ಕಾದಂಬರಿಯ ಆರಂಭ ಎತ್ತಿ ಹಿಡಿಯುತ್ತದೆಯೋ ಆ ದೌರ್ಬಲ್ಯಗಳಿಂದ ದೇಹ, ಮನಸ್ಸು, ಕಾಮಗಳ ಮೂಲಕವೇ ಆ ಪಾತ್ರ ಪ್ರಬುದ್ಧತೆಯನ್ನು ಸಾಧಿಸುತ್ತದೆ. ಸಮಾಜ ಯಾವ ಯಾವ ಮೌಲ್ಯಗಳ ಮೂಲಕ ಸ್ತ್ರೀಯನ್ನು ಅಳೆಯಲು ಇಚ್ಛಿಸುತ್ತದೆಯೋ ಆ ಮೌಲ್ಯಗಳ ಮೂಲಕವೇ ಆ ಪಾತ್ರ ಅದೇ ಸಮಾಜಕ್ಕೆ ತಿರುಗೇಟು ಹಾಕುತ್ತದೆ. ಇಂತಹ ಸಂದರ್ಭದಲ್ಲಿಯೂ ಆ ಪಾತ್ರ ಪತನಕ್ಕೆ ಸಂಕೇತವಾಗುವುದಿಲ್ಲ. ಇಡಿಯಾದ ಮಾನವೀಯತೆಗೆ ಅವಕಾಶ ಮಾಡಿಕೊಡುವ ಸತ್ತ್ವವನ್ನು ಪಡೆದುಕೊಳ್ಳುತ್ತದೆ. ಬಿಜ್ಜಳನಂತಹ ಗಂಡನ್ನೇ ನಿಯಂತ್ರಿಸುವಂತಹ ಕಾಮೇಶ್ವರಿಯ ಪಾತ್ರ ರಾಜಕೀಯ ಕ್ರಾಂತಿಯ ಹಿನ್ನೆಲೆಯಲ್ಲಿ ಹಲವು ಆಯಾಮಗಳನ್ನು ಪಡೆದುಕೊಳ್ಳುತ್ತಾ ಹೋಗಿ ಕಾದಂಬರಿ ಮಾಲೆಯಿಡೀ ಎಲ್ಲವನ್ನೂ, ಎಲ್ಲರನ್ನೂ ಮೀರಿ ಆಕ್ರಮಿಸಿ ಬಿಡುವುದನ್ನು ಮೊದಲ ನೋಟಕ್ಕೆ ಗುರುತಿಸಬಹುದು.

ಕಾಮೇಶ್ವರಿ ಅಸಾಧಾರಣ ರೂಪವಂತಿಕೆ, ಅದರಿಂದ ಏನನ್ನಾದರೂ ಸಾಧಿಸಬಲ್ಲೆನೆಂಬ ಅಹಂಕಾರ, ವಿಲಾಸ - ವಿಭ್ರಮ ಮತ್ತು ಬಿಜ್ಜಳನಂತಹ ವ್ಯಕ್ತಿಗೂ ಎದಿರೇಟು ಹಾಕುವಂತಹ ರಾಜಕೀಯ ಕೌಶಲ್ಯಗಳಲ್ಲಿ ನಿಜವಾಗುವವಳು. ಕಾದಂಬರಿಯಲ್ಲಿ ಅವಳ ಪಾತ್ರದ ಅಭಿವ್ಯಕ್ತಿ ಈ ನೆಲೆಯಲ್ಲಿ ನಡೆದರೆ, ಅವಳ ಪಾತ್ರದ ಈ ಪರಿಕರಗಳೇ ಸಮಾಜದಲ್ಲಿ ಅವಳನ್ನು ಬೇರೆಯದೆ ನೆಲೆಯಲ್ಲಿ ಅಭಿವ್ಯಕ್ತಿಸುತ್ತವೆ. ಹಾಗಾಗಿಯೇ ಕಾಮೇಶ್ವರಿಯ ಪಾತ್ರ ಪುರುಷ ಪ್ರಧಾನ ಸಮಾಜದ ಎಲ್ಲ ಒಳಿತು - ಕೆಡುಕುಗಳನ್ನು ಒಳಗೊಂಡ ಒಂದು ಸಂಕೀರ್ಣ ಅಭಿವ್ಯಕ್ತಿಯಾಗಿದೆ. ಕಾಮೇಶ್ವರಿಯ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ತನ್ನ ಸಂದರ್ಭದ ರಾಜಾಂತಃಪುರದ ಆಗು - ಹೋಗುಗಳ ವಿರುದ್ಧ ಆರಂಭಗೊಂಡು, ಬಿಜ್ಜಳನ ಸರ್ವಾಧಿಕಾರವನ್ನು ಪ್ರಶ್ನಿಸಿ, ಅದರ ವಿರುದ್ಧದ ಕಾರ್ಯಾಚರಣೆಯನ್ನು ಆರಂಭಿಸಿ, ತೊಡಗಿಕೊಳ್ಳುವಷ್ಟು ವ್ಯಾಪಕಗೊಳ್ಳುತ್ತದೆ. ವ್ಯವಸ್ಥೆಯ ವಿರುದ್ಧದ ಬಸವಣ್ಣನ ಹೋರಾಟ ಧಾರ್ಮಿಕ ನೆಲೆಗಟ್ಟಿನಲ್ಲಿ ಸಾಮಾಜಿಕ ಮತ್ತು

ಸಾಮೂಹಿಕ ರೂಪದಲ್ಲಿದ್ದರೆ, ಅದೇ ಕಾಲದಲ್ಲಿ ಚಿತ್ರಿಕಗೊಳ್ಳುತ್ತಿರುವ ರಾಜಕೀಯ ಕ್ರಾಂತಿಯಲ್ಲಿ ಕಾಮೇಶ್ವರಿಯ ಪ್ರತಿಭಟನೆ ತನ್ನ ವಂಶಕ್ಕೆ ರಾಜ್ಯಾಧಿಕಾರವನ್ನು ಉಳಿಸಿಕೊಳ್ಳುವ ವೈಯಕ್ತಿಕ ತುರ್ತಿನ ಹಿನ್ನೆಲೆಯನ್ನು ಹೊಂದಿದೆ. ಅದೂ ಸಹ ವ್ಯವಸ್ಥಿತ ರೂಪವನ್ನೇ ತಳೆದಿದೆ. ಆ ವ್ಯವಸ್ಥೆಯಲ್ಲಿ 'ಕಾಮ' ಕೇಂದ್ರವಾಗಿದೆ. ಮುಖ್ಯ ಪರಿಕರವಾಗಿ ಬಳಕೆಗೊಂಡಿದೆ. ಕಾಮೇಶ್ವರಿಯ ಪ್ರತಿಭಟನೆ ಅವಳ ಸಾವಿನ ಅನಂತರವೂ ಬಿಜ್ಜಳನ ರಾಜ್ಯಾಪಹಾರವನ್ನು, ಕುತಂತ್ರವನ್ನು ಪ್ರಶ್ನಿಸುವ, ಪ್ರತಿಭಟಿಸುವ, ಬಿಜ್ಜಳನನ್ನು ಭಯಕ್ಕೆ ಒಳಪಡಿಸಿ ಅವನನ್ನು ಬಲಿ ತೆಗೆದು ಕೊಳ್ಳುವಷ್ಟು ಸತ್ತ್ವಯುತವಾದುದಾಗಿದೆ. ಕಾಮೇಶ್ವರಿ ನಡೆದು ಬರುವ ದಾರಿ ಹೂವಿನ ಹಾಸಿಗೆಯಲ್ಲ. ಮುಳ್ಳುಗಳಿಂದಲೇ ಆವೃತವಾದುದು. ಜೊತೆಗೆ ಸುತ್ತಲೂ ಚುಚ್ಚುವ ನೋಟ ಗಳಿವೆ. ತೈಲಪನಂತಹ ವಿಲಾಸಿ ಹಾಗೂ ನಿಷ್ಕ್ರಿಯ ವ್ಯಕ್ತಿಯ ಪತ್ನಿಯಾಗಿ ಕ್ರಿಯಾ ಶೀಲಳಾಗುವ ಆಕೆ ಚಾಲುಕ್ಯ ಸಿಂಹಾಸನ ವಿವಾದಿತ ಪ್ರಶ್ನೆಯಾಗಬಾರದೆಂದೇ ಪತಿ-ಪುತ್ರರನ್ನು ಕಳೆದುಕೊಂಡರೂ ನಿಯೋಗದ ಮೂಲಕ ಸಿಂಹಾಸನಕ್ಕೆ ಪ್ರೇಮಾರ್ಣವನನ್ನು ಉತ್ತರಾಧಿಕಾರಿ ಯಾಗಿ ಸೃಷ್ಟಿಸುತ್ತಾಳೆ. ಬಿಜ್ಜಳನಂತಹ ವ್ಯಕ್ತಿಯ ರಾಜಕೀಯ ಕೌಶಲ, ಚಾಣಾಕ್ಷತೆ, ಕ್ರೂರತೆಗೆ ವಿರುದ್ಧವಾಗಿ ತನ್ನ ರೂಪು, ಲಾವಣ್ಯ, ರಾಜಕಾರಣ ಕೌಶಲ್ಯಗಳನ್ನು ಇಟ್ಟುಕೊಂಡು ರಾಜಕೀಯ ಹೋರಾಟ ನಡೆಸುತ್ತಾಳೆ. 'ಹೆಣ್ತನ' ಕಾಮೇಶ್ವರಿಯಲ್ಲಿ ದೌರ್ಬಲ್ಯವಾಗುವುದಿಲ್ಲ. ಬದಲಿಗೆ ಅವಳ ಹೋರಾಟಕ್ಕೆ ಶಕ್ತಿ ತುಂಬುವ ಬೆಂಬಲದ ಬಲವಾಗುತ್ತದೆ. ಹಾಗಾಗಿಯೇ ಕಾಮೇಶ್ವರಿಯ ಎದಿರು ನಿಂತ ಬಿಜ್ಜಳ, ತಾನು ಚಾಲುಕ್ಯ ಸಿಂಹಾಸನದ ಮಾಂಡಲಿಕನೆಂದು ನಿಷ್ಠೆಯಿಂದ ನಜರು ಒಪ್ಪಿಸುತ್ತಾನೆಯೇ ವಿನಃ ತನ್ನ ಸರ್ವಾಧಿಕಾರ ಅಥವಾ ರಾಜ್ಯಾಪಹಾರಗಳ ನೇರ ಪ್ರತಿಪಾದನೆ ಮಾಡಲಾರದವನಾಗಿಯೇ ಉಳಿಯುತ್ತಾನೆ. ಹಾಗಾಗಿ ಬಳಸು ಹಾದಿ ಹಿಡಿದು ಆ 'ಹೆಣ್ತನ'ದ ಮೇಲೆ ಅತ್ಯಾಚಾರ ಎಸಗುವುದರ ಮೂಲಕ ತನ್ನ ರಾಜ್ಯ ಕಟ್ಟುವ ಕನಸು ಕಾಣುತ್ತಾನೆ. ಬಿಜ್ಜಳ-ಕಾಮೇಶ್ವರಿಯರ ನಡುವಿನಲ್ಲಿ ಘಟಿಸಿದ ಈ ಘಟನೆಯ ರಾಜಕೀಯ ಕ್ರಾಂತಿಗೆ ನಿರ್ಣಾಯಕ ಮೂಲದ್ರವ್ಯವಾಗಿದೆ. ಅವಳ ಆತ್ಮ ಹತ್ಯೆ ಕೂಡ ಅಷ್ಟೇ ನಿರ್ಣಾಯಕ ಪಾತ್ರವಹಿಸುತ್ತದೆ.

ಸೌಂದರ್ಯ, ಸ್ವಾನುರಕ್ತಿ, ಅಧಿಕಾರ ಸ್ಥಾಪನೆ, ರಾಜಕೀಯ ಪ್ರಜ್ಞೆ, ಪ್ರೀತಿ, ಅನುಕಂಪ, ತಾಯ್ತನ - ಈ ಮುಂತಾದ ಅಂಶಗಳು ಕಾಮೇಶ್ವರಿಯ ಪಾತ್ರದ ಒಂದು ಮುಖವಾದರೆ, ಸ್ವಾತಂತ್ರ್ಯ, ಸ್ವೇಚ್ಛಾಚಾರ, ಕಾಮ, ಅಧಿಕಾರ ಸ್ಥಾಪನೆ, ತನ್ನ ರೂಪವಂತಿಕೆಯನ್ನು ತನ್ನ ಕಾರ್ಯಸಾಧನೆಗೆ ಪೂರಕವಾಗಿ ಬಳಸಿಕೊಳ್ಳುವ, ಗಂಡಸರನ್ನು ಅದರ ಮೂಲಕ ತನಗೆ ಬೇಕಾದಂತೆ ಆಡಿಸಿ ಖುಷಿ ಪಡುವ ಗುಣ - ಇವು ಅದೇ ಪಾತ್ರದ ಮತ್ತೊಂದು ಮುಖದ ಪರಿಕರಗಳಾಗಿವೆ. ಗಂಡನ ಕಣ್ಣಿನಲ್ಲಿ ಗಣಿಕೆಯಾಗಿ ಕಾಣುವ, ಬಿಜ್ಜಳನ ಕಣ್ಣಲ್ಲಿ ಮಾಟಗಾತಿಯಾಗಿ ತೋರುವ ಸಾಮಾನ್ಯರ ನೋಟಕ್ಕೆ ಸ್ವಚ್ಛಂದಗಾರ್ತಿ, ಕಾಮುಕ ಹೆಣ್ಣಾಗಿ, ಹಲವು ಅನೀತಿಯುತ ಸಂಬಂಧ ಗಳಲ್ಲಿ ತೊಡಗಿಸಿಕೊಂಡವಳಂತೆ ಕಂಡು ಬರುವ ಕಾಮೇಶ್ವರಿಯ ಪಾತ್ರ ಅತ್ಯಂತ ಸಂಕೀರ್ಣ ವಾದುದು. ಸ್ವಚ್ಛಂದಗಾರ್ತಿಯಂತೆ ಆರಂಭವಾಗುವ ಪಾತ್ರ ಜೀವನದ ಸಂಘರ್ಷ, ಸಂಕ್ರಮಣ

ಗಳಲ್ಲಿ ವಿಕಾಸ ಹೊಂದುತ್ತಾ ಬೆಳವಣಿಗೆ ಪಡೆದು, ಪ್ರಬುದ್ಧ ಪರಿಪಕ್ವವಾಗಿ ಬೆಳೆದು ವಿಷಾದದಲ್ಲಿ ಅಂತ್ಯಗೊಳ್ಳುತ್ತದೆ. ಪುಟ್ಟಸ್ವಾಮಯ್ಯನವರ ಈ ಪಾತ್ರ ಸೃಷ್ಟಿ ಪಾರಂಪರಿಕ ಮೌಲ್ಯಗಳನ್ನು ಮೀರಿ ಸ್ತ್ರೀಯ, ಸ್ತ್ರೀಯಾತ್ಮಕತೆಗೆ ಒಂದು ಹೊಸ ಆಯಾಮವನ್ನು ಸೃಷ್ಟಿಸುವಂತಹ ಪಾತ್ರವಾಗಿ ರೂಪುಗೊಂಡಿದೆ.

ಅಲ್ಲಮ-ಬಸವಣ್ಣನಂಥ ವ್ಯಕ್ತಿಗಳಿಗೆ ಸಾಧನೆಯ ಹಾದಿ ತೋರುವ, ಹಲವು ಬದುಕುಗಳ ತಿರುವು ನಿರ್ಧರಿಸುವ, ಕ್ರಾಂತಿಗೆ ಕಾರಣವಾಗುವ-ಬಹುತೇಕ ಸಂದರ್ಭಗಳಲ್ಲೆಲ್ಲಾ ಸ್ತ್ರೀಯರ ಪ್ರಾಮುಖ್ಯತೆ ಕಾದಂಬರಿ ಮಾಲೆಯಲ್ಲಿ ವಿವರವಾಗಿ ಚಿತ್ರಣಗೊಳ್ಳುತ್ತದೆ. ಆಧ್ಯಾತ್ಮ, ಧಾರ್ಮಿಕ, ಕೌಟುಂಬಿಕ ನೆಲೆಯಲ್ಲಿ ರೂಪು ತಳೆಯುವ ಸ್ತ್ರೀಯರ ಬಗೆಗೆ ಇರುವಷ್ಟೇ ಗೌರವ, ಎಚ್ಚರಿಕೆ ಗಳನ್ನು, ಆ ಕಾಲದ ರಾಜಾಂತಃಪುರದ ರಾಜಮಹಿಳೆಯರು, ಗಣಿಕೆಯರು, ದಾಸಿಯರು - ಈ ಮುಂತಾದವರ ನಿರ್ಮಿತಿಯಲ್ಲಿಯೂ ಗಮನಿಸಬಹುದು. ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ - ನೆಲೆಗಳು ಯಾವುದಾದರೂ ಇರಲಿ, ಆಯಾ ನೆಲೆಯಲ್ಲಿಯೇ ಸ್ತ್ರೀಯ ಘನತೆಯನ್ನು ಎತ್ತಿ ಹಿಡಿಯುವ ಪ್ರಯತ್ನದಲ್ಲಿ ಏಕಪ್ರಕಾರವಾಗಿ ಕಂಡು ಬರುತ್ತದೆ. ಇಲ್ಲಿನ ಸ್ತ್ರೀ ಪಾತ್ರಗಳು ಪರಂಪರೆ, ಸಂಪ್ರದಾಯದ ಪರಿಕರಗಳನ್ನು ಹೊಂದಿದ ಅಚ್ಚು ಪಾತ್ರಗಳಲ್ಲ, ಬದಲಿಗೆ ಅವುಗಳನ್ನು ಮೀರಿ ನಿಂತ ಪಾತ್ರಗಳಾಗಿವೆ. ಕಾದಂಬರಿಯ ಕ್ರಿಯೆಗಳಲ್ಲಿ, ಕ್ರಿಯಾ ತಿರುವುಗಳಲ್ಲಿ, ಕ್ರಿಯಾಶಿಖರಗಳಲ್ಲಿ ಪ್ರಮುಖ ಪಾತ್ರವಹಿಸುವ ಪಾತ್ರಗಳಾಗಿವೆ. ಪ್ರತಿಯೊಂದು ಸ್ತ್ರೀ ಪಾತ್ರ ಗಳಲ್ಲಿಯೂ ಪುಟ್ಟಸ್ವಾಮಯ್ಯನವರ ತನ್ಮಯತೆ, ಶ್ರದ್ಧೆಗಳನ್ನು ಗುರುತಿಸಲು ಅವಕಾಶ ಇದೆ. ಸ್ತ್ರೀಯ ವ್ಯಕ್ತಿತ್ವ ವಿಕಾಸಗೊಳ್ಳುವ ಎಲ್ಲ ಬಗೆಯ ಸಾಧ್ಯತೆಗಳು ಹೊಸ ನೆಲೆಯಲ್ಲಿ ಇಲ್ಲಿ ತೆರೆದುಕೊಂಡಿವೆ.

ಕಾದಂಬರಿ ಮಾಲೆಯಲ್ಲಿ ಒಂದು ಕಡೆ ಹೆಣ್ಣು ಪೂರಕವಾದ ನೆಲೆಯಾಗಿ ಸೃಷ್ಟಿಗೊಳ್ಳುತ್ತಾ ಹೋದರೆ, ಮತ್ತೊಂದು ಕಡೆ ವ್ಯವಸ್ಥೆಯ ರೀತಿ-ನೀತಿಗಳು ಅವಳನ್ನು 'ಮಾರಕ' ನೆಲೆಯಲ್ಲಿ ಸ್ಥಾಪಿಸುತ್ತವೆ. ಆ ಸಮಾಜದ ಒಂದು ಭಾಗವನ್ನು ಧರ್ಮ ಆವರಿಸಿದ್ದರೆ ಮತ್ತೊಂದು ಭಾಗವನ್ನು 'ಕಾಮ' ಆವರಿಸಿದೆ. ಎರಡೂ ಭಾಗಗಳಲ್ಲಿ ಬಹುತೇಕ ನಿಯಂತ್ರಕ ಶಕ್ತಿ 'ಹೆಣ್ಣೇ' ಆಗಿದ್ದಾಳೆ. ಯೌವನದಲ್ಲಿ ಮದುವೆಯಾಗದೆ ಸನ್ಯಾಸಿನಿಯಾಗುತ್ತೇನೆಂದು ನುಡಿವ ಹುಡುಗಿ ಸಮಾಜದ ಕೊಂಕುಗಳಿಗೆ ಕಿವಿಗೊಡದೆ ಅನಾಥ ಬಾಲಕನನ್ನು ಸಲಹಿ, ಹಾಲೂಡಿಸಿದ ತಾಯಿಯಾಗಿ ಬಸವಣ್ಣನನ್ನು ರೂಪಿಸುವ ನಾಗಲಾಂಬಿಕೆಯಿಂದ ಹಿಡಿದು ಗಂಗಾಂಬಿಕೆ, ನೀಲಾಂಬಿಕೆ, ಲಾವಣ್ಯವತಿ, ಗಂಗಮ್ಮ-ಹೀಗೆ ಪಾತ್ರಗಳ ಸಂಖ್ಯೆ ಬೆಳೆಯುತ್ತಲೇ ಹೋಗುತ್ತದೆ. ರಾಜಕೀಯ ಲೋಕದ ಸ್ತ್ರೀ ಪಾತ್ರಗಳಿಗಂತೂ ಅನಂತ ಅವಕಾಶಗಳಿವೆ. ಈ ಲೋಕದ ಹೆಣ್ಣುಗಳ ಬದುಕು ಸಂಘರ್ಷಮಯವಾದುದು. ಅಂದಿನ ರಾಜಾಂತಃಪುರ, ಗಣಿಕಾ ಜೀವನ ವ್ಯವಸ್ಥೆಯ ಎಲ್ಲ ಬಗೆಯ ನೋವು-ನಲಿವುಗಳಲ್ಲಿ ಸಿಲುಕಿ ನಲುಗಿದವರು. ಆದರೂ ಜೀವನದ ಸಂಕೀರ್ಣತೆಯಲ್ಲಿ ಭೋರ್ಗರೆಯುವ ಪ್ರವಾಹದ ಎದಿರು ಈಜುವ ಎದೆಗಾರಿಕೆಯವರು. ಹಾಗಾಗಿಯೇ ಕಾಮೇಶ್ವರಿ, ಕುಸುಮಾವಳಿ, ಉಷಾಳಂತಹ ಪಾತ್ರಗಳು ಇಲ್ಲಿ ರೂಪು ತಾಳುತ್ತವೆ. ಕಾಮೇಶ್ವರಿ,

ಪ್ರೇಮಾವತಿ, ಕುಸುಮಾವಳಿಯಂತಹ ಕಾಲ್ಪನಿಕ ಪಾತ್ರಗಳು ಪರಂಪರೆ, ಸಂಪ್ರದಾಯಗಳೊಂದಿಗೆ ಯಾವುದೇ ರಾಜಿ ಇಲ್ಲವೆ ಪೂರ್ವಗ್ರಹಗಳಿಗೆ ಒಳಗಾಗದೆ ಚಿತ್ರಣಗೊಳ್ಳುತ್ತವೆ.

ಆದರೆ ಪುಟ್ಟಸ್ವಾಮಯ್ಯ ಸಂಪ್ರದಾಯ, ಪರಂಪರೆಗಳನ್ನು ಮೀರಿದ ಅಕ್ಕಮಹಾದೇವಿ ಯಂತಹ ಇತಿಹಾಸದ ಪಾತ್ರವನ್ನು ಸಂಪ್ರದಾಯ, ಪರಂಪರೆಗಳ ಒಳಗೆ ತರುವ ಪ್ರತಿಗಾಮಿ ಪ್ರಯತ್ನವನ್ನು ಮಾಡಿ ಬಿಡುತ್ತಾರೆ. ಅಕ್ಕನ ಪಾತ್ರವನ್ನು ಸಂಸ್ಕೃತೀಕರಣಗೊಳಿಸಿ, ಸರಳೀಕರಣ ಗೊಳಿಸಿ ಬಿಡುತ್ತಾರೆ. ಅಕ್ಕ ದಿಗಂಬರೆಯಾಗಿ ಅನುಭವ ಮಂಟಪವನ್ನು ಪ್ರವೇಶ ಮಾಡು ವುದಿಲ್ಲ. ಬದಲಿಗೆ ನಾಗಲಾಂಬಿಕೆಯ ಮಾತಿನಂತೆ ಸೀರೆ ಉಟ್ಟು ಪ್ರವೇಶ ಮಾಡುತ್ತಾಳೆ. ರಾಜಕೀಯ ಲೋಕಕ್ಕೆ ಸಂಬಂಧಿಸಿದಂತೆ ಕಾಲ್ಪನಿಕ ಪಾತ್ರಗಳಿಗೆ ಕೊಟ್ಟಂಥ ಸ್ತ್ರೀಯಾತ್ಮಕ ಹೊಸ ಆಯಾಮವನ್ನು ಧಾರ್ಮಿಕ ಲೋಕದ ವ್ಯಕ್ತಿಗಳಿಗೆ ಪುಟ್ಟಸ್ವಾಮಯ್ಯನವರು ಕೊಡಲಾಗಿಲ್ಲ. ಹಾಗಾಗಿಯೇ ಇಲ್ಲಿಯೂ ಅವರ ದೃಷ್ಟಿಕೋನ ಅಖಂಡವಾಗದೆ ಹಾಗೇ ಉಳಿದಿದ್ದನ್ನು ಮರೆಯ ಲಾಗುವುದಿಲ್ಲ.

ಪುಟ್ಟಸ್ವಾಮಯ್ಯನವರ ಮತ್ತೊಂದು ಪ್ರಮುಖ ಐತಿಹಾಸಿಕ ಕಾದಂಬರಿಯಾದ 'ದ್ವಾಸುಪರ್ಣಾ'ದ ಬಕುಳಮಾಲಿಕೆ ಪುಟ್ಟಸ್ವಾಮಯ್ಯನವರು ಸೃಷ್ಟಿಸಿದ ಮತ್ತೊಂದು ಪ್ರಮುಖ ಪಾತ್ರ. ಬಲವಂತವಾಗಿ ಗಂಗರಾಜನ ಗಣಿಕೆಯಾಗಿ, ಗಣಿಕೆ:ಗೃಹಿಣಿ, ಅಂತಃಪುರದ ಅರಮನೆ: ಪ್ರೀತಿಯ ಮನೆ - ಇವೆರಡರ ನಡುವೆ ತೂಗುಯ್ಯಾಲೆಯಾಡುವ ಬಕುಳೆಯ ಪಾತ್ರ ದ್ವಂದ್ವ, ಡೋಲಾಯಮಾನಗಳಲ್ಲಿಯೇ ನಿರ್ಮಾಣವಾದಂತಹದ್ದು. ವೇದನೆಯ ಪರಂಪರೆಯಲ್ಲಿ ರೂಪುಗೊಳ್ಳುತ್ತಾ ಹೋಗುವ ಬಕುಳೆಯ ಪಾತ್ರ ಬದುಕಿನ ಏರುಪೇರುಗಳ ಮೂಲಕವೇ ಮಹತ್ತ್ವ ಪಡೆಯುತ್ತದೆ. ರಾಜಾಂತಃಪುರದ ವ್ಯವಸ್ಥೆಗಳು, ರಾಜನ ಕಾಮುಕತೆ-ಬಕುಳೆಯಂಥ ಸಾಮಾನ್ಯ ಸಾಮಂತನ ಮಗಳ ಬದುಕನ್ನು ಹೇಗೆ ಅತಂತ್ರಗೊಳಿಸುತ್ತವೆ ಎಂಬ ಚಿತ್ರಣ ಇಲ್ಲಿ ಸಿಗುತ್ತದೆ. ಅವುಗಳ ವಿರುದ್ಧ ಬಕುಳೆ ನಿಲ್ಲದಿದ್ದರೂ, ಪಶುಪತಿಯಂತಹ ವ್ಯಕ್ತಿ ಬಕುಳೆಗಾಗಿ ಕಾಯುವುದು ಆ ಹೆಣ್ಣಿನ ಬದುಕಿನ ಸಾಧ್ಯತೆಯ ಕಾರಣವಾಗಿ ಅರ್ಥಪೂರ್ಣವಾಗುತ್ತದೆ. ಇದೇ ಕಾದಂಬರಿಯ ಮಾನವತಿ ನಾಚಿಯಾರಳ ಪಾತ್ರ ಸಹ ಗಮನಾರ್ಹವಾದುದು.

ಐತಿಹಾಸಿಕ ಕಾದಂಬರಿಗಳಲ್ಲಿ ಉಳಿದವು ಸ್ತ್ರೀ ಕೇಂದ್ರಿತವಾಗಿದ್ದರೂ ಪುರುಷಾಧಿಕಾರದ ಚೌಕಟ್ಟು, ಸತ್ತ್ವಗಳಲ್ಲಿಯೇ ಅಭಿವ್ಯಕ್ತಗೊಂಡು ಸ್ತ್ರೀವಾದಿ ದೃಷ್ಟಿಕೋನದಿಂದ ನೋಡಿದಾಗ ಅವುಗಳ ಮಹತ್ತ್ವವನ್ನು ಸೀಮಿತಗೊಳಿಸಿವೆ.

ಪುಟ್ಟಸ್ವಾಮಯ್ಯನವರ ಸಾಮಾಜಿಕ ವಸ್ತುವನ್ನು ಒಳಗೊಂಡ, ನಗರ ಕೇಂದ್ರಿತ ಸಾಮಾಜಿಕ ಕಾದಂಬರಿಗಳ ಸಂದರ್ಭವನ್ನು ಗಮನಿಸುವಾಗ ಅಭಿಸಾರಿಕೆ, ಸುಧಾಮಯಿ, ಅರ್ಧಾಂಗಿ, ಹೂವು-ಕಾವು-ಇವುಗಳು ಸ್ತ್ರೀ ಕೇಂದ್ರಿತ ಕಾದಂಬರಿಗಳಾಗಿವೆ. ಆದರೆ ಅವು ಸ್ತ್ರೀಪರವಾಗಿವೆ ಯೆಂದು ಹೇಳಲು ಸಾಧ್ಯವಿಲ್ಲ. ಈ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಕಪ್ಪು-ಬಿಳಿಪಿನ, ಉನ್ನತಿ-ಪತನಗಳ ಭಾವನೆಗಳಲ್ಲಿ ಗೆರೆಕೊಯ್ದಂತೆ ಅತ್ಯಂತ ಸ್ಪಷ್ಟವಾಗಿ ಕಾಣಿಸಿ ಕೊಳ್ಳುತ್ತವೆ. ಪೆದ್ದನಾದ ಗಂಡನನ್ನು ಪಡೆದು ಅವನನ್ನು ಉದ್ಧಾರಗೊಳಿಸುವ ಪತಿವ್ರತೆಯ ಪ್ರತಿಮೆಯಾದ

ಮಲ್ಲಮ್ಮನಂಥ ಹೆಣ್ಣಿನ ಆರಾಧನಾಪೂರ್ವಕ ಪಾತ್ರಸೃಷ್ಟಿ ಒಂದೆಡೆಯಿದ್ದರೆ, ಪಡೆದುಕೊಂಡ ಶಿಕ್ಷಣ, ಆಧುನಿಕತೆಗಳು ವರವಾಗಿ ಬರದ, ಬಂದ ಸ್ವಾತಂತ್ರ್ಯ ಸ್ವಚ್ಛಂದತೆಯಾದ ಪರಿ, ಅದರಿಂದ ಬದುಕೇ ಪತನದ ಕಡೆ ನಡೆದ ರೀತಿಯನ್ನು ಅತ್ಯಂತ ಸರಳವಾಗಿ, ನೇರವಾಗಿ ಸೃಷ್ಟಿಸುವ-ಅಭಿಸಾರಿಕೆ, ಸುಧಾಮಯಿ, ಹೂವು-ಕಾವು ಕಾದಂಬರಿಗಳ ಲತಾಂಗಿ, ಪದ್ಮಾ, ಮೋಹನಾರಂತಹ ಪಾತ್ರಗಳು ಮತ್ತೊಂದೆಡೆ ಕಾಣಬರುತ್ತವೆ. ಪ್ರತಿಭೆ, ಅಹಮಿಕೆಗಳು ಹೆಣ್ಣಿನ ಸಂದರ್ಭದಲ್ಲಿ ಸ್ವಚ್ಛಂದತೆಯಾಗಿ ದುರಂತ ಪರಿಣಾಮವನ್ನು ಬೀರುವ ಏಕಮುಖ ಚಿತ್ರಣ ಇಲ್ಲಿನದು. ಆದರೆ ಆ ಚಿತ್ರಣ ಪರಿಪಕ್ವವಾದುದಲ್ಲ. ಹಸಿಹಸಿಯಾದುದಾಗಿದೆ. ಸಂಪ್ರದಾಯ, ಪರಂಪರೆಗಳೊಳಗೆ ಇರುವ ಮಲ್ಲಮ್ಮನಂತಹ ಹೆಣ್ಣನ್ನು ಆರಾಧನಾ ಪೂರ್ವಕವಾಗಿ ಚಿತ್ರಿಸುವ ಪುಟ್ಟಸ್ವಾಮಯ್ಯನವರು ಶಿಕ್ಷಣ, ಆಧುನಿಕತೆಗಳನ್ನು ಪಡೆದುಕೊಂಡ ಹೆಣ್ಣನ್ನು ಚಿತ್ರಿಸುವ ಪರಿ ಪೂರ್ವಗ್ರಹದಿಂದ ಕೂಡಿದ್ದಾಗಿದೆ. ಆ ದೃಷ್ಟಿ ಸಂಪೂರ್ಣವಾಗಿ ಹೆಣ್ಣಿನ ಪತನವನ್ನೇ ಅಂತ್ಯವಾಗಿಸಿದೆ.

ಹಾಗಾಗಿಯೇ ಪುಟ್ಟಸ್ವಾಮಯ್ಯನವರ ಸ್ತ್ರೀ ಪಾತ್ರ ಸೃಷ್ಟಿಯನ್ನು ಗಮನಿಸುವಾಗ ಅವರ ಬಹುತೇಕ ಕೃತಿಗಳು ಸ್ತ್ರೀ ಕೇಂದ್ರಿತವೇ ಆಗಿವೆ. ಆದರೆ ಅದು ಸ್ತ್ರೀ ಪರವೇ ಎಂಬುದನ್ನು ಪ್ರಶ್ನಾರ್ಹವಾಗಿಯೇ ನೋಡಬೇಕಾಗುತ್ತದೆ. ಕೆಲವು ಕಡೆ ಅದು ಸ್ತ್ರೀ ಪರವಾಗಿದ್ದರೆ, ಕೆಲವು ಕಡೆ ಸಂಪ್ರದಾಯ, ಪರಂಪರೆಗಳ ಒಳಗೇ ಪಾತ್ರಗಳು ನರಳಿರುವುದು, ಎಷ್ಟೋ ಸಂದರ್ಭಗಳಲ್ಲಿ ಪ್ರತಿಗಾಮಿ ಚಿತ್ರಣ ನಡೆದಿರುವುದು ಕಂಡು ಬರುತ್ತದೆ. ಕೆಲವು ಸಂದರ್ಭಗಳಲ್ಲಿ ಅದನ್ನು ಮೀರಿ ಹೊಸ ಬಗೆಯ ಸ್ತ್ರೀಯಾತ್ಮಕ ಆಯಾಮವನ್ನು ಕೊಡಲು ಪುಟ್ಟಸ್ವಾಮಯ್ಯ ಶಕ್ತರಿದ್ದಾರೆ. ಹಾಗಾಗಿ ಪುಟ್ಟಸ್ವಾಮಯ್ಯನವರ ಸ್ತ್ರೀವಾದಿ ದೃಷ್ಟಿಕೋನ ಸೈದ್ಧಾಂತಿಕ ಸ್ವರೂಪದಲ್ಲಿಲ್ಲ ಹಾಗೂ ಅವರ ಸ್ತ್ರೀಪರ ನಿಲುವುಗಳು ಸಂಪ್ರದಾಯದ ನಡುವೆಯೇ ಹುಟ್ಟಿರುವಂಥದ್ದು ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಾಗಿಯೇ ಈ ದೃಷ್ಟಿಕೋನದಿಂದ ಪುಟ್ಟಸ್ವಾಮಯ್ಯನವರ ಸಾಹಿತ್ಯ ವನ್ನು ಗಮನಿಸಿದಾಗ ಅದು ಪರಿಮಿತ ಯಶಸ್ಸನ್ನು ಮಾತ್ರ ಪಡೆದುಕೊಳ್ಳಲು ಸಾಧ್ಯವಾಗುತ್ತದೆ ಹೊರತು ಪೂರ್ಣ ಯಶಸ್ಸನ್ನಲ್ಲ.

●

# ಅನಾಥ ಪ್ರಜ್ಞೆಯ ಆತ್ಮಸಂಗಾತ

ಬರಗೂರು ರಾಮಚಂದ್ರಪ್ಪ

ಅಕ್ಕಮಹಾದೇವಿಯು ಶಿವನನ್ನೇ ಪತಿಯೆಂದು ಭಾವಿಸಿದ್ದು ಕೇವಲ ಭಕ್ತಿಯ ನೆಲೆಯಲ್ಲಿ ಅಲ್ಲ. ಅಕ್ಕನ ಬದುಕನ್ನು ಅರ್ಥಮಾಡಿಕೊಳ್ಳುತ್ತ ಹೋದಂತೆ ಆಕೆಯ ಭಾವನಾತ್ಮಕ ಹಾಗೂ ಬೌದ್ಧಿಕ ಪಲ್ಲಟಗಳು ಅಂದಿನ ಸಾಂಪ್ರದಾಯಿಕ ನೆಲೆಗಳಿಗೆ ಒಡ್ಡಿದ ಪರ್ಯಾಯಗಳಾಗಿವೆ ಎನ್ನಿಸುತ್ತದೆ. ಪತಿಯ ಕಲ್ಪನೆಯ ವಿಷಯದಲ್ಲೇ ಈ ಪರ್ಯಾಯದ ಹುಡುಕಾಟ ಸ್ಪಷ್ಟವಾಗಿದೆ. ನಮ್ಮ ಸಮಾಜದ ಸಾಂಪ್ರದಾಯಿಕ ನೆಲೆಗಳು ಪತಿಯನ್ನು ದೈವತ್ವಕ್ಕೇರಿಸಿವೆ. ಸತಿಯು ತನ್ನ ಪತಿಯನ್ನು ಪರಮದೈವವೆಂದು ಭಾವಿಸಿ ಭಯ ಭಕ್ತಿಯಿಂದ ನಡೆಮಕೊಳ್ಳಬೇಕಾಗುತ್ತದೆ. ಆದರೆ ಅಕ್ಕಮಹಾದೇವಿ ದೈವವನ್ನೇ ಪತಿಯಾಗಿಸಿಕೊಂಡದ್ದನ್ನು ಕಾಣಬಹುದು. ಪತಿಯನ್ನು ದೈವದ ನೆಲೆಗೆ ಕೊಂಡೊಯ್ಯುವ ಬದಲು 'ದೈವ'ವಾದ ಶಿವನನ್ನು ಪತಿಯ ನೆಲೆಗೆ ಕರೆತರುವ ಕಲ್ಪನೆಯಲ್ಲೇ ಒಂದು ವೈಚಾರಿಕ ಪಲ್ಲಟವಿದೆ. ಇಲ್ಲಿ ಪತಿಯ ಬಗ್ಗೆ ಭಯವಿಲ್ಲ; ಪರಮ ವಿಧೇಯತೆಯ ಭಕ್ತಿ ಪ್ರಧಾನವಾಗಿಲ್ಲ. ಭಕ್ತಿ ಮತ್ತು ಪ್ರೀತಿಗಳೊಂದಾದ ವಿಶಿಷ್ಟ ಭಾವನೆಗಳ ರೂಪಕ ಮನಸ್ಸನ್ನು ನಾವಿಲ್ಲಿ ಕಾಣಬಹುದಾಗಿದೆ.

ಅಕ್ಕಮಹಾದೇವಿಯ ವೈವಾಹಿಕ ಜೀವನ ಕುರಿತು ಎರಡು ರೀತಿಯ ಅಭಿಪ್ರಾಯಗಳಿವೆ. ಎಂ.ಆರ್.ಶ್ರೀಯವರಾದಿಯಾಗಿ ಕೆಲವು ವಿದ್ವಾಂಸರು ಕೌಶಿಕ ರಾಜನೊಂದಿಗೆ ವಿವಾಹ ವಾಗಿತ್ತೆಂದೂ ರಂ.ಶ್ರೀ. ಮುಗಳಿಯವರಾದಿಯಾಗಿ ಕೆಲವು ವಿದ್ವಾಂಸರು ಅಧಿಕೃತ ವಿವಾಹ ಆಗಿರಲಿಲ್ಲವೆಂದೂ ಅಭಿಪ್ರಾಯ ಪಡುತ್ತಾರೆ. ಆದರೆ ಈ ಎರಡು ವಿದ್ವತ್ ತಂಡಗಳೂ ಕೌಶಿಕ ರಾಜನ ಬಳಿ ಅಕ್ಕ ಇದ್ದದ್ದನ್ನು ಅಲ್ಲಗಳೆಯುವುದಿಲ್ಲ. ಕೌಶಿಕ ರಾಜನು ತನ್ನನ್ನು ವರಿಸಲು ಇಷ್ಟವಿಲ್ಲದ ಅಕ್ಕನನ್ನು ಬಲತ್ಕಾರದಿಂದ ಅಥವಾ ಒತ್ತಾಯದಿಂದ ಅರಮನೆಗೆ ಕರೆತಂದ ಉಲ್ಲೇಖಗಳೂ ಇವೆ. ಕೌಶಿಕನನ್ನು ನಿರಾಕರಿಸಿ, ತೊರೆದು ಹೊರಬಂದ, ಅಕ್ಕ ತನ್ನ ಪತಿಯನ್ನು ಕಂಡುಕೊಂಡದ್ದು ಶಿವನಲ್ಲಿ. ಕೌಶಿಕ ಒಬ್ಬ ರಾಜ ಎಂಬುದನ್ನು ಗಮನಿಸಿದಾಗ ಅಕ್ಕನ ಆಯ್ಕೆಗೆ ವಿಶಿಷ್ಟ, ಆಯಾಮ ಲಭ್ಯವಾಗುತ್ತದೆ. ಶಿವನನ್ನು ಪತಿಯೆಂದು ಭಾವಿಸಿ ತನ್ಮಯವಾಗುವ, ತೊಡಗಿಸಿಕೊಳ್ಳುವ ಪ್ರೀತಿಯ ಪ್ರಕ್ರಿಯೆಯು ರಾಜಪ್ರಭುತ್ವಕ್ಕೆ, ಆಸ್ತಿ ಮತ್ತು ಅಧಿಕಾರಕ್ಕೆ, ಪುರುಷ ಪ್ರಧಾನತೆಗೆ, ಒಟ್ಟು ಸಾಂಪ್ರದಾಯಿಕತೆಗೆ ಒಡ್ಡಿದ ಪರ್ಯಾಯವಾಗಿ

ನನಗೆ ಕಾಣಿಸುತ್ತದೆ. 'ನನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ, ಮಿಕ್ಕಿದ ಗಂಡಸರೆಲ್ಲ ಮುಗಿಲ ಮರೆಯ ಬಣ್ಣದ ಬೊಂಬೆಯಂತೆ' ಎಂದು ಸ್ಪಷ್ಟಪಡಿಸುವ ಅಕ್ಕನ ಪ್ರೀತಿ ಪಾತ್ರ 'ಚೆನ್ನಮಲ್ಲಿಕಾರ್ಜುನ' ಕೇವಲ ಭಕ್ತಿ ಸ್ವೀಕಾರದ ದೈವವಲ್ಲ; ಒಂದು ಪರ್ಯಾಯ ಪ್ರತೀಕ.

ಆದ್ದರಿಂದ ಅಕ್ಕನ ಪತಿಯ ಕಲ್ಪನೆಯನ್ನು ಅಲೌಕಿಕ ಭಾವ ವಲಯದಲ್ಲಿ ಬಂಧಿಸುವುದು ಸರಿಯೆನಿಸುವುದಿಲ್ಲ. ಅಕ್ಕನ ಕೆಲವು ವಚನಗಳು ಲೌಕಿಕಾನುಭವದಲ್ಲಿ ಶಿವ ಸಂಸಾರದ ಸೆಳೆತವನ್ನು ಅತ್ಯಂತ ಸ್ಪಷ್ಟವಾಗಿ ಹೇಳುತ್ತದೆ. ಲೌಕಿಕದ ಕಳವಳ-ತಳಮಳಗಳನ್ನು ಬದಿಗೊತ್ತಿ ಸುಳ್ಳು ಶಾಂತಿಯನ್ನು ನಟಿಸುವುದು ಅಕ್ಕಮಹಾದೇವಿಯ ವ್ಯಕ್ತಿತ್ವಕ್ಕೆ ಒಗ್ಗದ ಸ್ವಭಾವ. 'ಒಡಲ ಕಳವಳಕ್ಕಾಗಿ ಅಡವಿಯ ಹೊಕ್ಕೆನು| ಗಿಡುಗಿಡು ದಪ್ಪದೆ ಬೇಡಿದೆ ನೆನ್ನಂಗಕ್ಕೆಂದು| ಅವು ನೀಡಿದವು ತಮ್ಮ ಲಿಂಗಕ್ಕೆಂದು' ಎಂದು ಹೇಳುವಾಗ ಒಡಲ ಕಳವಳದ ವಾಸ್ತವಕ್ಕೆ ಅಕ್ಕ ಎಂದೂ ವಂಚನೆ ಮಾಡುವುದಿಲ್ಲ. ಮಾನಸಿಕ ಸತ್ಯಕ್ಕೆ ವಂಚನೆ ಮಾಡದ ಶುದ್ಧ ಪ್ರಾಮಾಣಿಕತೆಯೇ ಅಕ್ಕನ ಶ್ರೇಷ್ಠತೆ. ಚೆನ್ನಮಲ್ಲಿಕಾರ್ಜುನ ಎಂಬ 'ಅಲೌಕಿಕ'ವು ಅಕ್ಕನಲ್ಲಿ 'ಲೌಕಿಕ'ವಾಗಿ ಸಹಜಾಭಿವ್ಯಕ್ತಿ ಪಡೆಯುವ ವಿಧಾನವೇ ಒಂದು ವಿಶಿಷ್ಟತೆ. 'ಕಾಯದ ಕಳವಳವ ಕೆಡಿಸಯ್ಯ' ಎಂದಾಗ ಇಲ್ಲಿ ಮಾಯದ ಮದ ಒಳಸೇರಿ ಅದನ್ನು ಮೀರುವ ಪ್ರಯತ್ನದಲ್ಲೇ ತುಮುಲ, ತಳಮಳಗಳು ಕಾಡಿಸುತ್ತವೆ. ಆಗ 'ಸುಳಿದು ಬೀಸುವ ಗಾಳಿ ಉರಿಯಾಯಿತವ್ವ| ಬೆಳದಿಂಗಳು ಬಿಸಿಲಾಯಿತ್ತು ಕೆಳದಿ' ಎಂದು ಕೊರಗುತ್ತ 'ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ' ಎಂಬ ಸಂಕಟ ಸುಡುತ್ತದೆ. ವಿರಹ ಉಕ್ಕಿ ಬರುತ್ತದೆ. ಉಕ್ಕುವ ವಿರಹವನ್ನು ಹತ್ತಿಕ್ಕುವ ಒಳತೋಟಿಯಲ್ಲಿ ಹುಟ್ಟಿದ ನುಡಿಗಳ ಪ್ರಾಮಾಣಿಕತೆ ಅನನ್ಯವಾದುದು :

*'ಒಮ್ಮೆ ಕಾಮನ ಕಾಲು ಹಿಡಿವೆ*
*ಒಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ*
*ಸುಡು ವಿರಹವನ್ನು ಆರಿಗೆ ಧೃತಿಗೆಡುವೆ*
*ಚನ್ನಮಲ್ಲಿಕಾರ್ಜುನ ದೇವನೆನ್ನನೊಲ್ಲದ*
*ಕಾರಣ ಎಲ್ಲರಿಗೆ ಹಂಗಿತಿಯಾದೆನವ್ವ'*

ಕಾಮನ ಕಾಲ ಹಿಡಿವೆ. ಚಂದ್ರಮಂಗೆ ಸೆರಗೊಡ್ಡಿ ಬೇಡುವೆ - ಎಂಬ ಸಾಲುಗಳು ಹೊತ್ತುತರುವ ಸಂಕಟಮಯ ಮಾನಸಿಕ ಇತಿಹಾಸವನ್ನು ಬೇರೆ ಯಾವ ಪದಗಳಲ್ಲಿ ಹೇಳಲು ಸಾಧ್ಯ? ವಿರಹದಿಂದ ಹೊರಬರಲು ಯತ್ನಿಸುವ ಯಾತನೆಯ ಒತ್ತಡಕ್ಕೆ ಸಿಕ್ಕಿದ ಮೂಕ ಆಕ್ರಂದನಕ್ಕೆ ಈ ಸಾಲುಗಳಷ್ಟೇ ಸಾಕಲ್ಲವೇ? ಹೇಳಿಕೊಳ್ಳಲಾಗದ ಯಾತನೆಯ ಅನುಭವಕ್ಕಾಗಿ ಮುಂದಿನ ಸಾಲುಗಳನ್ನು ಗಮನಿಸಿ.

*'ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ*
*ಏರಿಲ್ಲದ ಘಾಯದಲ್ಲಿ ನೊಂದೆನವ್ವ*
*ಸುಖವಿಲ್ಲದೆ ಧಾವತಿಗೊಂಡೆನವ್ವ'*

ಅಕ್ಕನ ಒಳ ಉರಿಯ ಅವ್ಯಕ್ತ ಭಾವ ಲಯವು 'ಕಿಚ್ಚಿಲ್ಲದ ಬೇಗೆ' ಮತ್ತು ಏರಿಲ್ಲದ ಘಾಯ'ವಾಗಿದೆ. ಹೊರಗೆ ಗೋಚರವಲ್ಲ; ಆದರೆ ಒಳಗೆ ಉರಿಯುವುದು ನಿಂತಿಲ್ಲ. ಅಕ್ಕನನ್ನು

ಅಲೌಕಿಕ ಭಕ್ತಿಯಲ್ಲಿ ಬಂಧಿಸಿದರೆ ಒಳಗಿನ ಭಾವ ಪ್ರಪಂಚವನ್ನು ಮರೆಮಾಚಿದಂತಾಗುತ್ತದೆ. ಈ ಉದಾಹರಣೆಗಳ ಮೂಲಕ ನಾನು ಹೇಳಬಯಸುವುದು - ಕನ್ನಡದ ಅಪ್ಪಟ ಅನುಭವದ ಕವಯತ್ರಿ ಅಕ್ಕಮಹಾದೇವಿಯನ್ನು ಭಕ್ತೆಯಾಗಿಸುವ ಮೊದಲು ಹೆಣ್ಣಾಗಿಸಿ ನೋಡೋಣ; ಒಂದು ಮನುಷ್ಯ ಮನಸ್ಸಾಗಿ ಆಕೆಯನ್ನು ಅರ್ಥ ಮಾಡಿಕೊಳ್ಳೋಣ. ಲೌಕಿಕಾನುಭವದಲ್ಲಿಯೇ ಅಕ್ಕನ ಅನುಭವಗಳು ಕಟ್ಟಿಕೊಳ್ಳುತ್ತ, ಅಲೌಕಿಕ ಮತ್ತು ಲೌಕಿಕಗಳ ಅಂತರವನ್ನು ಇಲ್ಲವಾಗಿ ಸುತ್ತ, ಪುರುಷ ಪ್ರಧಾನತೆಗೆ ಪರ್ಯಾಯ ಕಟ್ಟುವ ಕಳವಳದ ಕಣ್ಣಾಗಿ ಪರಿಭಾವಿಸೋಣ. 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವು 'ದೈವ'ವಾಗುವ ಬದಲು ಸಾಂಪ್ರದಾಯಿಕ ಪುರುಷ ಪ್ರಭುತ್ವಕ್ಕೊಂದು ಪರ್ಯಾಯದ ಗುರಿಯಾಗಿದೆಯೆಂಬುದನ್ನು ಅರ್ಥ ಮಾಡಿಕೊಳ್ಳೋಣ. ಲೌಕಿಕಾನುಭವಗಳಲ್ಲೇ ಚೆನ್ನಮಲ್ಲಿಕಾರ್ಜುನನ ಜೊತೆಗಿನ ಸಂಬಂಧಗಳು ಅನಾವರಣಗೊಳ್ಳು ವುದನ್ನು ನೋಡಿದರೆ ಅಕ್ಕನ ಲೌಕಿಕ ಬೇರುಗಳ ಗಾಢತೆ ಅರಿವಾಗುತ್ತದೆ.

*'ಕಾಣುತ್ತ ಕಾಣುತ್ತ*
*ಕಂಗಳ ಮುಚ್ಚಿದೆ ನೋಡವ್ವ*
*ಕೇಳುತ್ತ ಕೇಳುತ್ತ*
*ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವ*
*ಕೂಡುವ ಕೂಟವ ನಾನೇನೆಂದರಿಯದೆ*
ಮರೆದೆ ಕಾಣವ್ವ

ಎಂದು ಹೇಳಿಕೊಳ್ಳುವ ಖಾಸಗಿತನದಲ್ಲಿ ಹಾಗೂ 'ಅಕ್ಕ ಕೇಳಕ್ಕ ಆನೊಂದು ಕನಸ ಕಂಡೆ ಚಿಕ್ಕ ಚಿಕ್ಕ ಜಡೆಯ ಸುಲಿಪಲ್ಲ ಗೊರವನು| ಬಂದೆನ್ನ ನೆರದ ನೋಡವ್ವ| ಆತನನ್ನಪ್ಪಿಕೊಂಡು ತಳವಳಗಾದೆನೆಲಗೇ|' ಎಂಬ ಏಕಾಂತದ ಗಂಡು-ಹೆಣ್ಣಿನ ಅನುಭವದ ಮೂಲಕ ಶಿವ ಸಂಬಂಧವನ್ನು ಬಿಚ್ಚಿಡುವ ರೀತಿಯಲ್ಲಿ, ಅಕ್ಕಮಹಾದೇವಿ ಅನೇಕರಿಗೆ ವಿಚಿತ್ರವಾಗಿ ಕಂಡಿರಲಿಕ್ಕೆ ಸಾಧ್ಯ. ಅಕ್ಕನ ವಿಶಿಷ್ಟತೆ ಇರುವುದೇ ಇಲ್ಲಿ. ಅಲೌಕಿಕವನ್ನು ಲೌಕಿಕದಲ್ಲಿಟ್ಟು ಸತ್ಯ ಶೋಧಿಸಿದ ಅಪರೂಪದ ಹಾಗೂ ಅಸಾಧಾರಣವಾದ ಅನುಭವ ಪ್ರತೀಕವೇ ಅಕ್ಕಮಹಾದೇವಿ.

ಇಲ್ಲಿ ಇನ್ನೊಂದು ಅಂಶವನ್ನೂ ಗಮನಿಸಬೇಕು. ಅಕ್ಕನ ವಚನಗಳಲ್ಲಿ ಪುರುಷ ಸಂಬೋಧನೆ ಇರುವುದು ತುಂಬಾ ಕಡಿಮೆ. ಇಲ್ಲವೆನ್ನುವಷ್ಟು ಅಲ್ಲ. ಆಕೆಯ ಅಂತರಂಗದ ಭಾವನೆಗಳನ್ನು ಬಿಚ್ಚಿಡುವಾಗ ಬರುವ ಏಕೈಕ ಪುರುಷ ಸಂಭೋಧನೆಯೆಂದರೆ - ಚೆನ್ನಮಲ್ಲಿಕಾರ್ಜುನ. ಉಳಿದಂತೆ ಬಹುಪಾಲು ಸ್ತ್ರೀ ಸಂಬೋಧನೆಯು ಆವರಿಸಿಕೊಳ್ಳುತ್ತದೆ. ಅಕ್ಕ, ಅವ್ವ, ಕೆಳದಿ-ಹೀಗೆ ಸ್ತ್ರೀಯನ್ನು ಉದ್ದೇಶಿಸಿಯೇ ತನ್ನ ಅಂತರಂಗದ ಅನುಭವಗಳನ್ನು ಹಂಚಿಕೊಳ್ಳುವುದು ಅಕ್ಕಮಹಾದೇವಿಯ ವಿಶಿಷ್ಟ ಕ್ರಮ. ಪುರುಷ ಪ್ರಧಾನ ಸಮಾಜದ ಜೊತೆ ಹಂಚಿಕೊಳ್ಳಲಾಗದ ಅನುಭವಗಳನ್ನು ಸ್ತ್ರೀ ಸಂಬೋಧನೆಯ ಮೂಲಕ ತನಗೆ ತಾನೇ ಹೇಳಿಕೊಳ್ಳುವುದು ಒಂದು ಸಂಕಟಮಯ ಪಯಣವೇ ಸರಿ. ಜೊತೆಗೆ ಪುರುಷ ಪ್ರಧಾನ ಸಮಾಜಕ್ಕೆ ಕೊಟ್ಟುಕೊಂಡ ಯಾತನೆಯ ಉತ್ತರವೂ ಹೌದು.

ಮತ್ತೊಂದು ಮುಖ್ಯ ಅಂಶವನ್ನು ನಾವು ಗಮನಿಸಬೇಕು. ಅಕ್ಕನ ಖಾಸಗಿ ಅನುಭವಗಳು ಅವ್ವ, ಅಕ್ಕ ಹಾಗೂ ಕೆಳದಿಯರನ್ನು ಉದ್ದೇಶಿಸಿ ಅನಾವರಣಗೊಳ್ಳುತ್ತ ಹೋದರೆ, ಚೆನ್ನಮಲ್ಲಿಕಾರ್ಜುನನ ಹುಡುಕಾಟದ ಸಂದರ್ಭದಲ್ಲಿ ನಿಸರ್ಗ ಸಂಬೋಧನೆ ಮುಖ್ಯವಾಗುತ್ತದೆ. ನಿಸರ್ಗದ ಮರ ಗಿಡಗಳು, ಪ್ರಾಣಿಪಕ್ಷಿಗಳು ಅಕ್ಕನ ಅಂಗಲಾಚುವಿಕೆಯ ಕೇಂದ್ರವಾಗುತ್ತವೆ. ಮನುಷ್ಯ ಯಾವಾಗ ನಿಸರ್ಗದ ಜೊತೆ ತನ್ನ ಅಂತರಂಗವನ್ನು ಬಿಚ್ಚಿಡುವುದು ಎಂಬ ಪ್ರಶ್ನೆ ನನಗೆ ಮುಖ್ಯವೆನಿಸುತ್ತದೆ. ಮನುಷ್ಯರಲ್ಲಿ ಹಂಚಿಕೊಳ್ಳಲಾಗದ ಉಸಿರುಕಟ್ಟುವ ವಾತಾವರಣದಲ್ಲಿ ಹುಟ್ಟುವ ಅನಾಥ ಪ್ರಜ್ಞೆ ಅಥವಾ ಪರಕೀಯತೆಯು ಮರ ಗಿಡಗಳ ಮೊರೆ ಹೋಗುತ್ತದೆ. ಪ್ರಾಣಿ ಪಕ್ಷಿಗಳಲ್ಲಿ ಪ್ರೀತಿಯ ನೆಲೆಯನ್ನು ಕಾಣುತ್ತದೆ. ತನ್ನ ಸ್ವತಂತ್ರ ಹಾಗೂ ಸ್ವೋಪಜ್ಞ ಸ್ವಭಾವ ಹಾಗೂ ನಡವಳಿಕೆಗಳಿಗೆ ಒಗ್ಗದ ಸಮಾಜದಲ್ಲಿ ಆಂತರಂಗಿಕ ಅನಾಥ ಪ್ರಜ್ಞೆಗೆ ಸಿಲುಕಿದ ಅಕ್ಕಮಹಾದೇವಿ 'ಗಿಡುಗಿಡುದಪ್ಪದೆ ಬೇಡಿ'ದಲ್ಲದೆ ಗಿಳಿ, ಹಂಸೆ, ನವಿಲುಗಳ ಜೊತೆ ಮಾತಾಡತೊಡಗುವುದು ಅಂದಿನ ಹೊಸ ಹಾದಿಯೇ ಸರಿ; ಇದು ಒಳಗಿನ ಹಾದಿಯೂ ಹೌದು.

> *'ಚಲಿಮಿಲಿ ಎಂದೋದುವ ಗಿಳಿಗಳಿರಾ*
> *ನೀವು ಕಾಣಿರೇ? ನೀವು ಕಾಣಿರೇ?*
> *ಸರವರದೊಳಗಾಡುವ ಹಂಸೆಗಳಿರಾ*
> *ನೀವು ಕಾಣಿರೇ? ನೀವು ಕಾಣಿರೇ?*

ಎಂದು ಕೇಳುತ್ತ ಹೋಗುವ ಅಕ್ಕಮಹಾದೇವಿ ಗಿಳಿ, ಹಂಸೆಗಳ ಜೊತೆಗೆ ಸಂಬೋಧನೆ ಮಾಡುವುದು ಕೋಗಿಲೆ ಮತ್ತು ನವಿಲುಗಳಂತಹ ಕೋಮಲ ಜೀವಿಗಳನ್ನು ಎಂಬ ಅಂಶ ವಿಚಾರಯೋಗ್ಯ. ಗಿಳಿ, ಹಂಸೆ, ಕೋಗಿಲೆ, ನವಿಲು, ದುಂಬಿ, ಬೆಳದಿಂಗಳು ಇವುಗಳನ್ನು ಉದ್ದೇಶಿಸಿ ಕೇಳಿಕೊಳ್ಳುವ ಮನಸ್ಥಿತಿ ತಾನಾಗಿಯೇ ಅರ್ಥವಾಗುವಂತಹುದು. ಇಲ್ಲಿ ಮನುಷ್ಯರಿಲ್ಲ; ಪ್ರೀತಿ ಪ್ರೇಮದ ಸಂಕೇತವಾದ ಪಕ್ಷಿಗಳಿವೆ; ಬೆಳದಿಂಗಳಿದೆ; ಹಾಗಾದರೆ ಅಕ್ಕನ ಮನೋಭೂಮಿಕೆಯಲ್ಲಿ ಹುಟ್ಟಿದ ಪರಕೀಯತೆಯ ಮೂಲ ಇರುವುದು ಪ್ರೀತಿ ಪ್ರೇಮಗಳು ಸಿಕ್ಕದ ಸಾಮಾಜಿಕ ವಲಯದಲ್ಲಿ ಅಲ್ಲವೇ? ಕಾಠಿಣ್ಯ ಹಾಗೂ ಕ್ರೌರ್ಯಗಳಿಗೆ ಪರ್ಯಾಯವಾಗಿ ಕೋಮಲ ಸಂಕೇತಗಳೊಂದಿಗೆ ಸಂವಾದಿಸುವ ವಿಧಾನವನ್ನು ಕಂಡುಕೊಂಡ ಅಕ್ಕಮಹಾದೇವಿ ಹೊಸ ಹಾದಿಯನ್ನು ತುಳಿದ ಎಲ್ಲ ಸಂಕಟ ಹಾಗೂ ಸವಾಲುಗಳ ಸಮರ್ಥ ಸಂಕೇತವಾಗಿ, ಚಾರಿತ್ರಿಕ ಮಹತ್ವದ ಮನುಷ್ಯ ಪ್ರತೀಕವಾಗಿ ನನಗೆ ಕಾಣಿಸುವುದುಂಟು. ಆಕೆಯ ಅನೇಕ ವಚನಗಳಲ್ಲಿ ಅಪ್ಪಟ ಆಂತರಂಗಿಕ ಅನುಭವಗಳಿವೆ; ಅರಳುತ್ತಲೇ ನರಳುವ ಹೂವುಗಳಿವೆ; ಆತ್ಮನಿವೇದನೆಯ ವಿವಿಧ ವಿಧಾನಗಳಿವೆ.

ಅನುಭವ ನಿವೇದನೆಯ ಒಂದು ಹಂತದಲ್ಲಿ ಅಕ್ಕಮಹಾದೇವಿ 'ಆತ್ಮಸಂಗಾತ'ದ ಮಾತುಗಳನ್ನು ಸಾದರಪಡಿಸಿರುವುದನ್ನು ಗಮನಿಸಿದಾಗ, ವೈಯಕ್ತಿಕ ಬದುಕಿನ ಹೊಸ ಹೊಳಹೊಂದು ಗೋಚರಿಸುತ್ತದೆ. ಚೆನ್ನಮಲ್ಲಿಕಾರ್ಜುನ ಮತ್ತು ತನ್ನ ಸಂಬಂಧವನ್ನು

'ಆತ್ಮಸಂಗಾತ'ದ ನೆಲೆಯಲ್ಲಿ ಪರಿಭಾವಿಸುವ ಕ್ರಮದಲ್ಲಿ ತನಗೆ ತಾನೇ ಕರುಳೊಡೆಯುವ ಕಾಯದ ಕಳವಳ ಮತ್ತು ಅದನ್ನು ಮೀರುವ ಹೋರಾಟ ಒಂದು ಹೊಸ ಮಾನಸಿಕ ಲೋಕವನ್ನೇ ತೆರೆಯುತ್ತದೆ. ಆದ್ದರಿಂದ ಅಕ್ಕಮಹಾದೇವಿಯಲ್ಲಿರುವ 'ಸಂವೇದನಾಶೀಲ ಸ್ವೋಪಜ್ಞ ಸ್ತ್ರೀ'ಯನ್ನು ನಿರ್ಲಕ್ಷ್ಯ ಮಾಡಿ, ಶಿವಭಕ್ತೆಯೆಂದಷ್ಟೇ ವಿಜೃಂಭಿಸುವುದು 'ಆತ್ಮಸಂಗಾತ'ಕ್ಕೆ ಮಾಡಿದ ಅನ್ಯಾಯವಾಗುತ್ತದೆ. ರಾಜ ಪ್ರಭುತ್ವ, ಪುರುಷ ಪ್ರಭುತ್ವ, ಸಂಪ್ರದಾಯ ಮತ್ತು ಸಂಪತ್ತುಗಳಿಗೆ ಎದುರಾಗಿ ಹೊಸ ಪರ್ಯಾಯದ ಪ್ರತೀಕವಾಗುತ್ತ ಪರಕೀಯತೆಯ ಅನುಭವ ದಲ್ಲಿ ತನ್ನೊಳಗೆ ತಾನು ಆತ್ಮಸಂಗಾತಕ್ಕೆ ತೊಡಗಿದ ವೈಯಕ್ತಿಕ ಹಾಗೂ ಸಾಮಾಜಿಕ ಶಕ್ತಿಯನ್ನು ಕೇವಲ 'ಭಕ್ತೆ' ಎಂದಷ್ಟೇ ಹೇಳಿದರೆ ಏನೂ ಹೇಳಿದಂತೆ ಆಗುವುದಿಲ್ಲ.

*'ತೆರಣೆಯ ಹುಳು ತನ್ನ ಸ್ನೇಹದಿಂದ*
*ಮನೆಯ ಮಾಡಿ| ತನ್ನ ನೂಲು ಸುತ್ತಿ ಸುತ್ತಿ*
*ಸಾವ ತೆರನಂತೆ|*
*ಮನ ಬಂದುದ ಬಯಸಿ ಬಯಸಿ*
*ಬೇವುತ್ತಿರುವೆನಯ್ಯ | ಅಯ್ಯಾ,*
*ಎನ್ನ ಮನದ ದುರಾಶೆಯ ಮಾಣಿಸಿ*
*ನಿಮ್ಮತ್ತ ತೋರಾ*

ಎಂದು ಚೆನ್ನಮಲ್ಲಿಕಾರ್ಜುನನ್ನು ಕೇಳುವ ಕಳವಳದ ಜೀವಗಳು ಆಧುನಿಕ ಸಂದರ್ಭದಲ್ಲೂ ಇರುವುದನ್ನು ಕಂಡುಕೊಂಡರೆ ಅದು ಅಕ್ಕನನ್ನು ಅರ್ಥಮಾಡಿಕೊಳ್ಳುವ ಒಂದು ವಿಧಾನ; ಅಕ್ಕನ ವಚನಗಳೊಂದಿಗೆ ನಡೆಸುವ ಒಂದು ಅನುಸಂಧಾನ.

# ಪುರುಷ ಕಥಾನಕದಲ್ಲಿ ದೊರಕುವ ಕಲ್ಪಿತ ಮಹಿಳಾ ಚರಿತ್ರೆ

**ಎಚ್.ಎಸ್. ಶ್ರೀಮತಿ**

## I. ಅಸ್ತಿತ್ವದವಾದದ ಚೌಕಟ್ಟಿನಲ್ಲಿ ಕಲ್ಪಿತ ಮಹಿಳಾ ಚರಿತ್ರೆ

ಫ್ರಾನ್ಸ್ ಸ್ತ್ರೀವಾದಿ ಆದಿಚಿಂತಕಿ ಸಿಮೋನ್ ದ ಬುವಾ ತನ್ನನ್ನು ಕುರಿತು ಬರೆಯಬೇಕೆಂದು ಕೊಂಡಾಗ ಈ ಆತ್ಮಕಥೆ ಕೇವಲ ತನ್ನ ಕತೆಯಷ್ಟೇ ಆಗದೆ, ಅಸ್ತಿತ್ವವಾದದ ತಾತ್ತ್ವಿಕ ಚೌಕಟ್ಟಿನಲ್ಲಿ ಹೆಂಗಸರ ಬಗೆಗೆ ನಿರೂಪಿತವಾಗುವ ಬರಹವಾಗಿರಬೇಕೆಂದು ಚಿಂತಿಸಿದಳಂತೆ. ಬುವಾ ಜೀನ್ ಪೌಲ್ ಸಾರ್ತ್ರ್‌ನಂತಹ ಮೇಧಾವಿಯ ಸಂಗಾತಿಯಾಗಿದ್ದವಳು. ಆತ ತನ್ನ Being and Nothingness ಎಂಬ ಕೃತಿಯಲ್ಲಿ ಮಂಡಿಸಿದ 'ಅಸ್ತಿತ್ವವಾದ'ದ ಚೌಕಟ್ಟನ್ನೇ ಬುವಾ ಕೂಡ ತನ್ನ ಚಿಂತನೆಗೆ ಅಳವಡಿಸಿಕೊಳ್ಳಬೇಕೆಂದುಕೊಂಡದ್ದು. ಈ ಚೌಕಟ್ಟಿನಲ್ಲಿ ತನ್ನ ಕಥಾನಕವನ್ನು ಆರಂಭಿಸಬೇಕೆಂದರೆ, ಮೊದಲಿಗೆ ಜಗತ್ತಿನ ಎಲ್ಲ ಹೆಂಗಸರ ಸ್ಥಿತಿಗತಿಗಳನ್ನು ವಿವರಿಸುವ ಅಗತ್ಯವಿದೆ ಎಂದು ಮೊದಲ ಹಂತಕ್ಕೇ ತೋರಿತು. 'ನನ್ನನ್ನು ನನಗಾಗಿ ವಿವರಿಸಿಕೊಳ್ಳುವುದೆಂದರೆ, ನಾನೊಬ್ಬ ಹೆಂಗಸು ಎಂಬ ಹೇಳಿಕೆಯಿಂದಲೇ ಅದು ಆರಂಭಗೊಳ್ಳ ಬೇಕಾಗುತ್ತದೆ' ಎಂಬ ವಿಚಿತ್ರ ಸತ್ಯವೂ ಹೊಳೆಯಿತು. ಗಂಡಸಿಗೆ ತನ್ನ ಕಥಾನಕವನ್ನು ಹೀಗೆ ಆರಂಭಿಸಬೇಕೆನ್ನುವ ಅಗತ್ಯ ಬೀಳುವುದಿಲ್ಲ. ಏಕೆಂದರೆ ಎಲ್ಲ ಬಗೆಯ ಕಥಾನಕಗಳೂ ಪುರುಷ ಸೂಚಿಯಾಗಿಯೇ ಇರುತ್ತವೆ. ಹೆಂಗಸಿನ ಪ್ರಸ್ತಾಪವನ್ನು ಅದು ಒಳಗೊಳ್ಳುವ ಸಂದರ್ಭ ಬಂದಾಗಷ್ಟೇ ಸ್ತ್ರೀವಾಚಿ ವಿಶೇಷತೆಯನ್ನು ಅಲ್ಲಿ ಕೂಡಿಸಲಾಗುತ್ತದೆ. ಯಾವ ಜ್ಞಾನಶಿಸ್ತುಗಳ ಚಿಂತನೆಗಳೂ, ಬರವಣಿಗೆಗಳೂ ಮಾತ್ರವಲ್ಲ, ಇವುಗಳ ಅಭಿವ್ಯಕ್ತಿ ಮಾಧ್ಯಮವಾದ ಭಾಷೆಯೂ ಈ ನಿಯಮಕ್ಕೆ ಹೊರತಲ್ಲ. ಇದು ಈ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸಾರ್ವಕಾಲಿಕವೂ ಸಾಮುದಾಯಿಕವೂ ಆದ ಅಭಿವ್ಯಕ್ತಿ ಸ್ವರೂಪವಾಗಿದೆ. ಸಾರ್ತ್ರ್ 'ಅಸ್ತಿತ್ತ್ವವಾದ'ವನ್ನು ಮಂಡಿ ಸುವಾಗ ಬಹುಶಃ ತಾನು ಗಂಡಸು ಎಂಬುದನ್ನು ಮೊದಲಿಗೆ ನೆನಪಿಸಿಕೊಂಡು ಮುಂದುವರೆಯ ಬೇಕಾದ ಅಗತ್ಯ ಈ ಕಾರಣದಿಂದಾಗಿಯೇ ಬಿದ್ದಿರಲಾರದು. **ಬುವಾ ಮತ್ತು ಸಾರ್ತ್ರ್ ಅನ್ಯೋನ್ಯ ಸಂಗಾತಿಗಳು.** ಆದರೆ ತಾನು ಎದುರಿಸಬೇಕಾದ ಅಭಿವ್ಯಕ್ತಿಯ ಬಿಕ್ಕಟ್ಟುಗಳನ್ನು ಕುರಿತು ಚಿಂತಿಸುತ್ತಿದ್ದಾಗ ಆಕೆಗೆ ಮೊದಲ ಬಾರಿಗೆ, ತಾನು ಮತ್ತು ತನ್ನ ಸಂದರ್ಭ, ಸಾರ್ತ್ರ್‌ಗಿಂತ

ಮತ್ತು ಆತನ ಸಂದರ್ಭಕ್ಕಿಂತ ಭಿನ್ನವಾದದ್ದು ಎನಿಸಿ ಬಿಟ್ಟಿತಂತೆ. **ತಮ್ಮಿಬ್ಬರ ಬದುಕುಗಳು ತಾರತಮ್ಯಗಳಿಂದ ಕೂಡಿದ್ದು** ಎಂಬ ಭಾವ ತೀವ್ರವಾಗಿ ಕಾಡಿತು. ಇದಕ್ಕೆ ಪುಷ್ಠಿಯೊದಗಿಸುವ ಒಂದು ಘಟನೆ ಆ ಸಂದರ್ಭದಲ್ಲೇ ನಡೆಯಿತು. ಸಾರ್ತ್ರ್ ಮತ್ತು ಬುವಾ ಅವಿವಾಹಿತ ಸಂಗಾತಿಗಳು. ಈ ಸಂಬಂಧವನ್ನು ಕುರಿತು ಸಾಮಾಜಿಕ ವಿರೋಧಗಳು ತೀವ್ರವಾದವು. ವಾಸ್ತವದಲ್ಲಿ ಈ ಧಾಳಿ ನೇರವಾಗಿ ಸಾರ್ತ್ರ್‌ನ ರಾಜಕಾರಣ ಮತ್ತು ಸಿದ್ಧಾಂತಗಳನ್ನು ಒಪ್ಪದ ಒಂದು ಗುಂಪು, ಆತನನ್ನೇ ಗುರಿಯಾಗಿಟ್ಟುಕೊಂಡೇ ಪ್ರಾರಂಭಿಸಿದ್ದು. ಪ್ರಾಸಂಗಿಕವಾಗಿ ಅದರಲ್ಲಿ ಬುವಾಳ ಮೇಲೂ ಅನುಚಿತ ಟೀಕೆಗಳಿದ್ದುವು. ಬುವಾ ತಮ್ಮ ಸಂಬಂಧವನ್ನು ಸಮರ್ಥಿಸುವ ಒಂದು ಲೇಖನವನ್ನು ಬರೆಯಲು ಯೋಚಿಸಿದಳು. ಹೆಣ್ಣಾಗಿ, ಅಸ್ತಿತ್ವವಾದಿಯಾಗಿ ತನ್ನನ್ನು ವಿವರಿಸಿಕೊಳ್ಳುವ ಉದ್ದೇಶ ಇಲ್ಲಿದ್ದದ್ದು. ವೈಯಕ್ತಿಕವಾಗಿ ತನ್ನ ಸಂಗಾತಿಯೊಂದಿಗಿನ ಸಂಬಂಧ ಮತ್ತು ಅದರ ತಾತ್ವಿಕತೆಯ ಬಗ್ಗೆ ಆಕೆಗೆ ಪ್ರಶ್ನೆಗಳೇನೂ ಇರಲಿಲ್ಲ. ಆ ಎಲ್ಲ ತಾತ್ವಿಕತೆಗಳೂ ಸಮಗ್ರವಾಗಿ ತನ್ನವೇ ಎಂದೇ ಆಕೆ ಗ್ರಹಿಸಿದ್ದದ್ದು. ಆದರೆ ಇದನ್ನು ಸಾರ್ವಜನಿಕವಾಗಿ ವಿವರಿಸಲು ಹೊರಟ ಕ್ಷಣಕ್ಕೇ ಆಕೆಗೆ ಹೊಳೆದ ವಿಚಿತ್ರ ಅಂಶವೆಂದರೆ, ಮೂಲದಲ್ಲಿ ಸಾರ್ತ್ರ್‌ನದೆನಿಸಿದ ತಾತ್ವಿಕತೆಯನ್ನು ಪ್ರಶ್ನೆಗಳೇ ಇಲ್ಲದೆ ತಾನು ಸ್ವೀಕರಿಸಿದ್ದೇನೆ ಎಂದೇ ಪ್ರಸ್ತಾಪಿಸುವ ಅನಿವಾರ್ಯ ಅವಳಿಗೆ ಒದಗಿತ್ತು. ಹೆಂಗಸಿನ ಬದುಕೆಂದರೆ ಗಂಡಸಿನ ಬದುಕಿನ ಸುತ್ತ, ಅದಕ್ಕೆ ಪೂರಕವಾಗಿಯಷ್ಟೇ ನಡೆಯಬೇಕಾದ ಸಂಗತಿ ಎಂಬ ಅರಿವು ಒದಗಿಸಿದ ಆಘಾತ, ತನ್ನ ಈ ಅನುಭವ ಎಲ್ಲ ಹೆಂಗಸರಿಗೂ ಅನ್ವಯವಾಗುವ ಸಂಗತಿಯಾಗಿರಬಹುದೇ ಎಂಬ ಶೋಧಕ್ಕೆ ಆಕೆಯನ್ನು ಪ್ರೇರೇಪಿಸಿತು. ಅಂಥಾ ಶೋಧ ಅವಳ ಅನಿಸಿಕೆಯನ್ನು ದೃಢಪಡಿಸಿತು. ಈವರೆಗೆ ತನ್ನ ಸ್ವತಂತ್ರ ಅಸ್ತಿತ್ವ, ಸಾಧನೆಗಳಿಗೆ ತಾನೇ ಕಾರಣ ಎಂಬ ಆಕೆಯ ವಿಶ್ವಾಸದಲ್ಲಿ ಅನುಮಾನದ ಗೆರೆ ಕಾಣಿಸತೊಡಗಿ, ತನ್ನ ಈ ಎಲ್ಲ ಸಾರ್ಥಕ ಬದುಕಿಗೂ, ತಾನು ಸಾರ್ತ್ರ್‌ನಂತಹ ವಿಶ್ವಸನೀಯ ಸಂಗಾತಿಯನ್ನು ಪಡೆದಿರುವುದಕ್ಕೂ ನೇರವಾದ ಸಂಬಂಧವಿದೆ ಎಂಬುದು ಖಚಿತವೇ ಆಯಿತು. ಲೈಂಗಿಕತೆಯು ಸಾಮಾಜೀಕರಣಗೊಂಡು ಲಿಂಗವ್ಯವಸ್ಥೆಯ ತಾರತಮ್ಯಗಳು ಸೃಷ್ಟಿಗೊಳ್ಳುವುದನ್ನು, ಈ ತಾರತಮ್ಯಗಳೇ ಸ್ತ್ರೀಪುರುಷರ ಬದುಕುಗಳ ಸ್ಥಿತಿಗತಿಗಳನ್ನು ನಿರ್ಧರಿಸುವ ಸಂಗತಿಗಳಾಗುವುದನ್ನು ಯಾವುದೇ ಅನುಮಾನಗಳಿಲ್ಲದೆ ಗ್ರಹಿಸಿದ ಬುವಾಗೆ ಹೆಂಗಸರನ್ನು ಕುರಿತು ತಾನು ಬರೆಯಬೇಕೆಂದುಕೊಂಡ ಬರಹದ ಸ್ಪಷ್ಟ ರೂಪುರೇಷೆಗಳು ಕಣ್ಣ ಮುಂದೆ ನಿಂತವು.

ಲೈಂಗಿಕತೆಯು ಸಾಮಾಜೀಕರಣಗೊಳ್ಳುವ ಪ್ರಕ್ರಿಯೆಯ ಮೂಲವನ್ನು ಚರಿತ್ರೆಯಲ್ಲಿಯೇ ಶೋಧಿಸಬೇಕಿತ್ತು. ಇದು ಇನ್ನೊಂದು ಆಘಾತವನ್ನು ಅವಳೆದುರು ನಿಲ್ಲಿಸಿತು. ಚರಿತ್ರೆಯಲ್ಲಿ ಮಹಿಳೆ ಇರಲೇ ಇಲ್ಲ, ಅವಳು ಕಳೆದು ಹೋಗಿದ್ದಳು. ಇವಳನ್ನು ಹುಡುಕಿ ಹಿಡಿಯುವುದೇ ಬುವಾಳ ಸಂಶೋಧನೆಯ ಮುಖ್ಯ ಗುರಿಯಾಯಿತು. ಆವಳ ಇಡೀ ಶೋಧದಲ್ಲಿ ದೊರೆತ ಅಂಶಗಳೆಲ್ಲವೂ ದೃಢಪಡಿಸಿದ್ದು ಒಂದೇ ಸಂಗತಿಯನ್ನು. ಅದೆಂದರೆ, ಹೆಣ್ಣಿನ ಸುತ್ತ ಹೆಣೆದ ಪುರಾಣಗಳು ಐತಿಹ್ಯಗಳು ಸಮೃದ್ಧವಾಗಿವೆಯೇ ಹೊರತು, ಅಲ್ಲೆಲ್ಲೂ ಅವಳ ವಸ್ತುಸ್ಥಿತಿಯ

ದಾಖಲೆಗಳ ಸುಳಿವೇ ಇಲ್ಲ ಎಂಬುದು. ನಮ್ಮ ಬದುಕಿನ ವಾಸ್ತವಗಳ ಅನುಭವಗಳನ್ನೇ ಆಧರಿಸಿ, ಈ ಮಿಥ್‌ಗಳು ಸೃಷ್ಟಿಸಿರುವ ಮಹಿಳಾ ಜಗತ್ತಿನ ರಹಸ್ಯವನ್ನು ಭೇದಿಸಬೇಕಷ್ಟೇ. ಹೆಣ್ಣಿನ ಬದುಕನ್ನು ಅವಳ ಜೈವಿಕತೆ, ಮಾನಸಿಕ ವಿಶ್ಲೇಷಣೆ ಮತ್ತು ಚಾರಿತ್ರಿಕ ವಸ್ತುಸ್ಥಿತಿಗಳ ಸಂದರ್ಭದಲ್ಲಿಟ್ಟೇ ಗ್ರಹಿಸಬೇಕೆಂಬುದು ಬುವಾ ಚಿಂತನೆ.

ಜೈವಿಕತೆಯನ್ನು ವಿವರಿಸಿಕೊಳ್ಳುವ ಮೂಲಕ ಮಹಿಳೆಯ ಭೌತಿಕ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯ. ಅಲೆಮಾರಿ ಬದುಕಿನ ಪ್ರಾಚೀನ ಸಮಾಜಗಳಿಂದ ಹಿಡಿದು, ಅವು ಕೃಷಿಕ ಹಾಗೂ ಪಶುಪಾಲನಾ ಸಮುದಾಯಗಳಾಗಿ ನೆಲೆ ನಿಂತ ಹಂತಗಳಿಗೆ ದಾಟಿ, ಮಧ್ಯಕಾಲೀನ ಯುಗದ ವೇಳೆಗೆ ಪಿತೃಪ್ರಧಾನ ಗುಣಲಕ್ಷಣಗಳನ್ನು ಕೂಡಿಸಿಕೊಂಡ ಹಂತದವರೆಗೂ ಮನುಜ ಕುಲವು ನಡೆದು ಬಂದ ಚಾರಿತ್ರಿಕ ವಸ್ತುಸ್ಥಿತಿಯನ್ನು ಅವಲೋಕಿಸಿ ಮಹಿಳೆಯ ಬದುಕನ್ನು ಗುರುತಿಸಿಕೊಳ್ಳಬೇಕು. ಇದು ಅಷ್ಟು ಸುಲಭವದ ಕೆಲಸವಲ್ಲ. ಏಕೆಂದರೆ, ಈ ಹಾದಿಯಲ್ಲಿನ ಅವಳ ಹೆಜ್ಜೆ ಗುರುತುಗಳನ್ನು ಅಳಿಸಿ ಹಾಕುವ ಪ್ರಯತ್ನಗಳು ನಿರಂತರವಾಗಿ ಜಾರಿಯಲ್ಲಿವೆ. ಆದರೆ, ಪುರಾಣ ಐತಿಹ್ಯಗಳಲ್ಲಿ ಹುದುಗಿರುವ ಮಿಥ್‌ಗಳನ್ನು ಅಧ್ಯಯನ ಮಾಡುವ ಮೂಲಕವೇ ವಸ್ತು ಸ್ಥಿತಿಯನ್ನು ಗ್ರಹಿಸುವ ಸೂಕ್ಷ್ಮತೆ ಬುವಾಳಿಗೆ ದಕ್ಕಿದೆ. ಹಾಗಾಗಿಯೇ, ಅವಳು ಕಟ್ಟಿ ಕೊಡುವ ಮಹಿಳಾ ಚರಿತ್ರೆಯು ಮಹಿಳೆಯ ಅಸ್ತಿತ್ವವನ್ನು ತೋರಿಸಿಕೊಡುವಲ್ಲಿ ಯಶಸ್ವಿಯಾ ಗುತ್ತದೆ. ಪುರುಷನಿರ್ಮಿತ ಚರಿತ್ರೆಯಲ್ಲಿ ಕಳೆದೇ ಹೋಗಿದ್ದ ಮಹಿಳೆಯು ಕಾಣಿಸತೊಡಗುತ್ತಾಳೆ. ಇವಳು ಪುರುಷ ವ್ಯವಸ್ಥೆಯು ಅವಳನ್ನು ಕಣ್ಮರೆಯಾಗಿಸಿ ಇಟ್ಟಿದ್ದರ ಹಿನ್ನೆಲೆಯನ್ನು ಅನಾವರಣ ಗೊಳಿಸುತ್ತಾಳೆ. ಇಂದು ಇಷ್ಟೆಲ್ಲಾ ಆಕ್ರಮಣಕಾರಿಯಾಗಿ ಕಾಣಿಸಿಕೊಳ್ಳುತ್ತಿರುವ ಪುರುಷ ಮೂಲತಃ ಎಂತಹ ಹೆದರುಪುಕ್ಕಲನೆಂಬುದನ್ನು ಸ್ಪಷ್ಟಪಡಿಸುತ್ತಾಳೆ. ಪುರುಷನು ಸೃಷ್ಟಿಸಿದ ಮಿಥ್‌ಗಳ ಹಿನ್ನೆಲೆಯಲ್ಲಿ ಅವನ ಕನಸುಗಳು, ಭಯಗಳು, ಸ್ವಾರ್ಥ ಲಾಲಸೆಗಳೂ ಕೆಲಸ ಮಾಡಿವೆ. ಆದರೆ ಇದರಲ್ಲಿ ಹೆಣ್ಣಿನ ದುರಂತವೂ ಸೇರಿ ಹೋಗಿದೆ. ಏಕೆಂದರೆ ಈ ಮಿಥ್‌ಗಳಲ್ಲೇ ಬದುಕಬೇಕಾದ ಅನಿವಾರ್ಯದಲ್ಲಿ ಹೆಣ್ಣು ಸ್ವತಃ ತನ್ನ ವಾಸ್ತವವನ್ನು ಗ್ರಹಿಸಲಾರದ ವಿಸ್ಮೃತಿಗೆ ಸರಿದು ಬಿಟ್ಟಿದ್ದಾಳೆ. ಪುರುಷ ಸೃಷ್ಟಿಯ ಮಿಥ್‌ಗಳನ್ನೇ ವಾಸ್ತವಗಳೆಂದು ಗ್ರಹಿಸಿ, ಅಸಹಾಯಕ ಳಂತೆ ಬದುಕುತ್ತಿದ್ದಾಳೆ. ಬುವಾಗೆ ಈಗ ಈ ಹೆಣ್ಣಿನ ಚಿಂತೆ. ಮಿಥ್ ಎನ್ನುವುದು ಒಂದು ಕಲ್ಪಿತ ಚರಿತ್ರೆ ಎನ್ನುವುದನ್ನು, ಚಾರಿತ್ರಿಕ ವಸ್ತುಮೂಲವಾದವನ್ನು ಅರಿಯುವ ಮೂಲಕ ಈ ಬದುಕಿನ ಗುರಿಯನ್ನು ಕಾಣಬೇಕೆಂಬುದನ್ನು ಇಂದಿನ ಮಹಿಳೆ ಗ್ರಹಿಸಬೇಕಿದೆ. ಮಿಥ್‌ಗಳನ್ನು ಒಡೆದು ವಾಸ್ತವಗಳನ್ನು ಕಟ್ಟಿ ಕೊಡುವ ಕೆಲಸವನ್ನು ಮನುಕುಲದ ಚಾರಿತ್ರಿಕ ವಿಶ್ಲೇಷಣೆ ಎಂದೇ ತಿಳಿಯಬೇಕಾಗುತ್ತದೆ. ಅಥವಾ ಒಂದರ್ಥದಲ್ಲಿ ಚರಿತ್ರೆಯ ಪುನಾರಚನೆ ಎಂದೂ ಹೇಳಬಹುದು.

ಚಾರಿತ್ರಿಕ ವಸ್ತುಮೂಲವಾದವು ಕೆಲವು ಮುಖ್ಯ ಸತ್ಯಗಳನ್ನು ಕಾಣಿಸುತ್ತದೆ. ಮಾನವ ಎಂದರೆ ಒಂದು ಪ್ರಾಣಿವರ್ಗ ಎಂಬ ವಿವರಣೆ ಇಲ್ಲಿ ಸಲ್ಲುವುದಿಲ್ಲ. ಮಾನವ ಎಂದರೆ ಒಂದು ಚಾರಿತ್ರಿಕ ವಾಸ್ತವ. ಮಾನವ ಸಮಾಜ ಎನ್ನುವುದು ಪ್ರಕೃತಿಗೆ ವಿರುದ್ಧವಾಗಿ ಹುಟ್ಟಿ

ಕೊಂಡದ್ದು. ಅದು ಪ್ರಕೃತಿಯ ಅಸ್ತಿತ್ವವನ್ನು ವಿರೋಧವಿಲ್ಲದೆ ಒಪ್ಪಿಕೊಳ್ಳುವುದಿಲ್ಲ. ಬದಲಿಗೆ, ಪ್ರಕೃತಿಯನ್ನು ಅತಿಕ್ರಮಿಸಿ ತನ್ನ ನಿಯಂತ್ರಣಕ್ಕೆ ಒಳಪಡಿಸಲು ಹವಣಿಸುತ್ತದೆ. ಈ ಪ್ರಯತ್ನ ವ್ಯಕ್ತಿನಿಷ್ಠ ಸ್ವರೂಪವ್ವೇನಲ್ಲ. ವಸ್ತುನಿಷ್ಠವಾಗಿಯೇ ಪ್ರಯೋಗಗೊಳ್ಳುವಂಥದು. ಮಾನವ ಜಾತಿಯ ಗಂಡು ಹೆಣ್ಣುಗಳಲ್ಲಿ ಲೈಂಗಿಕ ವ್ಯತ್ಯಾಸಗಳಷ್ಟೇ ಅಲ್ಲದೆ, ಇನ್ನಿತರ ದೈಹಿಕ ವ್ಯತ್ಯಾಸ ಗಳೂ ಇವೆ. ಸಂತಾನೋತ್ಪತ್ತಿಯ ಮುಖ್ಯ ಸಾಮರ್ಥ್ಯಗಳು ಹೆಣ್ಣಿನವಾಗಿವೆಯಾದರೆ, ಇನ್ನಷ್ಟು ಬಗೆಯ ಕೆಲಸಗಳಲ್ಲಿ ಗಂಡಿನ ದೇಹಬಲ ಮೇಲುಗೈ ಪಡೆದಂತಿವೆ. ಬಹು ಪ್ರಾಚೀನ ಕಾಲದಿಂದಲೇ ದೇಹಬಲಕ್ಕೆ ಪೂರಕವಾಗಿ ಶಸ್ತ್ರಸಾಧನಗಳನ್ನು ಬಳಸುವುದನ್ನು ಮಾನವ ಅರಿತು ಕೊಂಡಿದ್ದಾನೆ. ಗಂಡಸಿನ ಕೆಲಸಗಳಿಗೆ ಹೀಗೆ ಶಸ್ತ್ರಸಾಧನಗಳು ಸಹಾಯಕವಾದಂತೆ, ಹೆಂಗಸಿನ ಸಂತಾನೋತ್ಪತ್ತಿಯ ಕೆಲಸಕ್ಕೂ ಸಲಕರಣೆಗಳು ಒದಗಿ ಬಂದರೆ ಅವಳ ಹೊಣೆ ಗಾರಿಕೆಯೂ ಸ್ವಲ್ಪ ಹಗುರವಾದೀತು.

ಮಹಿಳೆಯ ಚರಿತ್ರೆಯ ಹೆಜ್ಜೆ ಗುರುತುಗಳನ್ನು ಏಂಗೆಲ್ಸ್ ಈ ದೃಷ್ಟಿಕೋನದಿಂದಲೇ ಕಲ್ಪಿಸುತ್ತಾನೆ. ತನ್ನ 'The Origin of Family, Private Property, and The State' ಕೃತಿಯಲ್ಲಿ ಈ ತಾಂತ್ರಿಕತೆಯು ಹೆಣ್ಣಿಗೆ ದಕ್ಕದೆ ಹೋದ ಕಾರಣವಾಗಿಯೇ ಅವಳ ಸ್ಥಿತಿ ಹೀಗೆ ಉಳಿಯಿತು ಎಂಬುದನ್ನು ಆತ ವಿವರಿಸುತ್ತಾನೆ. ಕೃಷಿಯ ಚರಿತ್ರೆಯ ಆರಂಭದಲ್ಲಿ ಉಳುಮೆ, ಬಿತ್ತನೆಗಳಂತಹ ಕೆಲಸಗಳಿಗೆ ಕನಿಷ್ಠ ತಾಂತ್ರಿಕತೆಯ ಬಳಕೆಯಾಗುತ್ತಿತ್ತು. ಅನೇಕ ಕಾರಣಗಳಿಂದಾಗಿ ಮನೆಯ ಒಳಗಿನ ಮತ್ತು ಹೊರಗಿನ ಕೆಲಸಗಳಲ್ಲಿ ಕ್ರಮವಾಗಿ ಸ್ತ್ರೀಪುರುಷರು ತೊಡಗುತ್ತಿದ್ದಿರಬಹುದಾದರೂ, ಈ ಶ್ರಮ ವಿಭಜನೆಯಲ್ಲಿ ಮೇಲುಕೀಳಿನ ಭಾವವಿರದೆ ಸಮಾನ ನೆಲೆಯ ಸಮ್ಮಾನವಿತ್ತು. ಏಕೆಂದರೆ ಗಂಡಸು ಮನೆಯ ಹೊರಗೆ ಉತ್ಪಾದನಾ ಚಟುವಟಿಕೆಯಲ್ಲಿ ತೊಡಗುತ್ತಿದ್ದನಾದರೆ ಹೆಂಗಸು, ಮನೆಯ ಆವರಣದಲ್ಲಿ ಉಳಿದರೂ ನಿಸರ್ಗ ಸಹಜ ಸಂತಾನೋತ್ಪತ್ತಿಯ ಶ್ರಮವಷ್ಟೇ ಅಲ್ಲದೆ ಕೈ ತೋಟ, ಪಶುಪಾಲನೆ, ನೇಯ್ಗೆ, ಕುಂಬಾರಿಕೆ ಗಳಂತಹ ಉತ್ಪಾದಕ ಚಟುವಟಿಕೆಗಳಲ್ಲೂ ಶ್ರಮವನ್ನು ಹಾಕುತ್ತಿದ್ದಳು. ಹಾಗಾಗಿ ಆರ್ಥಿಕತೆ ಯಲ್ಲಿ ಭಾಗೀಧಾರಳಾದ ಇವಳು ಪುರುಷನೊಂದಿಗೆ ಸಮಾನ ನೆಲೆಯಲ್ಲಿಯೇ ಬದುಕುತ್ತಿದ್ದಳು. ಇಂದಿಗೂ ಆರ್ಥಿಕ ಚಟುವಟಿಕೆಗಳಲ್ಲಿ ಹೆಣ್ಣಿನ ಭಾಗವಹಿಸುವಿಕೆ ಅನಿವಾರ್ಯವೆನಿಸಿರುವ ಸಮುದಾಯಗಳಲ್ಲಿ ಹೀಗೆಯೇ ಇದೆ. ಆದರೆ ಕ್ರಮೇಣವಾಗಿ ನಾಗರಿಕತೆ, ಸಂಸ್ಕೃತಿಗಳು ವಿಕಾಸ ಗೊಳ್ಳುತ್ತಾ ನಡೆದಂತೆ, ಸಾಧನ ಸಲಕರಣೆಗಳು ಹೆಚ್ಚು ಹೆಚ್ಚಾಗಿ ಒದಗುತ್ತಾ ಹೋದಂತೆ, ಹೆಚ್ಚಿನ ಉತ್ಪಾದನಾ ಚಟುವಟಿಕೆಗಳು ಗಂಡಸಿನ ಹತೋಟಿಗೆ ಬರತೊಡಗಿದವು. ಆ ಮೂಲಕ ಆರ್ಥಿಕ ಹತೋಟಿಯೂ ಅವನಿಗೆ ಸಾಧ್ಯವಾಯಿತು. ಕೃಷಿ ಸಾಮರ್ಥ್ಯದ ವಿಸ್ತರಣೆ ಎಂದರೆ, ಕಾಡುಗಳನ್ನು ಸವರಿ ಕೃಷಿಯೋಗ್ಯವಾಗಿಸುವ, ಭೂಮಿಯನ್ನು ಖಾಸಗಿ ಆಸ್ತಿಯಾಗಿಸಿಕೊಳ್ಳುವ ಪ್ರಕ್ರಿಯೆ. ಇದು ಸಹಜವಾಗಿಯೇ ಯಜಮಾನಿಕೆ ಗುಲಾಮಗಿರಿಗಳ ಹುಟ್ಟಿಗೂ ಕಾರಣ ವಾಯಿತು. ವರ್ಗ ನೆಲೆಯಲ್ಲಿ ಸಬಲ ಗಂಡಸು ಯಜಮಾನನಾಗಿ ದುರ್ಬಲ ಗಂಡಸು ಗುಲಾಮ ನಾಗಿ ಕಾಣಿಸಿಕೊಳ್ಳಬಹುದಾದರೆ, ಲಿಂಗನೆಲೆಯಲ್ಲಿ ಇದು ಸ್ತ್ರೀಪುರುಷ ಅಸಮಾನ ನೆಲೆಗಳಾಗಿ

ಕಾಣಿಸಿಕೊಳ್ಳುತ್ತದೆ. ಇಲ್ಲಿ ಸಬಲ ವ್ಯಕ್ತಿಗಳಿಗೆ ದುರ್ಬಲರು ಕೇವಲ ವಸ್ತುಗಳೆನಿಸಿ ಬಿಡುತ್ತಾರೆ. ಖಾಸಗಿ ಆಸ್ತಿಯ ಕಲ್ಪನೆಯೊಂದಿಗೆ ಮಾಲೀಕತ್ವದ ಕಲ್ಪನೆ ತೀರಾ ಸಹಜವಾದುದು. ಹೆಂಗಸು ಗಂಡಸಿನ ಆಸ್ತಿ ಎನಿಸುವುದು ಈ ಪ್ರಕ್ರಿಯೆಯ ತಾರ್ಕಿಕ ಫಲಿತಾಂಶ. ಇದು ಹೆಣ್ಣಿನ ಲೈಂಗಿಕತೆಗೆ ಒದಗಿದ ಬಹುದೊಡ್ಡ ಚಾರಿತ್ರಿಕ ಸೋಲು. ಶ್ರಮವಿಭಜನೆಯ ಪ್ರಾಥಮಿಕ ಹಂತದಲ್ಲಿ ಮನೆಯ ಹೊರಗಿನ ಸಾಮ್ರಾಜ್ಯದ ದೊರೆ ಪುರುಷನೇ ಆಗಿದ್ದರೂ, ಮನೆಯ ಒಳಗಿನ ಸಾಮ್ರಾಜ್ಯಕ್ಕೆ ಹೆಂಗಸು ಅಷ್ಟೇ ಅಧಿಕಾರಯುತ ಸ್ಥಾನದ ರಾಣಿಯಾಗಿದ್ದಳು. ಆದರೆ ಖಾಸಗಿ ಆಸ್ತಿ ಹಾಗೂ ಮಾಲೀಕತ್ವದ ಸ್ಥಾಪನೆಯೊಂದಿಗೆ ಮನೆಯೊಳಗಿನ ಸ್ರಾಮಾಜ್ಯ, ಅದರ ರಾಣಿಯೂ ಕೂಡಿಯೇ ಪುರುಷನ ಅಧಿಕಾರ ವ್ಯಾಪ್ತಿಗೆ ಒಳಗಾದವು. ರಾಣಿಯು ಈಗ ಗೃಹಕೃತ್ಯಗಳ ಬಲೆಯಲ್ಲಿ ಸಿಲುಕಿದ ಗುಲಾಮಳಾಗಿ ಬಿಟ್ಟಳು. ಅವಳ ಗೃಹಕೃತ್ಯಗಳಿಗೆ ಈಗ ಉತ್ಪಾದಕ ಮೌಲ್ಯ ಉಳಿಯಲಿಲ್ಲ. ಹಾಗಾಗಿ, ಅದಕ್ಕೆ ಯಾವುದೇ ಮಹತ್ವವೂ ಉಳಿಯದೆ ಅನುತ್ಪಾದಕವೆನಿಸಿ, ಮೌಲ್ಯ ರಹಿತವಾಯಿತು. ಸಹಜವಾಗಿಯೇ ಮಾತೃಸ್ಥಾನೀಯತೆಯು ಪಿತೃಸ್ಥಾನೀಯತೆಗೆ ಶರಣಾಯಿತು. ಆಸ್ತಿಯು ಈ ಮೊದಲು ತಾಯಿಯಿಂದ ಅವಳ ಎಲ್ಲ ಗಂಡು ಮತ್ತು ಹೆಣ್ಣು ಮಕ್ಕಳಿಗೆ ವರ್ಗವಾಗುತ್ತಿತ್ತಾದರೆ, ಈಗ ಅದು ತಂದೆಯಿಂದ ಗಂಡು ಮಕ್ಕಳಿಗೆ ಮಾತ್ರ ದಕ್ಕುವ ಸಂಗತಿಯಾಯಿತು. ಹೀಗೆ ಖಾಸಗಿ ಆಸ್ತಿಯ ಕಲ್ಪನೆಯೇ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಮೂಲ ಕಾರಣವಾಯಿತು. ಈ ಕುಟುಂಬದಲ್ಲಿ ಹೆಂಗಸು ತೀವ್ರ ಆಕ್ರಮಣಕ್ಕೆ ಒಳಗಾಗುತ್ತಾ ಬಂದಿದ್ದಾಳೆ. ಗಂಡಸು ಮಾತ್ರ ಸ್ವಚ್ಛಂದ ಲೈಂಗಿಕತೆಯಲ್ಲಿ ಲೋಲುಪನಾಗುತ್ತಾನೆ. ಬಹುಪತ್ನಿತ್ವ ದಿಂದ ಹಿಡಿದು, ಸೇವಕ ವರ್ಗದ ಹೆಣ್ಣುಗಳ ಅನುಭೋಗ, ವೇಶ್ಯೆಯರ ಕುಲವನ್ನೇ ಸೃಷ್ಟಿಸುವ ವರೆಗೂ ಅವನ ಈ ಲೈಂಗಿಕ ಅಪರಾಧಗಳು ಸಾಗುತ್ತವೆ. ಆದರೆ ಪೂರ್ಣ ಸಾಮಾಜಿಕ ಮನ್ನಣೆ ಗೌರವಗಳನ್ನೇ ಅವನು ಪಡೆಯುತ್ತಾನೆಂಬುದು ಇಲ್ಲಿನ ವಿಶೇಷ. ಹೀಗೆ ಆರ್ಥಿಕವಾಗಿ ದಮನಕ್ಕೆ ಒಳಗಾದ ಹೆಣ್ಣು ಸಾಮಾಜಿಕ ದಮನಕ್ಕೂ ಒಳಗಾಗುವುದು ಸಹಜವೆನಿಸಿ ಬಿಡುತ್ತದೆ. ಇದು ಯಾವುದೇ ಬಗೆಯ ಸುಧಾರಣಾ ಚಳುವಳಿಗಳಿಂದಲೂ ಸರಿಪಡಿಸಲಾಗದ ಅಸಮಾನತೆ. ಕಾನೂನುಬದ್ಧವಾಗಿ ಸಮಾನ ಹಕ್ಕುಗಳನ್ನು ಸ್ಥಾಪಿಸಿ ಚಲಾಯಿಸುವುದರಿಂದ ಮಾತ್ರವೇ ಸಮಾನತೆಯನ್ನು ಪುನಃ ಸ್ಥಾಪಿಸುವ ಸಾಧ್ಯತೆಯನ್ನು ಕಲ್ಪಿಸಬಹುದು. ಸಾಮಾಜಿಕವಾಗಿ 'ಉತ್ಪಾದಕತೆ' ಎಂಬ ಮನ್ನಣೆಯನ್ನು ಗಳಿಸಿರುವ ಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗಿಸಿ ಕೊಂಡು, ಕನಿಷ್ಠ ಪ್ರಮಾಣದಲ್ಲಷ್ಟೇ ಗೃಹಕೃತ್ಯಗಳಲ್ಲಿ ಭಾಗವಹಿಸುವ ಮೂಲಕವೇ ಈ ಬಗೆಯ ಸಮಾನತೆ ಸಾಧ್ಯವಾದೀತು ಎಂದು ಏಂಗೆಲ್ಸ್ ಹೇಳುತ್ತಾನೆ. ಮಾರ್ಕ್ಸ್‌ವಾದಿ ಸ್ತ್ರೀವಾದವು ಆರ್ಥಿಕ ಮೂಲದ ಸಮಾನತೆಯ ಈ ಕಲ್ಪನೆಯನ್ನು ತುಂಬಾ ಬಲವಾಗಿ ನೆಚ್ಚಿಕೊಳ್ಳುತ್ತದೆ.

ಆದರೆ, ಇಲ್ಲಿರುವ ಮುಖ್ಯ ಪ್ರಶ್ನೆ ಕೇವಲ ಪ್ರಜಾಪ್ರಭುತ್ವದ ಸಮಾಜವಾದಕ್ಕೆ ಸಂಬಂಧಿಸಿದ್ದಲ್ಲ. ಈ ಸಮಾಜವಾದ ವರ್ಗಭೇದವನ್ನು ಕೊನೆಗಾಣಿಸಬಹುದು. ಸ್ತ್ರೀಪುರುಷ ವ್ಯಕ್ತಿ ಭೇದಗಳನ್ನಲ್ಲ. ಸಾಧನ ಸಲಕರಣೆಗಳ ಸೃಷ್ಟಿಯಿಂದ ಸಕಲವನ್ನೂ ನಿಯಂತ್ರಿಸುವೆನೆಂಬ ಅಹಂ

ಪುರುಷನಿಗೆ ಸಾಧ್ಯ. ಇದಕ್ಕಿತಂಲೂ ಮೂಲಭೂತವಾದ ಕಾಣಿಕೆಯನ್ನು ಸಂತಾನೋತ್ಪತ್ತಿಯ ಮೂಲಕ ಮಾನವ ಕುಲಕ್ಕೆ ಸಲ್ಲಿಸುತ್ತಿರುವ ಹೆಣ್ಣು ಸಮಾನತೆಯ ಹಕ್ಕನ್ನು ಸ್ಥಾಪಿಸಲೂಬಹುದು. ಆದರೆ ಉತ್ಪಾದಕತೆ ಹಾಗೂ ಆರ್ಥಿಕತೆಯಂತಹ ಚಾರಿತ್ರಿಕ ವಸ್ತುಮೂಲವಾದವನ್ನಷ್ಟೇ ಹಿಡಿದು ಬದುಕಿನ ಪರಿಸ್ಥಿತಿಗಳನ್ನು ವಿವರಿಸಿಕೊಳ್ಳುವುದು ಸಾಧ್ಯವಾಗಲಾರದು. ಫ್ರಾಯ್ಡ್‌ನ ಲೈಂಗಿಕತೆಯಾಧಾರಿತ ವಿವರಣೆಯನ್ನಾಗಲೀ, ಏಂಗೆಲ್ಸ್‌ನ ಆರ್ಥಿಕತೆಯಾಧಾರಿತ ವಿವರಣೆಯನ್ನಾಗಲೀ ಒಂದು ಹಂತದಿಂದ ಮುಂದಕ್ಕೆ ವಿಸ್ತರಿಸುವುದು ಕಷ್ಟವಾಗುತ್ತದೆ. ಆದರೂ ಜೈವಿಕತೆ, ಮನೋವಿಶ್ಲೇಷಣೆ ಹಾಗೂ ಚಾರಿತ್ರಿಕ ವಸ್ತುಮೂಲವಾದಗಳನ್ನು ಸಾರಾಸಗಟಾಗಿ ನಿರಾಕರಿಸಿದಂತಾಗಲಿಲ್ಲ. ಬದಲಿಗೆ, ದೇಹ, ಲೈಂಗಿಕ ಬದುಕು ಹಾಗೂ ತಾಂತ್ರಿಕ ಸಂಪನ್ಮೂಲಗಳು ಗಂಡಸಿನ ಪಾಲಿನ ವಾಸ್ತವಗಳೆಂದಷ್ಟೇ ಹೇಳಬಹುದು. ಏಕೆಂದರೆ, ಅವನ ಅಸ್ತಿತ್ವದ ಆಯಾಮದಿಂದಷ್ಟೇ ಇವೆಲ್ಲವನ್ನೂ ಅವನು ಗ್ರಹಿಸುತ್ತಾನೆ. ಹಾಗಾಗಿ, ಮಾಂಸಲ ಶಕ್ತಿ, ಶಿಶ್ನ, ಬಳಕೆಯ ಸಾಧನ ಸಲಕರಣಗಳೆಲ್ಲವೂ ಅವನ ಜಗತ್ತಿನ ಮೌಲ್ಯಗಳಿಗನುಗುಣವಾಗಿ ಪರಿಗಣಿತವಾಗುತ್ತವೆ.

ಚರಿತ್ರೆಯ ಬರಹ ಎನ್ನುವುದು ಸಂಪೂರ್ಣವಾಗಿ ಪುರುಷ ಕಲ್ಪಿತವಾದದ್ದು. ಅದರಲ್ಲೂ ಪ್ರಬಲ ಜಾತಿ ವರ್ಗ ವರ್ಣ ಜನಾಂಗಗಳಿಗೆ ಸೇರಿದವರು ಕಟ್ಟಿದ ಕಟ್ಟುಕತೆ. ಅಲಕ್ಷಿತ ಸಮುದಾಯಗಳು ಎಚ್ಚೆತ್ತುಕೊಂಡ ಎಲ್ಲ ಸಂದರ್ಭಗಳಲ್ಲೂ ಮೊದಲಿಗೆ ಕಣ್ಣಿಗೆ ರಾಚುವ ಸಂಗತಿಯೆಂದರೆ, ತಮಗೆ ಚರಿತ್ರೆ ಎಂಬುದೇ ಇಲ್ಲ ಎಂಬುದು. 'ನಡೆದ ಕತೆ', 'ಇತಿಹಾಸ' ಎಂದು ಚರಿತ್ರೆಯನ್ನು ವ್ಯಾಖ್ಯಾನಿಸುವುದರ ಔಚಿತ್ಯದ ಪ್ರಶ್ನೆ ಇಲ್ಲಿಯೇ ಉದ್ಭವವಾಗುತ್ತದೆ. ಇತಿಹಾಸದ ಎಷ್ಟು ಸಂಗತಿಗಳನ್ನು ಯಾವ ಸಂಗತಿಗಳನ್ನು ದಾಖಲಿಸಲಾಯಿತು ಎಂಬುದಕ್ಕಿಂತ ಮುಖ್ಯವಾಗಿ ಎದುರಾಗುವ ಪ್ರಶ್ನೆ ಎಷ್ಟನ್ನು, ಯಾವುದನ್ನು ದಾಖಲಿಸದೆ ಪಕ್ಕಕ್ಕೆ ಸರಿಸಲಾಯಿತು ಎಂಬುದು. ಈ ಸೇರ್ಪಡೆ ಮತ್ತು ನಿರಾಕರಣೆಯ ಹಿಂದೆ ಇರುವ ರಾಜಕಾರಣ ಯಾವುದು ಎಂಬುದರ ವಿಶ್ಲೇಷಣೆ ಮುಂದಿನ ಹಂತ. ಈ ವಿಶ್ಲೇಷಣೆಯ ಮೂಲಕ ಮಾತ್ರ ಅಲಕ್ಷಿತ ಸಮುದಾಯಗಳ ಅಸ್ತಿತ್ವದ ಬೇರುಗಳನ್ನು ಶೋಧಿಸಬಹುದು. ಇಂಥಾ ಶೋಧವು ಒದಗಿಸುವ ಬಲದಿಂದಲೇ ಸಮುದಾಯಗಳು ಬದುಕಬೇಕಾದ ದಾರಿಗಳನ್ನು ಹುಡುಕಿಕೊಳ್ಳಲು ಸಾಧ್ಯ.

ಇಂದಿನ ಬದುಕಿನಲ್ಲಿ ಕಾಣಿಸುತ್ತಿರುವ ಸ್ತ್ರೀಪುರುಷ ಅಸಮಾನತೆ ಸುಧಾರಣಾ ಚಳುವಳಿಗಳಿಂದ ಪರಿಹಾರವಾಗುವಂಥದಲ್ಲ, ಸ್ವಲ್ಪ ಸೂಕ್ಷ್ಮ ವಿಶ್ಲೇಷಣೆಗೆ ತೊಡಗಿದರೆ, ಈ ಎಲ್ಲ ಸುಧಾರಣಾ ಚಳುವಳಿಗಳೂ, ಕಲ್ಯಾಣಕಾರಿ ಯೋಜನೆ ಕಾರ್ಯಕ್ರಮಗಳೂ ಅಸಮಾನತೆಯ ನೆಲೆಯನ್ನು ಭದ್ರಪಡಿಸುತ್ತವೆ ಎಂಬುದು ತಿಳಿಯುತ್ತದೆ. ದಮನಿತ ಸಮುದಾಯಕ್ಕೆ ತತ್ಕಾಲಕ್ಕೆ ಅಷ್ಟಿಷ್ಟು ಸೌಲಭ್ಯ ಸವಲತ್ತುಗಳನ್ನು ಒದಗಿಸುವ ಈ ಚಳುವಳಿ ಹಾಗೂ ಕಾರ್ಯಕ್ರಮಗಳು, ಮೂಲಭೂತ ಪರಿವರ್ತನೆಗಳನ್ನು ತರಬಲ್ಲ ಸಾಮರ್ಥ್ಯದವಲ್ಲ. ಬಹುಶಃ ಅಲ್ಲಿನ ಅಂತಿಮ ಉದ್ದೇಶವೂ ಪ್ರಶ್ನಾರ್ಹವೇ ಇರಬಹುದು. ಇತರ ಎಷ್ಟೋ ದಮನಿತ ಸಮುದಾಯಗಳಂತೆ ಮಹಿಳಾ ಸಮುದಾಯವೂ ತನ್ನ ಅಸ್ತಿತ್ವದ ಶೋಧಕ್ಕೆ ತೊಡಗಬೇಕು ಎಂಬ ಜಾಗ್ರತಾವಸ್ಥೆ

ಯಲ್ಲೀಗ ಇದೆ. ವಿಪರ್ಯಾಸವೆಂದರೆ, ಈ ಶೋಧಕ್ಕೆ ಮಹಿಳೆಯ ಅಸ್ತಿತ್ವವನ್ನೇ ನಿರಾಕರಿಸಿ ರಚಿತವಾದ ಚರಿತ್ರೆಯ ಎಳೆಗಳನ್ನೇ ಆಧರಿಸಬೇಕಿದೆ. ಧ್ವನಿಯಿಲ್ಲದ, ಆಕಾರವಿಲ್ಲದ, ಅಘೋಷಿತ ವಾದ ಸತ್ಯಗಳನ್ನು ಈ ಸುಳ್ಳಿನ ರಾಶಿಯೊಳಗಿಂದಲೇ ಹೆಕ್ಕಬೇಕು. ಅಸ್ತಿತ್ವವಾದವು ಒದಗಿಸುವ ತಾತ್ತ್ವಿಕತೆಯನ್ನೇ ಇಲ್ಲಿ ಮುಖ್ಯ ಮಾರ್ಗದರ್ಶನವಾಗಿ ಬಳಸಬೇಕು. ಮಾನವರಿಬ್ಬರು ಜೊತೆಯಾಗಿ ಅಸ್ತಿತ್ವ ಹೊಂದಿದ್ದಾರೆ ಎಂದರೆ ಸಾಕು, ಅಲ್ಲಿ ಒಬ್ಬರು ಇನ್ನೊಬ್ಬರನ್ನು ಪ್ರಭಾವಿ ಸುವ ಪೈಪೋಟಿ ಶುರುವಾಯಿತೆಂದೇ ಅರ್ಥ. ಇಬ್ಬರೂ ಸಮಬಲರಾದರೆ ಪ್ರಭಾವ ಪರಸ್ಪರವಾ ಗುತ್ತದೆ. ಪರಿಣಾಮ ಶತ್ರುತ್ವವೂ ಇರಬಹುದು, ಸ್ನೇಹವೂ ಇರಬಹುದು. ಆದರೆ ಎರಡರಲ್ಲೂ ಆತಂಕ ಘರ್ಷಣೆಗಳಂತೂ ಇದ್ದೇ ಇರುತ್ತದೆ. ಹಾಗಲ್ಲದೆ, ಹೇಗಾದರೂ ಒಬ್ಬರಿಗೆ ಕೆಲವು ಅನುಕೂಲಗಳು ಒದಗಿ ಬಂದು ತಮ್ಮ ಪ್ರಾಬಲ್ಯವನ್ನು ಮೆರೆಯುವ ಸಂದರ್ಭ ಒದಗಿದರೆ ಅವರು ಇನ್ನೊಬ್ಬರನ್ನು ಆಕ್ರಮಿಸಿ ನಿಯಂತ್ರಿಸಲು ಹವಣಿಸುವುದೂ ಅಷ್ಟೇ ನಿಶ್ಚಿತ. ಪುರುಷನು ಮಹಿಳೆಯ ಮೇಲೆ ಸಾಧಿಸಿರುವ ನಿಯಂತ್ರಣವೂ ಈ ಬಗೆಯದೇ. ಆದರೆ, ನಮ್ಮ ಈಗಿನ ಶೋಧದಲ್ಲಿ ಮುಖ್ಯವಾಗುವ ಪ್ರಶ್ನೆಯೆಂದರೆ, ಪುರುಷನಿಗೆ ಹೀಗೆ ಅನುಕೂಲಕರವಾಗಿ ಒದಗಿ ಬಂದ ಸಂದರ್ಭಗಳು ಯಾವುವು ಎಂಬುದು. ಈ ತಿಳುವಳಿಕೆಯನ್ನು ಪಡೆಯದೆ ಮಹಿಳೆಯ ಅಸ್ತಿತ್ವದ ಇಂದಿನ ಸ್ವರೂಪವನ್ನು ವಿವರಿಸಿಕೊಳ್ಳುವುದು ಅಸಾಧ್ಯವೇ ಆಗುತ್ತದೆ.

### ಅಲೆಮಾರಿ ಸಮುದಾಯದ ಮಹಿಳೆಯ ಸ್ಥಿತಿಗತಿಗಳು

ಆದರೆ ಈ ಚರಿತ್ರೆಯನ್ನು ಪುನಾರಚಿಸುವುದು ಸುಲಭವಲ್ಲ. ಪ್ರಾಚೀನ ಮಾನವ ಸಮಾಜದ ಬಗೆಗೆ ನಮಗೆ ದೊರೆಯುವ ಸಾಂಪ್ರದಾಯಿಕ ಮಾಹಿತಿಗಳು ವಿರೋಧಾಭಾಸಗಳಿಂದ ಕೂಡಿವೆ. ನೇರವಾಗಿ ಇವುಗಳನ್ನು ಆಧರಿಸಿ ಕೃಷಿಪೂರ್ವ ಅವಧಿಯಲ್ಲಿ ಮಹಿಳೆಯ ಸ್ಥಿತಿಗತಿಗಳು ಹೇಗಿದ್ದವು ಎಂದು ಕಲ್ಪಿಸುವುದು ತೀರಾ ಕಷ್ಟದ ಕೆಲಸ. ಅವಳ ದೇಹರಚನೆಯ ವಿವರಗಳನ್ನು ಕೂಡ ಕಲ್ಪಿಸಲಾಗದೇನೋ. ಬಹುಶಃ ಪುರುಷನಿಗೆ ಸಮಾನವಾಗಿಯೇ ಇದ್ದಿರಬಹುದಾದರೂ, ಅವಳು ನಿರ್ವಹಿಸಲೇ ಬೇಕಿದ್ದ ಸಂತಾನೋತ್ಪತ್ತಿಯ ನೈಸರ್ಗಿಕ ಹೊಣೆಯಿಂದಾಗಿ, ಈ ನಿಷ್ಠುರ ಪ್ರಪಂಚವನ್ನು ಎದುರಿಸುವಲ್ಲಿ ಅವಳು ಹೆಚ್ಚಿನ ಹೋರಾಟವನ್ನೇ ನಡೆಸುತ್ತಿದ್ದಿರಬೇಕು. ಜೊತೆಗೆ ಸುತ್ತಲಿನ ಸಂಪನ್ಮೂಲವನ್ನು ಬದುಕಿನ ಅಗತ್ಯಕ್ಕೆ ದುಡಿಸಿಕೊಳ್ಳಬೇಕಾಗಿದ್ದ ಶ್ರಮದಲ್ಲಿ ಪುರುಷನಿಗೆ ಸಮಾನವಾಗಿ ಭಾಗಿಯಾಗಲು ಸಾಧ್ಯವಾಗದೆ ಹೋಗಿ, ತನಗೂ ತಾನು ಹುಟ್ಟಿಸಿದ ಮಕ್ಕಳಿಗೂ ಅನ್ನಾಧಾರವನ್ನು ಒದಗಿಸೆಂದು ಪುರುಷನನ್ನೇ ಕೇಳಬೇಕಿತ್ತು. ಮಕ್ಕಳು ಸಮುದಾ ಯದ ಆಗತ್ಯಗಳಾದ್ದರಿಂದ ಅವನೂ ಇದರೊಂದಿಗೆ ಒಡಂಬಡಿಕೆ ಮಾಡಿಕೊಂಡಿರಬೇಕು. ಇಷ್ಟೆಲ್ಲ ಆದರೂ ಕೃಷಿಪೂರ್ವ ಅಲೆಮಾರಿ ಸಮಾಜಕ್ಕೆ ಮಕ್ಕಳು ಹೆಮ್ಮೆಯ ಆಸ್ತಿಗಳೆನಿಸಿ ದ್ದಕ್ಕಿಂತ ಹೊರೆಗಳೆನಿಸಿದ್ದೇ ಹೆಚ್ಚು. ಶಿಶುಹತ್ಯೆ ಅಲೆಮಾರಿ ಸಮಾಜಗಳಲ್ಲಿ ಸಾಮಾನ್ಯವಾಗಿತ್ತು. ಹಾಗೂ ಬದುಕುಳಿದರೆ ನಿರ್ಲಕ್ಷ್ಯದಿಂದಾಗಿ ಸಾಯುವುದೂ ಇತ್ತು. ಇಂದಿಗೂ ಕೆಲವು ಬುಡಕಟ್ಟುಗಳಲ್ಲಿ ಈ ಸ್ಥಿತಿ ಇರುವುದನ್ನು ಗಮನಿಸಬಹುದು. ಹುಟ್ಟಿದ ಕೂಸನ್ನು ಬೆಟ್ಟದ ತುದಿಯಲ್ಲಿ ಒಂದು ರಾತ್ರಿ ಇಡುವುದು ಅಂಥಾ ಒಂದು ಆಚರಣೆ. ಇಂಥಾ ಸ್ಥಿತಿಯಲ್ಲಿ

ಮಹಿಳೆಗಂತೂ ತನ್ನ ಸಂತಾನೋತ್ಪತ್ತಿ ಸಾಮರ್ಥ್ಯದ ಬಗೆಗೆ ಹೆಮ್ಮೆ ತಾಳುವುದು ಸಾಧ್ಯವೇ ಇರಲಿಲ್ಲ. ಮಗುವಿನ ಜನನವೇ ಸಮುದಾಯಕ್ಕೆ ಒಂದು ಸಮಸ್ಯೆ ಎನಿಸಿದಾಗ, ಅವಳು ನಿರ್ವಹಿಸುವ ಹೆರಿಗೆ, ಹಾಲೂಡಿಸುವಿಕೆ ಯಂಥಾ ಚಟುವಟಿಕೆಗಳು ಎಂದೂ ಕ್ರಿಯಾತ್ಮಕ ವೆನಿಸಲಿಲ್ಲ. ಈ ಹೆಣ್ಣು ತನ್ನ ಅಸ್ತಿತ್ವವನ್ನು ಸ್ಥಾಪಿಸುವುದು ಹೇಗೆ? ಅವಳು ತನ್ನನ್ನು ತನ್ನ ದೇಹವೆಂಬ ವಿಧಿಗೆ ನಿಷ್ಕ್ರಿಯವಾಗಿ ಒಪ್ಪಿಸಿಕೊಂಡಳು. ಶಿಶು ಸಂಗೋಪನೆಯು ಶಿಶುವನ್ನು ಹೆತ್ತ ತನ್ನದೇ ಹೊಣೆ ಎಂದು ಒಪ್ಪಿಕೊಳ್ಳಬೇಕಾಗಿ ಬಂದಾಗ, ಮನೆಗೆಲಸಗಳ ಸಂಪೂರ್ಣ ಒತ್ತಡವನ್ನೂ ಅವಳೇ ಹೊರುವುದು ಅನಿವಾರ್ಯವಾಯಿತು.

ಗಂಡಸಿನ ಸಂದರ್ಭವೇ ತೀರಾ ಭಿನ್ನವಾಯಿತು. ಅವನು ಸಮುದಾಯದ ಮುಖ್ಯ ಬೆಂಬಲ ವಾಗಿದ್ದ. ಹೆಣ್ಣಿನ ಅಭಿಜಾತ ರೀತಿಯಲ್ಲಲ್ಲ. ಬದಲಿಗೆ, ರೂಢಿಸಿಕೊಂಡ ತಂತ್ರಗಳಿಂದ ಪ್ರಕೃತಿಯ ಮೇಲೆ ನಿಯಂತ್ರಣವನ್ನು ಸಾಧಿಸುವ ಮೂಲಕ. ಇಲ್ಲಿ ಅವನು ತನ್ನ ಶಕ್ತಿಯನ್ನು ಚಲಾಯಿಸಿ ಅಧಿಕಾರವನ್ನು ಕಲ್ಪಿಸುವುದೇನೂ ಕಷ್ಟವಲ್ಲ. ಪ್ರಕೃತಿಯನ್ನು ಅನುಭೋಗಿಸಿದಷ್ಟಕ್ಕೆ ಅವನಿಗೆ ಸಮಾಧಾನವಾಗದು. ಅಲ್ಲಿನ ನಿಯಮಗಳನ್ನು ಮುರಿದು, ಅದರ ವಿರುದ್ಧ ಹಾಯ್ದು, ತನ್ನಿಚ್ಛೆಯಂತೆ ಮಣಿಸುವ ಮಹತ್ವಾಕಾಂಕ್ಷೆ ಅವನದು. ಆದರೆ, ಇದರಲ್ಲಿ ಜೀವದ, ಅಪಾಯ ತಪ್ಪಿದ್ದಲ್ಲ. ಜೀವ ಸೃಷ್ಟಿಸುವ ಹೆಣ್ಣನ್ನು ಈ ಚಟುವಟಿಕೆಗಳಿಂದ ದೂರವಿರಿಸಲಾಯಿತು ಎಂಬುದೇ ಅವಳ ಚರಿತ್ರೆಯ ದೊಡ್ಡ ದುರಂತವಾಯಿತು. ಜೀವ ಕೊಡುವ ಹೆಣ್ಣಿಗಿಂತ, ತನ್ನ ಜೀವವನ್ನು ಅಪಾಯಕ್ಕೆ ಸಿಲುಕಿಸಿ ಹೋರಾಡುವ ಗಂಡಸಿಗೆ ಮಾನ್ಯತೆ ಹೆಚ್ಚಾಯಿತು. ಅವನ ಹಿರಿಮೆ ಬಲವಾಯಿತು. ಪ್ರಾಣಿಗಳಲ್ಲಿ ಸೃಜನಶಕ್ತಿಯ ಹೆಣ್ಣಿಗಿರುವ ಮಾನ್ಯತೆ ಯೋಜಿತ ಕ್ರಿಯಾತ್ಮಕ ಚಟುವಟಿಕೆಗಳನ್ನೇನೂ ಹೊಂದದ ಗಂಡಿಗೆ ಇಲ್ಲ. ಆದರೆ ಮಾನವ ಗಂಡು ನಿಯಂತ್ರಣವನ್ನು ಸಾಧಿಸುವ ಯೋಜನೆಯನ್ನು ಹಮ್ಮಿಕೊಂಡಿದ್ದರಿಂದ ತನ್ನ ಕುಲದ ಹೆಣ್ಣಿಗಿಂತ ಪ್ರಬಲನಾಗಿ ಅವಳ ಮೇಲೂ ಈ ನಿಯಂತ್ರಣವನ್ನು ಸಾಧಿಸಿದ. ಅಲೆಮಾರಿ ಹಂತದ ಮಾನವ ಸಮಾಜದಲ್ಲಿ ಅಸ್ತಿತ್ವದ ಹೋರಾಟವೇ ಕಾರಣವಾಗಿ ನಿರ್ಮಿತವಾದ ಜೈವಿಕ ಮತ್ತು ಆರ್ಥಿಕ ಸಂದರ್ಭಗಳು ಸ್ತ್ರೀ ಪುರುಷರನ್ನು ಶ್ರೇಷ್ಠ/ಕನಿಷ್ಠರೆಂದು ನಿರ್ಧರಿಸಿಬಿಟ್ಟಿತು. ಹೆಂಗಸು ಅಂದೇ ಅಂಗವಿಕಲಳಾಗಿದ್ದು.

### ಕೃಷಿ ಸಮುದಾಯದಲ್ಲಿ ಮಹಿಳೆಯ ಸ್ಥಿತಿಗತಿಗಳು

ಅಲೆಮಾರಿ ಸಮುದಾಯದಲ್ಲಿ ಹೆಣ್ಣು ಪಟ್ಟ ಬವಣೆಗಳು ತೀರಾ ಅಸಹನೀಯವಾಗಿದ್ದ ವೆಂಬುದು ನಿಜ. ಆದರೆ, ಪಿತೃಪ್ರಧಾನತೆಯು ನೆಲೆಯೂರಿದ ಮೇಲೆ ಅವಳ ಕಷ್ಟಗಳು ಊಹೆಗೂ ನಿಲುಕಲಾರದಪಾದವು. ಅಷ್ಟೇ ಅಲ್ಲ. ಇಡೀ ವ್ಯವಸ್ಥೆ ಅವಳ ಮೇಲೆ ತೋರಿದ ಕ್ರೌರ್ಯ, ದೌರ್ಜನ್ಯಗಳಿಗೆ ಮಿತಿಯೇ ಉಳಿಯಲಿಲ್ಲ. ಕೃಷಿಯು ಪ್ರಬಲವಾಗುವುದರೊಂದಿಗೆ ಸಮುದಾಯ ಗಳ ಅಲೆಮಾರಿ ಬದುಕು ಸ್ಥಿರವಾಗಿ ಒಂದೆಡೆ ನಿಲ್ಲುವಂತಾಯಿತು. ಪುರುಷನೀಗ ಪ್ರಕೃತಿಯೊಂದಿಗೆ ಸಂಘರ್ಷಕ್ಕಿಳಿಯುವ ಅಗತ್ಯದಿಂದ ಹೊರತಾಗಿ, ಇಡೀ ಜಗತ್ತನ್ನು ತನ್ನಿಚ್ಛೆ ಯಂತೆ ಮಣಿಸಿ ಕುಣಿಸಲು ಸಮರ್ಥನಾದ. ಇದು ಸಮುದಾಯದಲ್ಲಿ ಲಿಂಗತಾರತಮ್ಯ ವ್ಯವಸ್ಥೆಯನ್ನು ಜಾರಿ

ಗೊಳಿಸಲು ಕೂಡ ಕಾರಣವಾಯಿತು. ಏಕೆಂದರೆ ನೆಲೆನಿಂತ ಪುರುಷನೀಗ ತನ್ನ ಪರಿಸರದ ಪ್ರತಿಯೊಂದರ ಮೇಲೂ ಒಡೆತನವನ್ನು ಕಲ್ಪಿಸತೊಡಗಿದ. ಹೆಣ್ಣು ಕೂಡ ಇದರಲ್ಲಿ ಆಸ್ತಿಯಾಗಿ ಹೋದಳು. ತಾಯ್ತನವನ್ನು ನಿಭಾಯಿಸುವ ಹೆಣ್ಣು ಅವನ ಪ್ರತಿಷ್ಠೆಯ ಸಂಕೇತವೂ ಆದಳು. ಇಷ್ಟಾದರೂ ವಿವಾಹ, ಕುಟುಂಬ ಎಂಬ ಸಂಸ್ಥೆಗಳು ಹುಟ್ಟಿಕೊಂಡದ್ದು ಎಷ್ಟೋ ತಡವಾಗಿಯೇ. ಈ ಸಂಸ್ಥೆಗಳು ಹುಟ್ಟುವವರೆಗೂ ಹೆಂಗಸಿನ ಬದುಕು ಸಮುದಾಯದ ಭಾಗವಾಗಿ ಒಟ್ಟಾರೆ ಅಧೀನ ಸ್ಥಿತಿಯದಾಗಿತ್ತಷ್ಟೆ. ಮಗುವಿನ ಹುಟ್ಟಿನಲ್ಲಿ ಗಂಡಿನ ಪಾತ್ರವಿದೆ ಎಂಬ ಅರಿವು ಇಲ್ಲದಿದ್ದಾಗ ತಾಯ್ತನಕ್ಕೆ ದೈವೀಶಕ್ತಿಯ ಗೌರವವೂ ದೊರಕಿತ್ತು. ಮಕ್ಕಳು ತಮ್ಮ ಪೂರ್ವಜರ ಪುನರವತಾರಗಳೆಂದು, ಅವರು ವಿವಿಧ ಮಾಧ್ಯಮಗಳಲ್ಲಿ ಹೆಂಗಸರ ದೇಹವನ್ನು ಪ್ರವೇಶಿಸಿ ಆಕಾರ ತಾಳುತ್ತಾರೆಂದೂ ಭಾವಿಸಲಾಗಿತ್ತು. ಹಾಗಾಗಿ ಸಮುದಾಯದ ವಾರಸುದಾರಿಕೆ ಹೆಣ್ಣಿನ ದಾಗಿತ್ತು. ಭೂಮಿ, ಮಕ್ಕಳು ಎಲ್ಲವೂ ಹೆಣ್ಣಿನದೇ ಆಗಿತ್ತು. ಮಕ್ಕಳನ್ನು ಹೆರುವ ಹೆಣ್ಣನ್ನು ಅದು ಹೇಗೋ ಸಮುದಾಯವು ಬೆಳೆ ಬೆಳೆಯುವ ಭೂಮಿಗೆ ಸಮೀಕರಿಸಿತು. ಬೆಳೆದ ಬೆಳೆಯ ಮೇಲೆ ಗಂಡಸು ತನ್ನ ಹಕ್ಕನ್ನು ಸ್ಥಾಪಿಸುತ್ತಿದ್ದರೂ, ಸೃಷ್ಟಿಯ ರಹಸ್ಯವನ್ನು ಭೇದಿಸಲಾರದೆ, ತನ್ನ ತಂತ್ರಕೌಶಲ್ಯದ ಶಕ್ತಿಯನ್ನು ಸಂಪೂರ್ಣವಾಗಿ ನೆಚ್ಚಲಾರದವನಾದ. ಆದರೆ ಭೂಮಿಯನ್ನು ಹೆಣ್ಣಿಗೆ ಸಮೀಕರಿಸಿದ ಚಿಂತನೆಯೇ ಮುಂದೆ ಅವನಿಗೆ ಸೃಷ್ಟಿಯಲ್ಲಿ ತನ್ನ ಪಾಲೇನು ಎಂಬುದನ್ನು ತಿಳಿಸಿತು. ಈಗ ಅವನಿಗೆ ಆ ಸೃಷ್ಟಿಯ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುವ ಅಗತ್ಯ ತೋರಿತು. ವಿವಾಹ ಸಂಸ್ಥೆಯ ಪರಿಕಲ್ಪನೆ ಈ ಮೂಲದ್ದು. ಇದು ವಂಶದ ಕಲ್ಪನೆಯಾಗಿ ವಿಸ್ತರಿಸಿ ಬೆಳೆದು, ತಾಯ್ತನ ಎಂಬುದು ಅಧೀನ ಸ್ಥಿತಿಗೆ ಇಳಿಯುವಂತಾಯಿತು.

### ಮಾತೃ ಪ್ರಧಾನತೆಯೆಂಬ ಕಟ್ಟುಕತೆ

ಈ ಕಥಾನಕವು ಮಾತೃಪ್ರಧಾನತೆಯ ಹಂತವೊಂದು ಮಾನವ ಚರಿತ್ರೆಯಲ್ಲಿ ಇತ್ತು ಎಂಬ ಕಲ್ಪನೆಗೆ ಕಾರಣವಾಗುತ್ತದೆ. ಇದನ್ನನುಸರಿಸಿಯೇ ಏಂಗೆಲ್ಸ್ 'ಮಾತೃಪ್ರಧಾನತೆಯು ಪಿತೃಪ್ರಧಾನತೆಗೆ ಎಡೆಕೊಟ್ಟ ಚಾರಿತ್ರಿಕ ಹಂತವೇ ಹೆಣ್ಣಿನ ಪಾಲಿನ ದೊಡ್ಡ ಸೋಲು, ದುರಂತ' ಎಂದು ವ್ಯಾಖ್ಯಾನಿಸಿದ. ಆದರೆ ಅಂಥಾ ಸುವರ್ಣ ಯುಗವೊಂದು ಹೆಣ್ಣಿನ ಪಾಲಿಗೆ ಎಂದೂ ಒದಗಲಿಲ್ಲ ಎಂದೇ ಬುವಾ ವಾದಿಸುತ್ತಾಳೆ. ಚರಿತ್ರೆಯ ವಿವಿಧ ಹಂತಗಳಲ್ಲಿ ಗಂಡು ಹೆಣ್ಣನ್ನು ಬಹು ಬಗೆಯ ನಿರೀಕ್ಷೆ, ಆತಂಕ, ತಲ್ಲಣ ಹಾಗೂ ಭಯಗಳಲ್ಲಿ ನೋಡುತ್ತಾ ಭೂಮಿ ಎಂದೋ, ತಾಯಿ ಎಂದೋ, ದೇವತೆಯೆಂದೋ ದೂರವಾಗಿಯೇ ಇರಿಸಿ ತನ್ನಿಂದ ಹೊರತಾದ ದ್ದೆಂದು ತಿಳಿದನೇ ಹೊರತು ತನ್ನ ಸಹಜೀವಿಯಾಗಿ ಎಂದೂ ಅವಳನ್ನು ನೋಡಲಿಲ್ಲ. ಸಮಾಜ ಎಂದರೆ ಎಂದಿದ್ದರೂ ಪುರುಷ ಎಂದೇ ಅರ್ಥ. ಪ್ರಾಚೀನ ಸಮಾಜಗಳನ್ನು ತೀವ್ರವಾಗಿ ಅಧ್ಯಯನ ಮಾಡಿದ ಲೆವಿಸ್ಟ್ರಾಸ್ 'ಸಾಮಾಜಿಕ ಅಧಿಕಾರ ಯಾವಾಗಲೂ ಪುರುಷನದೇ' ಎಂದೇ ಗ್ರಹಿಸಿದ್ದಾನೆ. ಇದನ್ನು ಸಮರ್ಥಿಸುವ ಮುಖ್ಯ ನಿದರ್ಶನವಾಗಿ ಮಾತೃವಂಶೀಯ ವ್ಯವಸ್ಥೆಯನ್ನು ನೋಡಬಹುದು. ಅಲ್ಲಿ ವಂಶದ ಮುಂದುವರಿಕೆ ಹೆಣ್ಣು ತಲೆಮಾರಿನಲ್ಲೇ ಆದರೂ, ಮನೆತನದ ಅಧಿಕಾರ ಮಾತ್ರ ಗಂಡು ಮಕ್ಕಳಲ್ಲೇ ನೆಲೆಯಾಗುತ್ತದೆ. ಅಲ್ಲಿ ಅವಳು ಅಧಿಕಾರದ ಮಾಧ್ಯಮವೇ

ಹೊರತು, ಅದರ ವಾರಸುದಾರಳಲ್ಲ. ಇತ್ತ ಆಸ್ತಿಪಾಸ್ತಿಯ ನಿರ್ವಹಣೆ ಸೋದರನಿಗೆ ಸಲ್ಲುತ್ತದೆ. ಅತ್ತ ಮಕ್ಕಳ ಹೊಣೆ ಗಂಡನಿಗೆ ಸಲ್ಲುತ್ತದೆ. ಸೋದರನೇನೂ ಸದಾಕಾಲ ಸೋದರಿಯ ಪರವಾಗಿ ರುವುದಿಲ್ಲ. ಸಮಯ ಬಂದರೆ ಅವನು ತಂದೆಯಾಗಿ ತನ್ನ ಸ್ಥಾನವನ್ನು ನಿರೂಪಿಸಲು ಬಯಸುತ್ತಾನೆಯೇ ಹೊರತು ಸೋದರನಾಗಿ ಅಲ್ಲ.

ಹಾಗಾಗಿಯೇ ನಾಗರಿಕತೆಯ ವಿಕಾಸದಲ್ಲಿ ಮಾತೃವಂಶೀಯತೆಗೆ ಉಳಿಗಾಲವಿಲ್ಲವಾದದ್ದು. ಜಗನ್ಮಾತೆಯು ಪುರುಷೋತ್ತಮನಿಗೆ ಶರಣಾಗಬೇಕಾಯಿತು. ಪಿತೃಪ್ರಧಾನ ವ್ಯವಸ್ಥೆಯು ಆಕಸ್ಮಿಕ ವಾಗಿ ನೆಲೆಯೂರಿದ್ದೂ ಅಲ್ಲ, ಗಂಡಸಿನ ತೀವ್ರ ಕ್ರಾಂತಿಯಿಂದ ಹುಟ್ಟಿಕೊಂಡದ್ದೂ ಅಲ್ಲ. ಮಾನವ ಜನಾಂಗದಲ್ಲಿ ಗಂಡಸು ಹುಟ್ಟಿನಿಂದಲೇ ಹೆಣ್ಣಿಗಿಂತ ಅನುಕೂಲಕರವಾಗಿ ದೈಹಿಕ ರಚನೆಯನ್ನು ಪಡೆದದ್ದೇ ಕಾರಣವಾಗಿ ತನ್ನನ್ನು ಉನ್ನತನೆಂದು ಸ್ಥಾಪಿಸಿಕೊಳ್ಳಲು ಸಾಧ್ಯವಾಯಿತು. ತಾನೇ ಪ್ರಧಾನ ಸೃಷ್ಟಿಯೆಂದೂ, ಹೆಣ್ಣು ಒಂದು ಪರಿಕರವೆಂದೂ ಹೇಳುತ್ತಾ ಅವಳನ್ನು ಗುಲಾಮಳನ್ನಾಗಿ ಅಥವಾ ಒಂದು ಗೊಂಬೆಯಾಗಿ ನಡೆಸಿಕೊಳ್ಳುವಲ್ಲಿ ಯಶಸ್ವಿಯಾದ. ತನ್ನ ಪಾತ್ರವನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ, ಸಂದರ್ಭಗಳು ಅವಳಿಗೆಂದೂ ಒದಗಲೇ ಇಲ್ಲ. ಸೂತ್ರಧಾರನಾಗಿ, ನಿರ್ದೇಶಕನಾಗಿ ಗಂಡು ಹೇಳಿದಂತೆ ಮಾತ್ರವೇ ಅವಳು ಪಾತ್ರ ನಿರ್ವಹಿಸುತ್ತಿದ್ದಾಳೆ. ಬಹುಶಃ ಉತ್ಪಾದಕ ಹಂತದಲ್ಲಿ ಭಾಗವಹಿಸುವುದು ಅವಳಿಗೆ ಸಾಧ್ಯವಾಗಿ ದ್ದಿದ್ದರೆ, ಪುರುಷನ ಸಹಜೀವಿಯಾಗಿ ತನ್ನನ್ನು ಸ್ಥಾಪಿಸಿಕೊಳ್ಳಲು ಅವಳಿಗೆ ಸಾಧ್ಯವಾಗುತ್ತಿತ್ತೋ ಏನೋ. ಮಾನವರು ಎಂದರೆ ಸ್ತ್ರೀಯರು ಒಳಗೊಂಡ ವರ್ಗ ಎಂಬ ಸಹಜತೆಯನ್ನು ನಿರೀಕ್ಷಿಸ ಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ಅವನು ಪ್ರಕೃತಿಯನ್ನು ಆಕ್ರಮಿಸಿ ಒಡೆತನವನ್ನು ಸ್ಥಾಪಿಸಿದಂತೆ, ಹೆಣ್ಣನ್ನೂ ಆಕ್ರಮಿಸಿ ಒಡೆತನವನ್ನು ಸ್ಥಾಪಿಸಿದ. ಅವಳನ್ನು ಉಪಜೀವಿಯಾಗಿ ಕಂಡಂದಿನಿಂದಲೇ ಹೆಣ್ಣು ಗಂಡಿನ ಸಂಬಂಧಗಳು ಸಹಜತೆಯನ್ನು ನೀಗಿಕೊಂಡು ಬಿಟ್ಟವು. ಇದು ಅವಳಲ್ಲಿ ನೋವು, ಹಿಂಸೆ, ಅಪಮಾನಗಳನ್ನು ತುಂಬಿತಾದರೆ, ಅವನಲ್ಲಿ ಹೆದರಿಕೆ, ಅಪಾಯ, ಆತಂಕಗಳನ್ನು ತುಂಬಿಸಿತು. ಅವನಲ್ಲಿ ಅಧಿಕಾರವಿದೆ. ಹಾಗಾಗಿ ಅವನೇ ಹುಟ್ಟು ಹಾಕಿದ ಧರ್ಮ, ಕಾನೂನು, ನಿಯಮಗಳು ಅವಳನ್ನು ನಿರ್ದಾಕ್ಷಿಣ್ಯವಾಗಿ ಹೀನಾಯವಾಗಿ ನಡೆಸಿಕೊಳ್ಳುತ್ತವೆ. ಪುರಾಣ ಐತಿಹ್ಯಗಳನ್ನು ಮಾನವರು ಸೃಷ್ಟಿಸಿಕೊಳ್ಳ ತೊಡಗಿದ ಕಾಲಕ್ಕಾಗಲೇ ಪಿತೃಪ್ರಧಾನತೆ ಸ್ಥಿರವಾಗಿದ್ದದ್ದು ಖಚಿತ. ಹಾಗಾಗಿಯೇ ಹೆಣ್ಣನ್ನು ಕುರಿತು ಅವನು ಕಲ್ಪಿಸಿದ ಮಿಥ್‌ಗಳೆಲ್ಲವೂ ಅವನೊಳಗಿನ ಹೆದರಿಕೆ, ಅಪಾಯ, ಆತಂಕಗಳನ್ನೇ ತುಂಬಿಕೊಂಡಿವೆ. ಚರಿತ್ರೆಯುದ್ದಕ್ಕೂ ಅವಳನ್ನೂ ಒಳಗೊಂಡಂತೆ ಸಕಲ ಚರಾಚರವನ್ನೂ ತನ್ನ ನಿಯಂತ್ರಣಕ್ಕೆ ಒಳಪಡಿಸಬೇಕೆಂಬ ಅವನ ಕನಸುಗಳೇ ಅಲ್ಲಿ ಪ್ರಧಾನವಾಗಿವೆ. ಆದರೂ ತನ್ನ ಕನಸುಗಳು ಸಾಕಾರಗೊಳ್ಳಬೇಕೆಂದರೆ ಹೆಣ್ಣಿನ ಅಸ್ತಿತ್ವದ ಅಗತ್ಯವಿದೆ ಎಂಬುದೂ ಅವನಿಗೆ ತಿಳಿದಿದೆ. ಸಮಾಜದಲ್ಲಿ ಅವಳಿಗೊಂದು ಸಮಗ್ರ ಸ್ಥಾನ ನೀಡುವ ಅಗತ್ಯವೂ ಇದೆ. ತನ್ನ ನಿಯಮಗಳನ್ನು ಅವಳು ಒಪ್ಪಿಕೊಂಡು ಬಾಳುವಷ್ಟು ಕಾಲವೂ ಅವಳಿಗೆ ಇಂಥಾ ಸ್ಥಾನವನ್ನು ನೀಡಲು ಅವನದೇನೂ ಅಭ್ಯಂತರವಿಲ್ಲ.

ಚರಿತ್ರೆಯು ಒದಗಿಸಿರುವ ಈ ಹಿನ್ನೆಲೆಯಲ್ಲಿಯೇ ಅವಳ ಸ್ಥಿತಿಗತಿಗಳನ್ನು ಕಲ್ಪಿಸುವುದು ಸಾಧ್ಯ. ನಮ್ಮ ಸಮಕಾಲೀನ ಸಂದರ್ಭದವರೆಗೂ ಅವಳು ಗಂಡಿನ ಆಶಯಗಳಿಗೆ ಪೂರಕವಾಗಿಯೇ ಕಾಣಿಸಿಕೊಳ್ಳುತ್ತಿದ್ದಾಳೆ. ಅವನಿಗೆ ಈಗ ಇರುವ ಒಂದಿಷ್ಟು ಗೊಂದಲವೆಂದರೆ, ಹೆಂಡತಿಯಾದವಳನ್ನು ಏಕಕಾಲಕ್ಕೆ ಗುಲಾಮಳಂತೆಯೂ, ಸಂಗಾತಿಯಂತೆಯೂ ಕಾಣುವುದು ಹೇಗೆ ಎಂಬುದು.



# ಸಮಕಾಲೀನ : ಮಹಿಳಾ ಸಾಹಿತ್ಯ

## ಮಹಿಳಾ ಸಾಹಿತ್ಯವನ್ನು ಕುರಿತ ಚರ್ಚೆಗೊಂದು ಹಿನ್ನೆಲೆ

(ಸಂ)

ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನಗಳು ಆರಂಭಗೊಳ್ಳುವುದೇ ಮಹಿಳಾ ಬದುಕಿನ ಅಸ್ತಿತ್ವದ ಹುಡುಕಾಟದೊಂದಿಗೆ. ಅವಳ ಚರಿತ್ರೆಯ ಶೋಧ ಇದಕ್ಕೆ ಒದಗಿ ಬರುವ ಒಂದು ಮುಖ್ಯ ಪರಿಕರ. ಈ ಸಂಚಿಕೆಯಲ್ಲಿ ಮಹಿಳಾ ಸಾಹಿತ್ಯವನ್ನು ಕುರಿತ ಇಂಥಾ ಒಂದು ಶೋಧವನ್ನು ಮಾಡುವ ಉದ್ದೇಶವಿದೆ. ಸಾಹಿತ್ಯ ಚರಿತ್ರೆಯ ಅಧ್ಯಯನ ಕೇವಲ ಭೂತಕಾಲದ ಮಾಹಿತಿಗಳನ್ನು ನಿರ್ಮಿಸುವಷ್ಟಕ್ಕೆ ನಿಲ್ಲದೆ, ಇಂದಿನ ಮಹಿಳಾ ಸಾಹಿತ್ಯದ ರೂಪುರೇಷಗಳನ್ನು, ಬಲಾಬಲಗಳನ್ನು ಹಾಗೂ ಸಾಮರ್ಥ್ಯ ಸಾಧ್ಯತೆಗಳನ್ನು ಅರಿಯುವಲ್ಲಿ ನೆರವಾಗುವ ಪರಿಕರವಾಗಬೇಕೆಂಬುದು ನಮ್ಮ ಮುಖ್ಯ ಆಶಯ. ಈ ಹಿನ್ನೆಲೆಯಲ್ಲಿ ಮಹಿಳಾ ಅಧ್ಯಯನದ ಈ ಸಂಚಿಕೆಯಲ್ಲಿ ಸಮಕಾಲೀನ ಎಂಬ ಅಂಕಣದಲ್ಲಿ ಚರ್ಚಿಸಲು ಮಹಿಳಾ ಸಾಹಿತ್ಯವನ್ನು ಕೇಂದ್ರ ವಿಷಯವನ್ನಾಗಿ ಆಯ್ಕೆ ಮಾಡಿದ್ದೇವೆ.

ನಾಲ್ಕು ಶೀರ್ಷಿಕೆಗಳಲ್ಲಿ ಈ ಚರ್ಚೆ ಬೆಳೆಯಬಹುದೆಂದು ಆಲೋಚಿಸಿದ್ದೇವೆ.

೧. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯದ ಪರಿಗಣನೆ

೨. ಕನ್ನಡ ಸಾಹಿತ್ಯ ವಿಮರ್ಶೆಗಳ ಲಿಂಗರಾಜಕಾರಣ

೩. ಮಹಿಳಾ ಸಾಹಿತ್ಯದ ಮೇಲೆ ಸಾಂಪ್ರದಾಯಿಕ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಗಳ ಪ್ರಭಾವ ಮತ್ತು ಪರಿಣಾಮಗಳು

೪. ಸಾಹಿತ್ಯ ಚರಿತ್ರೆಯ ಪುನಾರಚನೆಯ ಅಗತ್ಯ

ಮೇಲಿನ ನಾಲ್ಕು ಸಂಗತಿಗಳೂ ಪರಸ್ಪರ ಸಂಬಂಧಿತವಾದವು. ವಿದ್ವತ್ತಿನ ವಲಯದಲ್ಲಿ ವಿವಿಧ ದೃಷ್ಟಿಕೋನಗಳ ಚರ್ಚೆಗಳನ್ನು ಈ ತಲೆಬರಹಗಳು ಬೆಳೆಸಬಹುದು. ಆದರೆ ನಮ್ಮ ಉದ್ದೇಶ ಇದಕ್ಕಿಂತ ಸ್ವಲ್ಪ ಭಿನ್ನವಾದುದಾಗಿದೆ. ಈ ಮೊದಲೇ ಹೇಳಿದಂತೆ ಮಹಿಳಾ ಸಾಹಿತ್ಯದ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವ ಒಂದು ಪರಿಕರವಾಗಿ, ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಯ ಬರಹಗಳನ್ನು ಪುನರವಲೋಕನ ಮಾಡಬಹುದೇ ಎಂಬ ಸಾಧ್ಯತೆಯನ್ನು ಶೋಧಿಸಲು ನಾವು ಹೊರಟಿದ್ದೇವೆ. ಸಾಹಿತ್ಯದ ವಿದ್ಯಾರ್ಥಿಗಳಾದವರಿಗೆ, ಅದರಲ್ಲೂ ಸಾಂಪ್ರದಾಯಿಕ ವಿಧಿವಿಧಾನಗಳನ್ನು ಪ್ರಶ್ನಿಸಿ ವಿಶ್ಲೇಷಣೆಗೆ ಒಳಗು ಮಾಡಬೇಕೆನ್ನುವ ಆಸಕ್ತರಿಗೆ,

ನಮ್ಮ ಸಾಹಿತ್ಯ ಚರಿತ್ರೆಯ ಬರಹಗಳನ್ನು ಓದುವಾಗ ಅನೇಕ ಪ್ರಶ್ನೆಗಳು ಬರುವುದು ಸಹಜ. ಸಮಾಜದ ಅಂಚಿಗೆ ಒತ್ತರಿಸಲಾದ ಸಮುದಾಯಗಳಿಗೆ ಈ ಪ್ರಶ್ನೆಗಳು ಹೆಚ್ಚಾಗಿ ಅನ್ವಯವಾಗುತ್ತವೆ. ಸಾಹಿತ್ಯ ಚರಿತ್ರೆಯ ಬರಹವನ್ನು ಕೇವಲ ವಸ್ತುನಿಷ್ಠವೆಂದು ಕಾಣುವುದು ಕಷ್ಟವಾದದ್ದರಿಂದಲೇ, ಈ ಬರಹಗಳನ್ನು ಪ್ರಭಾವಿಸಿದ ಅಂಶಗಳಾವುವು ಎಂಬ ಚರ್ಚೆ ಈಗಾಗಲೇ ಸಾಕಷ್ಟು ನಡೆದಿದೆ. ಹಾಗೆಂದೇ ಚರಿತ್ರೆ ಎಂಬುದು ಇಲ್ಲ, ಚರಿತ್ರೆಗಳು ಇವೆ ಎಂಬ ಮಾತೂ ಇದೆ. ಸಾಹಿತ್ಯ ಚರಿತ್ರೆಯ ಬರವಣಿಗೆಯಲ್ಲೂ ಈ ಶ್ರೇಣೀಕರಣ ಮತ್ತು ಆಯ್ಕೆಯ ರಾಜಕಾರಣ ತೀವ್ರವಾಗಿ ನಡೆದಿದೆ ಎಂಬುದನ್ನು ಸಾಬೀತು ಮಾಡಲು ವಿಶೇಷ ಸಂಶೋಧನೆಗೇನೂ ತೊಡಗಬೇಕಿಲ್ಲ. ಬದಲಿಗೆ, ನಮ್ಮ ದೃಷ್ಟಿಕೋನವಗಳನ್ನು ಒಂದಿಷ್ಟು ಸೂಕ್ಷ್ಮಗೊಳಿಸಿಕೊಳ್ಳಬೇಕಾಗಿದೆ ಅಷ್ಟೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಮೂದಿತವಾಗಿರುವ ಮಾಹಿತಿಗಳನ್ನು ಒಪ್ಪಿದರೆ ಮಹಿಳಾ ಸಾಹಿತ್ಯ ಪ್ರಮಾಣದಲ್ಲಾಗಲೀ, ಗುಣದಲ್ಲಾಗಲೀ ಪುರುಷ ಸಾಹಿತ್ಯಕ್ಕೆ ಎಣೆಯಾಗುವ ಮಾತೇ ಇಲ್ಲ. ಪ್ರಾಚೀನ ಕಾಲದ ಅಕ್ಕಮಹಾದೇವಿಯಿಂದ ಸಮಕಾಲೀನದವರೆಗಿನ ಎಲ್ಲ ಲೇಖಕಿಯರನ್ನು ಪರಿಗಣಿಸಿದರೂ ಬೆರಳೆಣಿಕೆಗೆ ದಕ್ಕುವಷ್ಟು ಕೂಡ ಶ್ರೇಷ್ಠ ಲೇಖಕಿಯರಿಲ್ಲ. ಒಂದು ವೇಳೆ, ಈ ಸಂಗತಿಯೇ ನಿಜ ಎನ್ನುವುದಾದರೂ, ಹೀಗೇಕಾಯಿತು ಎಂಬ ಪ್ರಶ್ನೆ ಮುಖ್ಯವಾಗುತ್ತದೆ. ಏಕೆಂದರೆ, ಮೊದಲೇ ಹೇಳಿದಂತೆ ಚರಿತ್ರೆಯ ಬರವಣಿಗೆ ಎನ್ನುವುದು ಒಂದು ಸಾಂಸ್ಕೃತಿಕ ರಾಜಕಾರಣ. ಮಹಿಳೆಯ ಅಸ್ತಿತ್ವದ ಶೋಧದ ಮಾತಿಗೆ ಬಂದರೆ ಇಡೀ ಈ ಸಮಾಜ ವ್ಯವಸ್ಥೆಯೇ ಒಂದು ರಾಜಕಾರಣ. ಚರಿತ್ರೆಯಿರಲಿ, ಸಾಹಿತ್ಯ ಚರಿತ್ರೆಯಿರಲಿ ಇಲ್ಲೂ ಕೂಡ ಈ ಲಿಂಗರಾಜಕಾರಣದ ಬೇರುಗಳೇ ಹರಡಿವೆ ಎಂಬುದನ್ನು ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರು ಗಮನಿಸಿರುವ ಒಂದು ಮುಖ್ಯ ಅಂಶ.

ಹಾಗೆ ನೋಡಿದರೆ ಚರಿತ್ರೆಯನ್ನು ಕಾಲಮಾನದ ರೇಖಾತ್ಮಕ ಪರಿಗಣನೆಯಲ್ಲಿ ಅಥವಾ ಶ್ರೇಷ್ಠತೆಯ ತಕ್ಕಡಿಯಲ್ಲಿ ಅಳೆಯುವ ವಿಧಾನವೇ ದಾರಿ ತಪ್ಪಿಸುವ ರೀತಿಯದು. ವಿಜ್ಞಾನಿಗಳು ತಳಿಶಾಸ್ತ್ರದಲ್ಲಿ ಒಂದು ವಿಧಾನವನ್ನು ಕಲ್ಪಿಸಿದ್ದಾರೆ. ಶ್ರೇಷ್ಠತೆಯ ಆಯ್ಕೆ ಎಂಬುದು ಇಲ್ಲಿನ ಸಿದ್ಧಾಂತ. ಜಗತ್ತಿನಲ್ಲಿ ಶ್ರೇಷ್ಠವಾದದ್ದನ್ನಷ್ಟೇ ಉಳಿಸಿಕೊಂಡು ಮತ್ತೆಲ್ಲವನ್ನು ನಾಶಗೊಳಿಸಿಬಿಡುವ ಭ್ರಾಂತಿಯದು. ಸ್ವತಃ ನಿಸರ್ಗವೂ ಈ ನಿಯಮವನ್ನು ಸ್ವಲ್ಪಮಟ್ಟಿಗೆ ಜಾರಿಗೊಳಿಸಿದೆ. ಆದರೆ, ಅಲ್ಲಿ ಜೀವಜಗತ್ತಿನ ಯಾವ ಒಂದು ಸಂಗತಿಯೂ ಇನ್ನೊಂದು ಸಂಗತಿಯನ್ನು ನಾಶಗೊಳಿಸಲಾರದು. ಬದಲಿಗೆ ಜೀವಿಗೆ ತಾನು ಬದುಕಿ ಉಳಿಯುವ ಪ್ರತಿಯೊಂದು ಸಾಧ್ಯತೆಯನ್ನು ಪ್ರಯತ್ನಿಸಲು ಅವಕಾಶ ನೀಡಲಾಗುತ್ತದೆ. ಅಂಥಾ ಯಾವ ಸಾಧ್ಯತೆಯನ್ನೂ ಕಂಡುಕೊಳ್ಳಲು ಅಸಮರ್ಥವಾದ ಜೀವಿ ಮಾತ್ರ ಕ್ರಮೇಣವಾಗಿ ಈ ಲೋಕದಿಂದ ನಿರ್ಗಮಿಸುತ್ತದೆ. ಆದರೆ ಸಾಮಾಜಿಕ ರಾಜಕಾರಣದ ವಿಧಾನದಲ್ಲಿ ಶಕ್ತಿವಂತರು ದುರ್ಬಲರನ್ನು ನಿರ್ಗಮಿಸುವಂತೆ ಒತ್ತಾಯವನ್ನು ಹೇರುತ್ತಾರೆ. ವಿವಿಧ ತಂತ್ರಗಳನ್ನು ಅದಕ್ಕಾಗಿ ರೂಪಿಸುತ್ತಾರೆ. ಚರಿತ್ರೆಯ ಬರವಣಿಗೆಗಳೆಂದರೆ ಜ್ಞಾನಕ್ಷೇತ್ರವು ರೂಪಿಸಿದ ಇಂಥಾ ಒಂದು ತಂತ್ರ. ಇಲ್ಲಿ ದುರ್ಬಲ

ಸಮುದಾಯಗಳನ್ನು ಬೌದ್ಧಿಕವಾಗಿ, ಮಾನಸಿಕವಾಗಿ ಕೀಳರಿಮೆಗೆ ಗುರಿಮಾಡುವ ಕುತಂತ್ರಗಳು ಬೇಕಾದಷ್ಟು ಪ್ರಯೋಗಗೊಳ್ಳುತ್ತವೆ. ಪರಿಗಣನೆಗೆ ತಾರದೆ ಇರುವುದು, ಪರಿಗಣಿಸಲೇ ಬೇಕಾದ ಒತ್ತಾಯ ಬಂದಾಗ ಶ್ರೇಷ್ಠತೆಯ ಮಾಪನದಲ್ಲಿ ತೂಗಿ ನಿರಾಕರಿಸುವುದು ಮುಂತಾದ ತಂತ್ರಗಳಿವೆ. ಸಹಜವಾಗಿ ಇದು ಆ ದುರ್ಬಲ ಸಮುದಾಯಗಳ ಮೇಲೆ ಕೆಟ್ಟ ಪರಿಣಾಮಗಳನ್ನು ಬೀರಬಹುದು. ಹಾಗಾಗಿ, ಈ ಚರಿತ್ರೆಯ ಬರವಣಿಗೆಗಳನ್ನು ಪುನರವ ಲೋಕಿಸಿ ಅರ್ಥ ಮಾಡಿಕೊಳ್ಳಲು ಯತ್ನಿಸುವುದು ಜನಸಮುದಾಯಗಳ ಅಳಿವು ಉಳಿವಿನ ಪ್ರಶ್ನೆಯೂ ಹೌದು.

ಸಮಾಜ ವ್ಯವಸ್ಥೆಯ ಲಿಂಗರಾಜಕಾರಣದಲ್ಲಿ ಮಹಿಳೆಯ ಅಸ್ತಿತ್ವದ ಸಮಸ್ಯೆಗೆ ಪರಿಹಾರವನ್ನು ಕೂಡ ಈ ಮೂಲದಿಂದಲೇ ಶೋಧಿಸುವುದು ಉಪಯುಕ್ತವಾಗುತ್ತದೆ. ಅದರ ಒಂದು ಎಳೆಯಾಗಿ ನಾವು ನಮ್ಮ ಸಾಂಪ್ರದಾಯಿಕ ಕನ್ನಡ ಸಾಹಿತ್ಯ ಚರಿತ್ರೆಯ ಪುನರವಲೋಕನ ಮಾಡುವ ಈ ಕ್ರಮವನ್ನು ಹಮ್ಮಿಕೊಂಡಿದ್ದೇವೆ. ಇಲ್ಲಿನ ಪ್ರಸ್ತಾವನೆ ತೀರಾ ದೀರ್ಘವಾಯಿತೆಂಬುದನ್ನು ತಿಳಿದೂ ಕೂಡ, ತಾವು ಬೇಸರಿಸದೆ ತಮಗೆ ಬರೆಯಲು ಕೋರಿರುವ ಶೀರ್ಷಿಕೆಯನ್ನು ಕುರಿತು ಈ ಹಿನ್ನೆಲೆಯಲ್ಲಿ ಚಿಂತಿಸಬೇಕೆಂದು ವಿನಮ್ರಳಾಗಿ ಕೇಳುತ್ತಿದ್ದೇನೆ. ಈ ಅಂಕಣದ ಚರ್ಚೆ ಪರಸ್ಪರ ಪೂರಕವಾಗಿ ವಿಸ್ತರಿಸಬೇಕೇ ಹೊರತು, ಪ್ರತ್ಯೇಕ ಅನಿಸಿಕೆಗಳಾಗಿ ನಿಲ್ಲುವಂತವಾಗಬಾರದು ಎಂಬ ಉದ್ದೇಶದಿಂದಲೂ ಇಷ್ಟೊಂದು ವಿಸ್ತಾರವಾಗಿ ನಿಮ್ಮೊಂದಿಗೆ ಮಾತನಾಡಬೇಕಾಯಿತು. ಇಡೀ ಚರ್ಚೆ ಒಂದು ತಂಡದ ಕೆಲಸವೆಂಬಂತೆ ಆದರೆ ಮಾತ್ರ ಒಟ್ಟು ನಿರೀಕ್ಷೆಗೆ ಒಂದು ಸುಸಂಬದ್ಧತೆ ಒದಗುತ್ತದೆ.

ನಾಲ್ಕು ಶೀರ್ಷಿಕೆಗಳನ್ನು ಸೂಚಿಸಿರುವ ಕ್ರಮದಲ್ಲಿಯೇ ಒಂದು ಬೆಳವಣಿಗೆ ಇರುವುದು ಗಮನಕ್ಕೆ ಬರುತ್ತದೆ. ಮೊದಲಿನದರಲ್ಲಿ, ನಮ್ಮ ಸಾಹಿತ್ಯ ಚರಿತ್ರೆಕಾರರು ತಮ್ಮ ಅಧ್ಯಯನದಲ್ಲಿ ಎಷ್ಟು ಮಹಿಳೆಯರನ್ನು ಪರಿಗಣಿಸಿದ್ದಾರೆ ಎಂಬುದಕ್ಕಿಂತ, ಪರಿಗಣನೆಗೆ ತೆಗೆದುಕೊಳ್ಳದ ಮಹಿಳಾ ಸಾಹಿತ್ಯ ಯಾವುದು, ಎಷ್ಟು, ಏಕೆ ಎಂಬಂಥಾ ಪ್ರಶ್ನೆಗಳು ಮುಖ್ಯ. ಜೊತೆಗೆ ಪರಿಗಣಿಸಲಾದಷ್ಟು ಕೂಡ ಹೇಗೆ ಪರಿಗಣಿತವಾಗಿದೆ ಎಂಬುದೂ ಮುಖ್ಯ. ಇಂಥಾ ಪ್ರಶ್ನೆಗಳು ಚರಿತ್ರೆಯ ಬರವಣಿಗೆಗಳಿಗಷ್ಟೇ ಅಲ್ಲದೆ, ಪ್ರಸ್ತುತ ಸಾಹಿತ್ಯ ಚರ್ಚೆಗೂ ಅನ್ವಯವಾಗುತ್ತಲೇ ಇದೆ. ಎರಡನೆಯ ಭಾಗ ವಿಮರ್ಶೆಯ ಲಿಂಗರಾಜಕಾರಣವನ್ನು ಕುರಿತದ್ದು. ಬಹುಮಟ್ಟಿಗೆ ಇದು ಮೊದಲ ಪ್ರಶ್ನೆಯ ಮುಂದುವರಿಕೆ. ಮಹಿಳಾ ಸಾಹಿತ್ಯವನ್ನು ನಮ್ಮ ವಿಮರ್ಶಕರು ಹೇಗೆ ಪರಿಗಣಿಸಿದ್ದಾರೆ ಎಂಬ ಅವಲೋಕನ. ವಿಮರ್ಶೆಯ ಮಾನದಂಡಗಳು ಯಾವುವು. ಪುರುಷ ಚಿಂತನೆಗೆ ಅನುಗುಣವಾದ ಈ ಮಾಪನಗಳನ್ನು ಮಹಿಳಾ ಸಾಹಿತ್ಯಕ್ಕೂ ಯಾವ ಪ್ರಶ್ನೆಗಳೂ ಇಲ್ಲದೇ ಬಳಸುವುದು ಎಷ್ಟು ಉಚಿತ, ಮಹಿಳಾ ಸಾಹಿತ್ಯಕ್ಕೆ ಪ್ರತ್ಯೇಕ ಮಾನದಂಡಗಳು ಎಂಬುದಕ್ಕಿಂತ ವಿಭಿನ್ನ ಚಿಂತನೆ ಅಗತ್ಯವಿಲ್ಲವೇ, ವಿಮರ್ಶೆಯೂ ಲಿಂಗರಾಜಕಾರಣವನ್ನು ಮಾಡುತ್ತಿದೆಯೇ ಎಂಬಂತಹ ಅನೇಕ ಪ್ರಶ್ನೆಗಳನ್ನು ಇಲ್ಲಿ ಚರ್ಚಿಸುವ ಸಾಧ್ಯತೆ ಇದೆ. ಮೂರನೆಯದು, ಸ್ವತಃ ಲೇಖಕಿಯರು ಈ ಬಗೆಯ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದು. ಕೇವಲ ತಾತ್ತ್ವಿಕ ಚರ್ಚೆಗಳಾಗಿ ಅವರು ಹೇಳಿರ

ಬಹುದಾದ ಮಾತುಗಳನ್ನಷ್ಟೇ ಅಲ್ಲದೆ, ನೇರವಾಗಿ ಲೇಖಕಿಯರ ಸಾಹಿತ್ಯದಲ್ಲಿ ಕಂಡುಬರುವ ಪ್ರಭಾವ ಪರಿಣಾಮಗಳನ್ನು ಗಮನಿಸಿ ಈ ವಿಶ್ಲೇಷಣೆಯನ್ನು ಕೈಗೊಳ್ಳುವುದು ಸಾಧ್ಯ. ಇನ್ನು ಕೊನೆಯದಾಗಿ, ಈ ಪರಿಸ್ಥಿತಿಯಲ್ಲಿ ಸಾಂಪ್ರದಾಯಿಕ ಸಾಹಿತ್ಯ ಚರಿತ್ರೆಯನ್ನು ಮಹಿಳಾ ಅಧ್ಯಯನವಾದಿಗಳು ಹೇಗೆ ಸ್ವೀಕರಿಸಬೇಕು ಎಂಬ ಪ್ರಶ್ನೆ. ಇರುವ ಚಿಂತನೆಗಳಲ್ಲೇ ಅಗತ್ಯದ ಮಾರ್ಪಾಡುಗಳನ್ನು ಮಾಡುವುದು ಒಂದು ವಿಧಾನ. ಅಂದರೆ ಬಿಟ್ಟುಹೋದ ಕಂದಕಗಳನ್ನು ತುಂಬುವ ರಿಪೇರಿ ಕೆಲಸ. ಇನ್ನೊಂದು ವಿಧಾನವೆಂದರೆ ನಮ್ಮ ಅಗತ್ಯದ ಚರಿತ್ರೆಯನ್ನು ನಾವೇ ಕಟ್ಟಿಕೊಳ್ಳುವ ವಿಧಾನ. ಈ ಎರಡೂ ಕ್ರಮಗಳೂ ತಮ್ಮೊಳಗೇ ಮತ್ತಷ್ಟು ಪ್ರಶ್ನೆಗಳನ್ನು ಹುಟ್ಟುಹಾಕಬಹುದು. ಕಂದಕಗಳನ್ನು ತುಂಬುವ ವಿಧಾನವೆಂದರೆ ರಾಜಿ ಮನೋಭಾವದ್ದು. ಇದರಲ್ಲಿ ಮಹಿಳಾ ಸಮುದಾಯದ ರಾಜಿ ಮನೋಭಾವಕ್ಕೆ ಸಾಂಪ್ರದಾಯಿಕ ಚಿಂತನೆ ಹೇಗೆ ಸ್ಪಂದಿಸಬಹುದು ಎಂಬ ಪ್ರಶ್ನೆ ಇದ್ದೇ ಇದೆ. ನಿರ್ಲಕ್ಷ್ಯ, ಪರಿಹಾಸ, ಗೇಲಿ ಅಥವಾ ಆಟಕ್ಕುಂಟು ಲೆಕ್ಕಕ್ಕಿಲ್ಲ ಎಂಬ ಭಾವಗಳು ಬರುವ ಸಾಧ್ಯತೆಯನ್ನು ತಳ್ಳಿಹಾಕಲಾಗದು. ಎರಡನೆಯ ವಿಧಾನ ಪ್ರತ್ಯೇಕತೆಯಲ್ಲಿ ಅನನ್ಯತೆಯನ್ನು ಉಳಿಸಿಕೊಳ್ಳುವ ಭಾವ. ಒಂದು ರೀತಿಯಿಂದ ಇದು ಸತ್ಯದ ನಿರೂಪಣೆ ಮುಖ್ಯವೇ ಹೊರತು ಇತರರು ಇದನ್ನು ಹೇಗೆ ಭಾವಿಸುತ್ತಾರೆ ಎಂಬುದು ಮುಖ್ಯವಲ್ಲ ಎಂಬ ಧೋರಣೆಯಿದು. ಈ ಮಾತು ನಿಜವೇ ಆದರೂ, ರಾಜಕಾರಣದ ಆಟದಲ್ಲಿ ಬುದ್ಧಿವಂತಿಕೆಯ ನಡೆಯಂತೂ ಅಲ್ಲ. ಮಹಿಳಾ ಸಮುದಾಯವು ಸಾಮಾಜಿಕ ನೆಲೆಯಲ್ಲಿ ಇಂಥಾ ಪ್ರತ್ಯೇಕತೆಯ ತಂತ್ರವನ್ನು ಒಪ್ಪಿಕೊಳ್ಳುವುದು ಅಪಾಯಕಾರಿ. ಈ ರಾಜಕಾರಣವನ್ನು ಅರ್ಥ ಮಾಡಿಕೊಂಡೇ ಅನನ್ಯತೆಯ ಸಾಧ್ಯತೆಗಳನ್ನು ಹುಡುಕುವುದು ನಮಗೆ ಅನಿವಾರ್ಯ ಎಂಬುದನ್ನು ನಾವು ಕಡೆಗಣಿಸಲಾಗದು.

ಹಾಗಾದರೆ, ಮಹಿಳಾ ಸಾಹಿತ್ಯವು ಯಾವ ರಾಜಕಾರಣವನ್ನು ಒಪ್ಪಿಕೊಳ್ಳಬೇಕು? ಅನನ್ಯತೆಯ ಹೆಸರಿನಲ್ಲಿ ನಮ್ಮ ಪಾಡಿಗೆ ನಾವು ಎಂಬಂತೆ ಇರಲಾಗದು ಎಂಬುದಂತೂ ಖಂಡಿತ. ಹಾಗೆಂದು, ಒಟ್ಟು ಸಾಹಿತ್ಯ ಚರಿತ್ರೆ, ವಿಮರ್ಶೆಗಳಲ್ಲಿ ಮಹಿಳಾ ಸಾಹಿತ್ಯಕ್ಕೆ ಒಂದು ಅವಕಾಶ, ಸ್ಥಾನಮಾನಗಳಿಗಾಗಿ ಗೋಗರೆಯುವ ರೀತಿಯ ಪ್ರಯತ್ನಗಳಂತೂ ತೀರಾ ಹಾಸ್ಯಸ್ಪದ. ಈ ಎರಡು ಸಂದಿಗ್ಧಗಳಲ್ಲಿ ಸಿಲುಕಿರುವ ಮಹಿಳಾ ಸಾಹಿತ್ಯ ಸಂದರ್ಭದಲ್ಲಿ ಪರ್ಯಾಯ ಚಿಂತನೆಗಳು ಹೇಗೆ ರೂಪು ತಳೆಯಬೇಕು ಎಂಬುದು ಇಲ್ಲಿನ ಚರ್ಚೆಯ ಕೇಂದ್ರವಾಗಬೇಕು.

●

ಮೇಲಿನ ಆಶಯವನ್ನಿಟ್ಟುಕೊಂಡು ಈ ಚರ್ಚೆಯಲ್ಲಿ ಪಾಲ್ಗೊಳ್ಳುವಂತೆ ನಾಡಿನ ಹಲವು ವಿದ್ವಾಂಸರನ್ನು ಕೇಳಿಕೊಳ್ಳಲಾಯಿತು. ಅದಕ್ಕೆ ಪ್ರತಿಕ್ರಿಯೆಯಾಗಿ ಬಂದ ನಾಲ್ವರು ವಿದ್ವಾಂಸರ ಲೇಖನಗಳು ಚರ್ಚೆಯ ವ್ಯಾಪ್ತಿಯನ್ನು ನಿಜಕ್ಕೂ ವಿಸ್ತರಿಸಿದ್ದು, ಅವುಗಳು ಪ್ರಸ್ತುತ ಅಂಕಣವನ್ನು ಅರ್ಥಪೂರ್ಣವಾಗಿಸಿವೆ.*- ಸಂ.

ನ್ಮಾದದಲ್ಲಿ ಹುಟ್ಟಿ ಬೆಳೆದು ಆವೇಶ ಬಲದಿಂದ ತನ್ನ ಕೃತಿಗಳನ್ನು ರಚಿಸಿರಬೇಕು" (ಅದೇ : ೩೧೪) ಎಂದು ಅಭಿಪ್ರಾಯ ಪಡಲಾಗಿದೆ. ಈ ದಾಖಲಾತಿಯಿಂದ ಅಥವಾ ನನ್ನ ಪರಿವೀಕ್ಷಣೆಯ ಗ್ರಹಿಕೆಯಲ್ಲಿ ಇದನ್ನು ಮತ್ತಷ್ಟು ಸ್ಪಷ್ಟಪಡಿಸುವುದಾದರೆ, ಹೇಗೆ ಪಂಡಿತೆಯಾಗಲು ಕಂತಿಗೆ ಜ್ಯೋತಿಷ್ಮತಿ ತೈಲದಂತಹ ಹೊರಗಿನ ಪ್ರೇರಣೆ ಅಗತ್ಯವಾಯಿತೋ ಅದೇ ರೀತಿ ಇಲ್ಲಿ ಆ ಸ್ಥಾನವನ್ನು 'ಆವೇಶ'ಕ್ಕೆ ನೀಡಲಾಗಿದೆ. ಅರ್ಥಾತ್ ಮಹಿಳೆಯರು ಇಂತಹ ಅನ್ಯ ಬೆಂಬಲ ಇಲ್ಲದೆ ಸಾಹಿತ್ಯ ರಚಿಸಲಾರರು, ಅಥವಾ ಮಹಿಳೆಗೆ ಸಾಹಿತ್ಯ ರಚನೆ ಅಸಾಧ್ಯ ಎಂಬ ಸ್ಥಾಪಿತ ಚಿಂತನೆ ಇಲ್ಲಿ ಕೆಲಸ ಮಾಡಿದೆ. ಗಿರಿಯಮ್ಮನ ಸಾಹಿತ್ಯಿಕ ಸಾಧನೆಯ ವಿಶ್ಲೇಷಣೆ ಹಿನ್ನೆಲೆಗೆ ಸರಿದು, ವೈಯಕ್ತಿಕ ಮತ್ತು ಕೌಟುಂಬಿಕ ಬದುಕನ್ನು ಕೇಂದ್ರಕ್ಕೆ ತಂದು ಚರ್ಚಿಸಲಾಗಿದೆ. ಇದು ಇತರ ಲೇಖಕರ ದಾಖಲಾತಿಯಲ್ಲಿ ಪ್ರಧಾನವಾಗಿಲ್ಲ.

ವಚನಕಾರರ ದಾಖಲಾತಿಯತ್ತ ಗಮನಹರಿಸಿದರೆ, ಕನ್ನಡ ಸಾಮಾನ್ಯ ಓದುಗರಿಗೆ ಅಕ್ಕಮಹಾದೇವಿಯನ್ನು ಹೊರತುಪಡಿಸಿ, ಉಳಿದ ವಚನಕಾರ್ತಿಯರು ಇಂದಿಗೂ ಅಜ್ಞಾತರಾಗಿಯೇ ಉಳಿದಿದ್ದಾರೆ. ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಸಾಹಿತ್ಯ ಚರಿತ್ರೆಯ ಸಂಪುಟಗಳು ವಚನಕಾರ್ತಿಯರ ಸಾಹಿತ್ಯಿಕ ಪರಿಗಣನೆಯನ್ನು ಹೆಚ್ಚು ಸಂವೇದನಾಶೀಲತೆಯಿಂದ ಮಾಡಿರುವುದು ಕಂಡು ಬರುತ್ತದೆ. ವಚನಕಾರ್ತಿಯರ ಬದುಕು, ಬರೆಹ ಮತ್ತು ವಚನ ಚಳುವಳಿಯೊಳಗೆ ಅವರ ಪ್ರಾತಿನಿಧ್ಯ ಹಾಗೂ ಸಾಧನೆಯ ದಾಖಲಾತಿ ನಡೆದಿದೆ. ಇಂತಹ ದಾಖಲಾತಿಗಳು ಸಾಹಿತ್ಯ ಚರಿತ್ರೆಯ ಅಕಾಡೆಮಿಕ್ ಶಿಸ್ತಿನ ಓದುಗರಿಗೆ ತಲುಪಿವೆ. ವಚನಕಾರರ ಸಂಕಲನ (Anthology)ಗಳಲ್ಲಿ ಅಕ್ಕಮಹಾದೇವಿಯನ್ನು ಹೊರತು ಪಡಿಸಿ ಇತರರ ವಚನಗಳಿಗೆ ಅದರಲ್ಲಿಯೂ ದಲಿತ ವರ್ಗದ ವಚನಕಾರ್ತಿಯರ ರಚನೆಗಳಿಗೆ ಪ್ರಾತಿನಿಧ್ಯ ದೊರೆತಿಲ್ಲ. (ಇದು ದಲಿತ ವಚನಕಾರರ ಸಂದರ್ಭಕ್ಕೂ ಅನ್ವಯವಾಗುತ್ತದೆ.) ಕೀರ್ತನ ಸಾಹಿತ್ಯ ಚರಿತ್ರೆಯಲ್ಲಿ ಕೀರ್ತನಕಾರ್ತಿಯರ ಪ್ರತಿನಿಧೀಕರಣ ಸಾಕಷ್ಟು ಪ್ರಮಾಣದಲ್ಲಿ ಆಗಿಲ್ಲ. ಇನ್ನೂ ಆ ಕ್ಷೇತ್ರದಲ್ಲಿ ಹೊಸ ಅಧ್ಯಯನಕ್ಕೆ ಹಾಗೂ ಶೋಧಕ್ಕೆ ಸಾಕಷ್ಟು ಅವಕಾಶವಿದೆ.

ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯದ ದಾಖಲೀಕರಣವಂತೂ ತೀರಾ ಉಪೇಕ್ಷಿತವಾದ ಸಂಗತಿ. ಹೀಗಾಗಿ ಇಲ್ಲಿ ಪರಿಗಣಿತವಾದುದು ಎಷ್ಟು ಮತ್ತು ಯಾವ ರೀತಿಯಲ್ಲಿ ಆಗಿದೆ ಎಂಬುದರ ಸ್ಥೂಲ ಚಿತ್ರಣದ ಬಳಿಕ ಪರಿಗಣನೆಗೆ ತೆಗೆದುಕೊಳ್ಳದ ಸಾಹಿತ್ಯವನ್ನು ವಿಶ್ಲೇಷಿಸುವುದು ಸೂಕ್ತ. ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯದ ಪ್ರತಿನಿಧೀಕರಣವೇ ಆಗಿಲ್ಲ. ಜನಪದ ಸಾಹಿತ್ಯದ ಬಹುಪಾಲು ರಚನೆಗಳು ಮಹಿಳೆಯರ ಸೃಷ್ಟಿ. ಹೀಗಿರುವಾಗ ಮೌಖಿಕ ಸಾಹಿತ್ಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ಮಹಿಳೆ ನವೋದಯ ಕಾವ್ಯದಿಂದ ಯಾಕೆ ದೂರ ಉಳಿದಳು ಎಂಬ ಪ್ರಶ್ನೆ ಹೇಳುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ನೆಲ್ಲಿಕಾರು 'ಜೈನ ಮಹಿಳೆ', ಸರಸ್ವತಿ ದೇವಿ ಗೌಡರ, ಎಚ್.ಎಸ್. ಕಾತ್ಯಾಯಿನಿ, ಸರಸ್ವತಿ ಬಾಯಿ ರಾಜವಾಡೆ ಮುಂತಾದ ಪಲವರು ಕಾವ್ಯ ಪ್ರಕಾರದಲ್ಲಿ ಕೆಲಸ ಮಾಡಿದ್ದಾರೆ. ಆದರೆ ಇವರು ಕವಿತೆಗೆ ಆಯ್ದುಕೊಂಡ ವಸ್ತು ಮತ್ತು ಛಂದೋರೂಪಗಳ

ಕಾರಣಗಳಿಂದ ಪ್ರಧಾನ ಸಾಹಿತ್ಯ ಚರಿತ್ರೆಕಾರರ ಗಮನ ಸೆಳೆಯುವಲ್ಲಿ ವಿಫಲರಾಗಿದ್ದಾರೆ. ಬೆಳಗೆರೆ ಜಾನಕಮ್ಮನಂಥ ಕವಯಿತ್ರಿ ಚರಿತ್ರೆಯ ಪ್ರಧಾನ ವಾಹಿನಿಯಲ್ಲಿ ಬಿಟ್ಟುಹೋದ ಮುಖ್ಯ ಕೊಂಡಿ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಕೀರ್ತಿನಾಥ ಕುರ್ತಕೋಟಿಯವರ ಕೃತಿಯು ಕಾದಂಬರಿ ಕ್ಷೇತ್ರದ ಮಹಿಳಾ ಸಾಹಿತ್ಯದ ಕುರಿತು ಮೌನವಹಿಸಿದೆ. ಎಲ್.ಎಸ್. ಶೇಷಗಿರಿರಾಯರು ತ್ರಿವೇಣಿ, ಎಂ.ಕೆ. ಇಂದಿರಾ, ಅನುಪಮಾ ನಿರಂಜನ, ಎಚ್.ಎಸ್. ಪಾರ್ವತಿ ಮತ್ತು ಸಿ.ಎನ್. ಜಯಲಕ್ಷ್ಮೀದೇವಿ ಇವರ ಹೆಸರನ್ನು ಉಲ್ಲೇಖಿಸಿದ್ದಾರೆ. ತ್ರಿವೇಣಿಯವರು ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನ ಪಡೆಯಲು ಚರಿತ್ರಕಾರರು ಕೊಟ್ಟ ಕಾರಣಗಳು ಹೀಗಿವೆ. ೧. ಮಹಿಳೆಯರು ಹೆಚ್ಚು ಬರೆಯದೇ ಇದ್ದಾಗ, ತ್ರಿವೇಣಿ ಬರೆದರು ಮತ್ತು ಜನಪ್ರಿಯತೆ ಗಳಿಸಿದರು. ೨. ಚಿಕ್ಕವಯಸ್ಸಿನಲ್ಲಿಯೇ ತೀರಿಕೊಂಡರು. ಹೀಗಾಗಿ ಓದುಗರ ಮಮತೆಗೆ ಕಾರಣವಾದರು. ಎಂದರೆ ಈ ರೀತಿಯ ಸಹಾನುಭೂತಿಯ 'ಅತಿಮುಚ್ಚಟೆ'ಯ ವಿಮರ್ಶೆಯ ವಿಧಾನ ಅಸಹಜ. ಎಂ.ಕೆ. ಇಂದಿರಾ ಅವರ ಮೂರು ಕಾದಂಬರಿಗಳ ಉಲ್ಲೇಖಕ್ಕೆ ಮಾತ್ರ ಚರಿತ್ರೆಯಲ್ಲಿ ಸ್ಥಳ ದೊರೆತರೆ, ಅನುಪಮಾ ನಿರಂಜನದ ಸಂದರ್ಭದಲ್ಲಿ ಲೇಖಕಿಯ ಹೆಸರಿನ ದಾಖಲಾತಿಗೆ ಅದು ಸಂಕ್ಷಿಪ್ತಗೊಂಡಿದೆ. ಕೆಲವರು 'ಓದಬಹುದಾದ ಕಾದಂಬರಿ ಕೊಟ್ಟಿದ್ದಾರೆ' ಎಂಬಲ್ಲಿಗೆ ನಿಂತರೆ, ಇನ್ನೊಂದೆಡೆ 'ಎರಡು ದಶಕದಲ್ಲಿ ನೂರು ಜನ ಲೇಖಕಿಯರು ಬಂದಿದ್ದಾರೆ. ಇವರ ಕೊಡುಗೆ ಗಮನಾರ್ಹ ಆದರೆ ವಿಶೇಷವಿಲ್ಲ'' (ಶೇಷಗಿರಿರಾವ್.ಎಲ್.ಎಸ್ ; ೧೯೭೫; ೧೯೦) ಎಂಬ ಒಂದು ಸಾಲಿನ ವಿಮರ್ಶೆಯ ಮೂಲಕ ಒಟ್ಟು ಮಹಿಳಾ ಸಾಹಿತ್ಯದ ಸಾಧನೆಯನ್ನು ಅಂಚಿಗೆ ತಳ್ಳಲಾಗಿದೆ.

ತಿರುಮಲಾಂಬಾ, ಕಲ್ಯಾಣಮ್ಮ, ಶ್ಯಾಮಲಾದೇವಿ ಬೆಳಗಾಂವಕರ, ಸರಸ್ವತಿ ಬಾಯಿ ರಾಜವಾಡೆ, ಸರಸ್ವತಿ ದೇವಿ ಗೌಡರ್, ಎಚ್.ಎಸ್. ಕಾತ್ಯಾಯಿನಿ ಮುಂತಾದ ಲೇಖಕಿಯರ ಸಾಧನೆಗಳನ್ನು ಸಾಹಿತ್ಯ ಚರಿತ್ರೆಯಲ್ಲಿ ಪರಿಗಣಿಸದಿರುವ ವಿಸಂಗತಿಯನ್ನು ಮುಂದಿನ ಹಂತದಲ್ಲಿ ಲೇಖಕಿಯರು ಬೆಳಕಿಗೆ ತರಬೇಕಾಯಿತು. ತ್ರಿವೇಣಿ, ಎಂ.ಕೆ. ಇಂದಿರಾ ಅವರ ಕೃತಿಗಳಿಗೆ ಪ್ರಧಾನ ವಾಹಿನಿಯಲ್ಲಿ ತಡವಾಗಿಯಾದರೂ ಸಂವಾದಗಳು ಏರ್ಪಟ್ಟಿವೆ. ಆದರೆ ಅನುಪಮಾ ನಿರಂಜನರ ಪ್ರಾತಿನಿಧಿಕ ಕೃತಿಗಳಾದ 'ಮಾಧವಿ', 'ಆಳ', 'ಮೂಲ ಮುಖಿ'ಯಂತಹ ಕೃತಿಗಳನ್ನು ಪ್ರಧಾನಧಾರೆಯ ವಿಮರ್ಶಕರು ಗಮನಿಸಿಲ್ಲ. ಎಚ್.ವಿ. ಸಾವಿತ್ರಮ್ಮ ಅವರ 'ಸೀತೆ ರಾಮ ರಾವಣ', 'ವಿಮುಕ್ತೆ', ಸುನಂದಾ ಬೆಳಗಾಂಕರ ಅವರ 'ನಾಸು' ಕಾದಂಬರಿಗಳ ಕುರಿತು ಅರ್ಥ ಪೂರ್ಣ ಸಂವಾದ ನಡೆದಿರುವುದು ಸ್ತ್ರೀವಾದಿ ವಿಮರ್ಶಕರಿಂದ ಮಾತ್ರ. ಈ ಧೋರಣೆ ಇನ್ನೂ ಮುಂದುವರಿಯುತ್ತಲೇ ಇದೆ. ಇತ್ತೀಚಿನ ವರ್ಷಗಳಲ್ಲಿ ಗಮನಾರ್ಹವೆನಿಸಿದ 'ಶಿವಗಂಗಾ' (ಚಂಪಾವತಿ.ಎಚ್.ಎಸ್.) 'ಗಾಂಧಿ ಬಂದ' (ನಾಗವೇಣಿ.ಎಚ್.) ಮುಂತಾದ ಕಾದಂಬರಿ ಗಳಿಗೂ ಸಾಹಿತ್ಯಿಕ ವಲಯದಲ್ಲಿ ಇನ್ನೂ ವಿಮರ್ಶೆ ಅಗತ್ಯವಾದಷ್ಟು ಬಂದಿಲ್ಲ. ಮಹಿಳೆಯರ ಕೃತಿಗಳನ್ನು ಓದದಿರುವ, ಓದಿದರೂ ವಿಮರ್ಶೆ ಮಾಡದಿರುವ ಈ ಮಡಿವಂತಿಕೆ ಸಹಜವಾಗಿಯೇ ಸಾಹಿತ್ಯ ಚರಿತ್ರೆಯ ದಾಖಲೀಕರಣದಲ್ಲೂ ಪ್ರಧಾನ ಪಾತ್ರವಹಿಸಿದೆ.

ಕಥಾ ಪ್ರಕಾರದತ್ತ ಗಮನಹರಿಸಿದರೆ, ಕೊಡಗಿನ ಗೌರಮ್ಮ, ಶ್ಯಾಮಲಾದೇವಿ ಬೆಳಗಾಂಕರ, ವಾಣಿ, ಜಯಲಕ್ಷ್ಮಿ. ಆರ್. ಶ್ರೀನಿವಾಸನ್, ಕಾತ್ಯಾಯಿನಿ, ಎಂ. ಸೀತಾರತ್ನ, ತ್ರಿವೇಣಿ, ಸಾವಿತ್ರಮ್ಮ, ಉಷಾ ದೇವಿ ಇವರ ಹೆಸರು ಪರಿಗಣಿತವಾಗಿದೆ. ಕೆಲವರ ಬರೆವಣಿಗೆ 'ಸುಂದರ', 'ಸುಶಿಕ್ಷಿತತೆಯ ಒಪ್ಪವಿದೆ' ಎಂಬ ಕಾರಣಕ್ಕೆ ದಾಖಲೆಗೆ ಅರ್ಹವಾದರೆ, ಹಲವು 'ಮೃದುವಾಗಿದ್ದರೂ ಆಳವಾದ ಚಿತ್ರಣವಿಲ್ಲ' ಎಂಬ ಮೂದಲಿಕೆಗೆ ಒಳಗಾಗಿವೆ. ಜಯಲಕ್ಷ್ಮಿ ಎನ್.ರಾವ್ ಮತ್ತು ವೀಣಾ ಶಾಂತೇಶ್ವರ ಅವರು ಚರಿತ್ರಕಾರರಿಂದ ಭರವಸೆಯ ಕತೆಗಾರ್ತಿಯರಾಗಿ ಪರಿಗಣಿತವಾಗಿದ್ದಾರೆ.

ನಾಟಕ ಪ್ರಕಾರದಲ್ಲಿ ಕೈಲಾಸಂ, ಶ್ರೀರಂಗ ಮುಂತಾದವರ ಎದುರು ಮೊದಲ ನಾಟಕಕಾರ್ತಿ ತಿರುಮಲಾಂಬಾ ಅವರ ಸಾಧನೆಗೆ ಚರಿತ್ರೆಯಲ್ಲಿ ಎಡೆ ಇಲ್ಲವಾಗಿದೆ. ಮತ್ತೋರ್ವ ನಾಟಕಕಾರ್ತಿ ಕಲ್ಯಾಣಮ್ಮ ಚಾರಿತ್ರಿಕ ಮತ್ತು ಸಾಮಾಜಿಕ ನಾಟಕಗಳನ್ನು ರಚಿಸಿದ ಸರಸ್ವತಿ ದೇವಿ ಗೌಡರ, ಸ್ವತಂತ್ರ ಹಾಗೂ ಅನುವಾದ ನಾಟಕಗಳನ್ನು ರಚಿಸಿದ ಸರಸ್ವತಿ ಬಾಯಿ ರಾಜವಾಡೆ, ಪಡುಕೋಣೆ ಸೀತಾರತ್ನ ಮುಂತಾದ ಒಂದೊಂದು ಕಂಬಗಳು ತೊಂಬತ್ತರ ದಶಕದಲ್ಲಿ ಉತ್ಖನನಗೊಂಡಿವೆ. ಇದು ಸ್ತ್ರೀಪರ ಕಾಳಜಿಯ ವೈಯಕ್ತಿಕ ಹಾಗೂ ಸಂಘಟನಾತ್ಮಕ ಅಧ್ಯಯನದಿಂದ ಸಾಧ್ಯವಾಗಿದೆ. ವರ್ತಮಾನದ ಸಾಹಿತ್ಯ ಚರಿತ್ರೆಯ ದಾಖಲಾತಿಯಲ್ಲಿ ಕಣ್ಮರೆಯಾದ ಕೊಂಡಿಗಳ ಹುಡುಕಾಟ ಡಾ. ವಿಜಯಾದಬ್ಬೆ, ಡಾ.ಬಿ.ಎನ್. ಸುಮಿತ್ರಬಾಯಿ, ನೇಮಿಚಂದ್ರ, ಡಾ. ಶ್ರೀವಳ್ಳಿ, ಟಿ.ಎಸ್. ಎಚ್.ಎಸ್. ಪಾರ್ವತಿ, ಚಿ.ನ. ಮಂಗಳಾ ಮುಂತಾದವರ ಕೃತಿಗಳಲ್ಲಿ ಕಂಡುಬಂದಿದೆ.

ಮೂರನೆಯ ಹಂತದ ಸಾಂಸ್ಥಿಕ ರೂಪದ ಸಾಹಿತ್ಯ ಚರಿತ್ರೆಯ ದಾಖಲೀಕರಣ ಸಂಕಲನ ರೂಪದಲ್ಲಿ ನಡೆದಿದೆ. ಅವುಗಳ ಸಂಕ್ಷಿಪ್ತ ಸೂಚಿ ಹೀಗಿದೆ.

| ಕೃತಿ ಮತ್ತು ಪ್ರಕಾಶಕರು | ಲೇಖಕರ ಒಟ್ಟು ಸಂಖ್ಯೆ | ಲೇಖಕಿಯರ ಸಂಖ್ಯೆ |
|---|---|---|
| ೧. ಶತಮಾನದ ಕಾವ್ಯ. ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೧) | ೧೧೭ | ೧೪ |
| ೨. ದಕ್ಷಿಣ ಕನ್ನಡದ ಶತಮಾನದ ಕಾವ್ಯ (ಕನ್ನಡ ಸಂಘ, ಕಾಂತಾವರ ೨೦೦೧) | ೧೧೬ | ೧೨ |
| ೩. ಶತಮಾನದ ಲಲಿತ ಪ್ರಬಂಧ (ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೧) | ೬೨ | ೦೬ |
| ೪. ಶತಮಾನದ ಸಾಹಿತ್ಯ ವಿಮರ್ಶೆ (ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೧) | ೬೧ | ೦೨ |

| | | | |
|---|---|---|---|
| ೫. | ಶತಮಾನದ ಸಣ್ಣಕತೆಗಳು (ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೧) | ೪೫ | ೦೬ |
| ೬. | ಶತಮಾನದ ಸಣ್ಣಕತೆಗಳು (ಪ್ರಿಸಂ ಬುಕ್ಸ್, ೧೯೯೭) | ೮೨ | ೦೯ |
| ೭. | ನಮ್ಮ ಕನ್ನಡ ಕಾವ್ಯ (ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ೧೯೯೭) | ೯೫ | ೦೧ |
| ೮. | ನುಡಿ ನಿಪುಣರು (ಕನ್ನಡ ಸಾಹಿತ್ಯ ಪರಿಷತ್ತು, ೧೯೯೬) | ೩೨೪ | ೦೮ |
| ೯. | ಇಂದಿನ ರಂಗ ಕಲಾವಿದರು | | |
| | (ವೃತ್ತಿ ಕಲಾವಿದರು) | ೨೯೪ | ೨೬ |
| | (ಹವ್ಯಾಸಿ ಕಲಾವಿದರು) | ೨೯೦ | ೦೮ |
| | (ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೮೬) | | |

ಈ ಅಂಕಿ-ಅಂಶಗಳನ್ನು ನೀಡುವಾಗ, ಇವುಗಳನ್ನು ಸಂಪಾದನೆ ಮಾಡಿದವರ ಬಗೆಗಾಗಲಿ, ಆಯ್ಕೆಗೆ ಇರಿಸಿಕೊಂಡ ಮಾನದಂಡದ ಬಗೆಗಾಗಲಿ ಚರ್ಚೆಯನ್ನು ಬೆಳೆಸುವುದು ನನ್ನ ಉದ್ದೇಶ ವಾಗಿಲ್ಲ. ಇಲ್ಲಿಯವರೆಗೆ ಮಹಿಳಾ ಸಾಹಿತ್ಯದ ಅಧ್ಯಯನ ಮತ್ತು ಚರಿತ್ರೆಯಲ್ಲಿ ಪರಿಗಣನೆ ಮಾಡಿದ ನೆಲೆ ಇವುಗಳು ಸಮರ್ಪಕವಾಗಿದ್ದರೆ ಈ ಸಂಕಲನಗಳಲ್ಲಿ ಕಂಡು ಬರುವ ತಾರತಮ್ಯತೆ ಇಷ್ಟು ಢಾಳಾಗಿ ಕಣ್ಣಿಗೆ ರಾಚುತ್ತಿರಲಿಲ್ಲ. ಎಂದರೆ ಈವರೆಗೆ ಚರ್ಚಿಸಿರುವ ಅಂಶಗಳ ಆಧಾರ ದಿಂದ ಮಹಿಳಾ ಸಾಹಿತ್ಯದ ಪರಿಗಣನೆ ಕುರಿತು ಕೆಲವು ಮುಖ್ಯ ನಿಲುವುಗಳಿಗೆ ಬರಲು ಸಾಧ್ಯವಾಗುತ್ತದೆ.

ಹೊರನೋಟಕ್ಕೆ ವ್ಯಕ್ತವಾಗುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯ ಪ್ರತಿನಿಧೀಕರಣ 'ಸೂತ್ರರೂಪತೆ'ಯು ಚಲನಾತ್ಮಕವಾಗಿ ಸಮಾನಾಂತರವಾಗಿಲ್ಲ ಎಂಬುದು ವಾಸ್ತವ. ಈ ವಕ್ರತೆಗೆ ಅಥವಾ ಕೋನರೂಪತೆಗೆ ಕಾರಣಗಳು ಹಲವು ನೆಲೆಗಳಲ್ಲಿ ವ್ಯಕ್ತವಾಗಿವೆ. 'ಪುರುಷ' ಮತ್ತು 'ಮಹಿಳೆ'ಯನ್ನು 'ಶ್ರೇಷ್ಠ' ಮತ್ತು 'ಕನಿಷ್ಠ' ಎಂಬ ವೈರುಧ್ಯದ (Binary) ನೆಲೆಯಲ್ಲಿ ನೋಡುವ ಮನೋಭಾವವೇ ಇದಕ್ಕೆ ಮೂಲಕಾರಣ. ಪುರುಷರ ಶ್ರೇಷ್ಠತೆಯ ಅಭೀಪ್ಸೆ ಸಾಹಿತ್ಯ ಚರಿತ್ರೆಯ ನಿರ್ಮಾಣ, ನಿರ್ಮಿತಿಯ ಸಂದರ್ಭದಲ್ಲಿ ವ್ಯಕ್ತವಾಗಿದೆ.

ಸಾಹಿತ್ಯ ಚರಿತ್ರೆಯ ಚಲನಾತ್ಮಕ ನಿರ್ಮಿತಿಯ ಪ್ರಕ್ರಿಯೆ ಕೂಡ ಇದನ್ನು ಅನಿವಾರ್ಯವಾಗಿ ಒಪ್ಪಿಕೊಂಡಿದೆ. ಇದು ಹುಟ್ಟು ಹಾಕಿದ ಪ್ರತ್ಯೇಕತೆ, ಭಿನ್ನತೆ, ಕೇಂದ್ರೀಕರಣ, ಸಂಕರಗಳ

ತಿರಸ್ಕಾರ, ಸಿದ್ಧ ಮಾದರಿ, ಹೋಲಿಕೆ, ತುಲನೆ, ತಾರತಮ್ಯ ನಿಶ್ಚಿತಿ, ಕೊನೆಯದಾಗಿ ಸ್ಪರ್ಧೆ ಈ ಎಲ್ಲ ಪರಿಕಲ್ಪನೆಗಳ ನೆಲೆಯಲ್ಲಿ ಸಾಹಿತ್ಯದಲ್ಲಿ ಮಹಿಳಾ ಪ್ರತಿನಿಧೀಕರಣದ ಕುರಿತು ಗಂಭೀರ ವಾಗಿ ಚಿಂತಿಸಬೇಕಾಗಿದೆ. ಈ ನೆಲೆಯಿಂದ ಹೊಸ ಮಾದರಿಯ ಉತ್ಪನನ ಕಾರ್ಯಕ್ಕೆ ತೊಡಗಬೇಕಾಗುತ್ತದೆ. 'ಮಹಿಳಾ ಸಾಹಿತ್ಯ ಪರಿಗಣನೆ' ಅಥವಾ 'ಮಹಿಳಾ ಸಾಹಿತ್ಯ ಅವಗಣನೆ' ಎರಡೂ ನೆಲೆಗಳಿಂದ ಇದು ಅನಿವಾರ್ಯ. ಸಾಂಸ್ಕೃತಿಕ ರಾಜಕಾರಣದ ಸೂಕ್ಷ್ಮಾತಿ ಸೂಕ್ಷ್ಮಗಳು ಇದರಿಂದ ಸತ್ಯಕ್ಕೆ ಮುಖಾಮುಖಿಗೊಳ್ಳಬಹುದು.

ಈಗಿರುವ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ 'ತಾಯಿಬೇರು' ಕಣ್ಮರೆಯಾಗಿದೆ. ರಾಜಾಶ್ರಯ ಮಹಿಳೆ ಮತ್ತು ಸಾಹಿತ್ಯ ಎನ್ನುವ ಪ್ರತ್ಯೇಕ ಉತ್ಪನನ ಬೇಕಾಗಬಹುದು. ಎಣಿಕೆಗೆ ಸಿಗುವ 'ಕವಲು ಬೇರು'ಗಳು ಚರಿತ್ರೆಯ ಒಟ್ಟು ಪರಿಗಣನೆಗೆ ಸಂಬಂಧಿಸಿದಂತೆ ಸೋತಿವೆ. 'ಪಾರಂಪರಿಕ ಮೌಲ್ಯ'ಗಳನ್ನು ಮತ್ತು 'ಊಳಿಗಮಾನ್ಯ ಸಂಸ್ಕೃತಿ' ಯನ್ನು ಧಿಕ್ಕರಿಸಿದ ಪಕ್ಷದಲ್ಲಿ ಮೂಲದ ಅನ್ವೇಷಣೆ ಪರಿಪೂರ್ಣತೆಯೆಡೆಗೆ ಮಗ್ಗುಲು ಬದಲಾಯಿಸಿಕೊಳ್ಳಬಹುದು. ಸಾಹಿತ್ಯ ಚರಿತ್ರೆಯು ಸಾಮಾಜಿಕ-ಸಾಂಸ್ಕೃತಿಕ-ಆರ್ಥಿಕ-ರಾಜಕೀಯ ನೆಲೆಗಳ ಒಳಚರಿತ್ರೆಯೇ ಆಗಿದೆ. ನವವಸಾಹತುಶಾಹಿ ಸಂದರ್ಭದಲ್ಲಿ ನಿಂತು ಮಾತನಾಡುವ ನನ್ನ ಸಂದರ್ಭದಲ್ಲಿ 'ಮಹಿಳಾ ಸಾಹಿತ್ಯದ ಪರಿಗಣನೆ' ಎಂಬುದನ್ನು ಅಕಾಡೆಮಿಕ್ ಜಿಜ್ಞಾಸೆ ಗಳಿಂದ ಪ್ರತ್ಯೇಕಗೊಳಿಸಿ ನೋಡಬೇಕು ಎಂದೆನಿಸುತ್ತದೆ. ಇದು ಪರಿಗಣನೆಗೆ ಸಮಗ್ರತೆಯನ್ನು ಸಾಧಿಸಬೇಕೆನ್ನುವ ತಾತ್ವಿಕ ನೆಲೆಯಲ್ಲಿ ಸಂರಚಿತಗೊಳ್ಳಬೇಕು. ಅಕಾಡೆಮಿಕ್ ಜಿಜ್ಞಾಸೆಗಳಾದ 'ಗಂಭೀರ ಸಾಹಿತ್ಯ' 'ಜನಪ್ರಿಯ ಸಾಹಿತ್ಯ', 'ವೈಚಾರಿಕ ಸಾಹಿತ್ಯ', 'ಸಾಮಾನ್ಯ ಸಾಹಿತ್ಯ' ಎಂಬ ಹಲವು ವಿಂಗಡಣಾ ತಾರತಮ್ಯವನ್ನು ಪ್ರಾಥಮಿಕವಾಗಿ ಮೀರಿ ಮಹಿಳಾ ಸಾಹಿತ್ಯ ಚರಿತ್ರೆಯ 'ಸಾವಯವ ಶಿಲ್ಪ'ವನ್ನು (Organic Whole) ಕಟ್ಟಬೇಕಾಗಿದೆ. ಹೀಗಾದಾಗ ಮಾತ್ರ ಸಾಹಿತ್ಯ ಚರಿತ್ರೆ ಸಂರಚನೆಯ ಗುರುತ್ವ ಕೇಂದ್ರದಿಂದ ತಪ್ಪಿಸಿಕೊಂಡು 'ಸ್ವದ ಅಸ್ತಿತ್ವ'ವನ್ನು ಪಡೆಯಬಹುದು. ಈ ಸಮಗ್ರತೆಯ ತಾತ್ವಿಕ ಭಿತ್ತಿ ನಿರ್ಮಾಣದಲ್ಲಿ 'ಮೌಖಿಕ ಪರಂಪರೆ' ಹಾಗೂ ಬರವಣಿಗೆಗಳ ನಡುವಿನ ಆಯ್ಕೆಯಲ್ಲಿ ಎಚ್ಚರವಹಿಸಬೇಕಾಗುತ್ತದೆ. ಮೌಖಿಕ ಮತ್ತು ಬರವಣಿಗೆಯ ಜಾಗೃತ ಆಯ್ಕೆಯಲ್ಲಿ ಮಾತ್ರ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯದ ಪರಿಗಣನೆಯು ಪೂರ್ಣತೆಯನ್ನು ಪಡೆಯಲು ಸಾಧ್ಯ.

**ಸಂಪನ್ಮೂಲಗಳು**

೦೧. 'ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟಗಳು : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
೦೨. 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟಗಳು : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ.
೦೩. 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಸಂಪುಟಗಳು : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ.

೦೪. ಕೀರ್ತಿನಾಥ ಕುರ್ತಕೋಟಿ : ೧೯೯೨; ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಮನೋಹರ ಗ್ರಂಥಮಾಲೆ, ಧಾರವಾಡ.

೦೫. ಗುರುಲಿಂಗ ಖಾಪಸೆ (ಸಂ) : ೨೦೦೧; ಶತಮಾನದ ಲಲಿತ ಪ್ರಬಂಧ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೦೬. ಜನಾರ್ಧನ ಭಟ್.ಬಿ. (ಸಂ) : ೨೦೦೧; ದ.ಕ. ಶತಮಾನದ ಕಾವ್ಯ ಕನ್ನಡ ಸಂಘ, ಕಾಂತಾವರ.

೦೭. ದಿವಾಕರ.ಎಸ್. (ಸಂ) : ೧೯೯೭; ಶತಮಾನದ ಸಣ್ಣ ಕತೆಗಳು ಪ್ರಿಸಂ ಬುಕ್ಸ್ ಪ್ರೈ ಲಿಂ, ಬೆಂಗಳೂರು.

೦೮. ನೇಮಿಚಂದ್ರ : ೧೯೮೮; ಬೆಳಗೆರೆ ಜಾನಕಮ್ಮ ಬದುಕು ಬರೆಹ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು

೦೯. ಪಾರ್ವತಿ. ಎಚ್.ಎಸ್ : ೧೯೯೨; ತಿರುಮಲೆ ರಾಜಮ್ಮ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦. ಮನೋರಮಾ ಎಂ.ಭಟ್. (ಸಂ) : ೧೯೯೬; ದಕ್ಷಿಣ ಕನ್ನಡದ ಮೊದಲ ಲೇಖಕಿಯರು. ಕರಾವಳಿ ಲೇಖಕಿಯರ ವಾಚಕಿಯರ ಸಂಘ, ಮಂಗಳೂರು.

೧೧. ಮುಗಳಿ. ರಂ.ಶ್ರೀ : ೧೯೬೮; ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯ ಮಾಲೆ, ಮೈಸೂರು.

೧೨. ರಾಘವೇಂದ್ರರಾವ್.ಎಚ್.ಎಸ್. (ಸಂ) : ೨೦೦೧; ಶತಮಾನದ ಸಾಹಿತ್ಯ ವಿಮರ್ಶೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೩. ರೇವಣ್ಣಸಿದ್ಧಪ್ಪ.ನಾ. (ಸಂ) : ೧೯೯೬; ನುಡಿನಿಪುಣರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೪. ವಿಜಯಾ (ಸಂ) : ೧೯೮೬; ಇಂದಿನ ರಂಗ ಕಲಾವಿದರು, ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು.

೧೫. ವಿಜಯಾದಬ್ಬೆ (ಸಂ) : ೧೯೮೯; ಶ್ಯಾಮಲಾ ಸಂಚಯ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೧೬. ವಿಜಯಾದಬ್ಬೆ (ಸಂ) : ೧೯೯೨; ಪಿತೃಪ್ರಣೆಯ ಹೆಜ್ಜೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೭. ವಿಜಯಾದಬ್ಬೆ (ಸಂ) : ೧೯೯೮; ಅನುಪಮಾ ನಿರಂಜನ ಸಾಹಿತ್ಯ ಅಕಾಡೆಮಿ, ದೆಹಲಿ.

೧೮. ವೆಂಕಟೇಶ ಮೂರ್ತಿ.ಎಚ್.ಎಸ್. (ಸಂ) : ೨೦೦೧; ಶತಮಾನದ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೯. ಶ್ರೀಮತಿ.ಎಚ್.ಎಸ್. : ೨೦೦೦; ತ್ರಿವೇಣಿಯರ ಕಾದಂಬರಿಗಳ ಮರು ಓದು, ತ್ರಿವೇಣಿ ಪಬ್ಲಿಕೇಷನ್ಸ್, ಮೈಸೂರು.

೨೦. ಶ್ರೀವಳ್ಳಿ.ಟಿ.ಎಸ್. : ೧೯೯೬; ಗಿರಿಬಾಲೆ ಸಾಹಿತ್ಯವಾಚಿಕೆ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೧. ಸುಮಿತ್ರಾಬಾಯಿ.ಬಿ.ಎನ್. : ೧೯೯೨; ಕಲ್ಯಾಣ ಸರಸ್ವತಿ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು

೨೨. ಸುಮಿತ್ರಾಬಿಯಿ.ಬಿ.ಎನ್. : ೧೯೯೪ ; ಕಾತ್ಯಾಯಿನಿ ಸಾಹಿತ್ಯವಾಚಿಕೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

# ಕನ್ನಡ ಸಾಹಿತ್ಯ ವಿಮರ್ಶೆಗಳ ಲಿಂಗ ರಾಜಕಾರಣ - ಕೆಲವು ಟಿಪ್ಪಣಿಗಳು

**ಕೆ. ಕೇಶವ ಶರ್ಮ**

ಪಶ್ಚಿಮದಲ್ಲಿ ಸಾಹಿತ್ಯ ವಿಮರ್ಶೆಯೆಂಬ ಪ್ರಕಾರವು ಹುಟ್ಟಿಕೊಂಡುದಕ್ಕೆ ಕುತೂಹಲದಾಯಕವಾದ ಚರಿತ್ರೆಯಿದೆ. ಕೈಗಾರೀಕರಣದ ಅನಂತರ ಪಶ್ಚಿಮದಲ್ಲಿ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ದೃಷ್ಟಿಕೋನಗಳು ಬದಲಾದವು. ವೈಜ್ಞಾನಿಕ ಪ್ರಗತಿಯ ನಂತರ ಪತ್ರಿಕೆಗಳು ಪ್ರಾರಂಭವಾದವು. ಪತ್ರಿಕೆಗಳು ಜನರ ಮೇಲೆ, ಅದೂ ಮಧ್ಯಮ ವರ್ಗದ ಅಕ್ಷರಸ್ಥರ ಮೇಲೆ ಪರಿಣಾಮ ಉಂಟುಮಾಡಿದವು. ಮಧ್ಯಮ ವರ್ಗದ ಕೆಲವರು ಕಾಫಿ ಕ್ಲಬ್‌ನಲ್ಲಿ ಕುಳಿತು ರಾಜಕೀಯ, ಸಾಮಾಜಿಕ ವಿಷಯಗಳ ಕುರಿತು ಚರ್ಚಿಸಲು ಪ್ರಾರಂಭಿಸಿದರು. ನಾಟಕವನ್ನು ನೋಡಿದವರು ನಾಟಕದ ಬಗ್ಗೆ, ಪತ್ರಿಕೆಯನ್ನು ಓದಿದವರು ಪತ್ರಿಕೆಯ ವಿಷಯಗಳ ಬಗ್ಗೆ ಮಾತಾಡಲು ಶುರುಮಾಡಿದರು. ಅಷ್ಟೇ ಅಲ್ಲ; ಚರ್ಚೆಯಲ್ಲಿ ಸಾಂಸ್ಕೃತಿಕ ಅಭಿರುಚಿಯನ್ನು ಬದಲಾಯಿಸಬೇಕೆಂಬ ಮಧ್ಯಮ ವರ್ಗದ ಆಸಕ್ತಿಯು ಬಹಳ ಮುಖ್ಯವಾಗಿತ್ತು. ಮಧ್ಯಮ ವರ್ಗದಿಂದ ಬಂದ ಬುದ್ಧಿಜೀವಿ ವರ್ಗ ತಮಗೆ ಸಾಂಸ್ಕೃತಿಕವಾಗಿ ಮಹತ್ವದ್ದು ಎಂದು ತಿಳಿದುದರ ಕುರಿತು ಬರೆಯತೊಡಗಿದರು. ಅದು ಭಾನುವಾರದ ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿತು. ಅದೇ 'ವಿಮರ್ಶೆ'ಯಾಯಿತು. ವಿಮರ್ಶೆಯಲ್ಲಿ ಆಗ ಮೊದಲ ಪ್ರಾಶಸ್ತ್ಯವು ಅಭಿರುಚಿಯನ್ನು ತಿದ್ದುವುದರ ಕಡೆಗಿತ್ತು ಎಂಬುದು ಗಮನಾರ್ಹ.

ಆದರೆ ಭಾರತದಲ್ಲಿ ಸಾಹಿತ್ಯ ವಿಮರ್ಶೆಯ ಚರಿತ್ರೆಯೇ ಬೇರೆ ಬಗೆಯದು. ನಮ್ಮಲ್ಲಿ ವಿಮರ್ಶೆಯೆನ್ನುವುದು ಹುಟ್ಟಿಕೊಂಡದ್ದೇ ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ. ಪಶ್ಚಿಮದಲ್ಲಿ ವಿಮರ್ಶೆಯ ಹಿಂದಿರುವ ಅನುಭವಕ್ಕೂ ಭಾರತದಲ್ಲಿ ವಿಮರ್ಶೆಯು ಹುಟ್ಟಿ ಕೊಂಡಿರುವ ಅನುಭವಕ್ಕೂ ಅಜಗಜಾಂತರ ವ್ಯತ್ಯಾಸವಿದೆಯೆಂದು ತೋರುತ್ತದೆ. ಕನ್ನಡದಲ್ಲಿ ಮುಖ್ಯವಾಗಿ ರಾಷ್ಟ್ರೀಯ ಆಂದೋಲನ., ಆಗತಾನೇ ಪ್ರಾರಂಭವಾಗಿದ್ದ "ಸ್ಕೂಲ್‌ಕೇಂದ್ರಿತ" ಶಿಕ್ಷಣ - ಮುಂತಾದವು ಸಾಹಿತ್ಯ ವಿಮರ್ಶೆಯೆಂಬ ಪ್ರಕಾರವು ಹುಟ್ಟುವುದಕ್ಕೆ ಕಾರಣವಾಯಿತು. ಇಂಗ್ಲೀಷ್ ಶಿಕ್ಷಣ ದೊರೆತುದರ ಫಲವಾಗಿ ಅಲ್ಲಿಯಂತೆ ಇಲ್ಲಿಯೂ ವಿಮರ್ಶೆಯೆಂಬ ಪ್ರಕಾರವು ಹುಟ್ಟಿತು. ಇಲ್ಲಿಯ ವಿಮರ್ಶೆಯಲ್ಲಿಯೂ ಬಹಳ ಮುಖ್ಯವಾಗಿದ್ದ ಅಂಶವೆಂದರೆ-

ಸಾಹಿತ್ಯದಲ್ಲಿ ಟೊಳ್ಳು ಯಾವುದು, ಗಟ್ಟಿ ಯಾವುದು ಎಂಬುದರ ಪರಿಶೀಲನೆ. ಇದು ಕೂಡಾ ಅಂತಿಮವಾಗಿ ಅಭಿರುಚಿಯ ಪ್ರಶ್ನೆಯೇ ಆಗಿದೆ. ಕನ್ನಡದಲ್ಲಿ ಮೊದ ಮೊದಲಿಗೆ ಬಂದ ವಿಮರ್ಶೆಗಳು ವಿವರಣಾತ್ಮಕವಾಗಿದ್ದವು ಮತ್ತು ಸಹೃದಯನಿಗೆ ತಿಳಿಹೇಳುವ ಗುಣ ಆ ವಿಮರ್ಶೆಗಳಿಗೆ ಇತ್ತು.

೨. ವಿಮರ್ಶಾತ್ಮಕ ಚಟುವಟಿಕೆಯೆನ್ನುವುದು ನಿರುದ್ದೇಶಿತವಲ್ಲ. ಅದು ಸಾಮಾಜಿಕ-ರಾಜಕೀಯ ಚಟುವಟಿಕೆಯ ಒಂದು ಭಾಗ. ವಿಮರ್ಶೆಯಲ್ಲಿ ವಿಮರ್ಶಕ ತಳೆಯುವ ನಿಲುವು ವೈಯಕ್ತಿಕ ಆಯ್ಕೆಯ ಸಮಸ್ಯೆ ಮಾತ್ರವೇ ಅಲ್ಲ. ವಿಮರ್ಶೆಯಲ್ಲಿ ಕೃತಿಯೊಂದಕ್ಕೆ ಪ್ರತಿಕ್ರಿಯಿಸುವ ವಿಧಾನವು ವಿಮರ್ಶಕನ ರಾಜಕೀಯ, ಸಾಮಾಜಿಕ ನಿಲುವುಗಳ ದ್ಯೋತಕವೂ ಆಗಿರುತ್ತದೆ. ಕೃತಿಯೊಂದರ ಬಗ್ಗೆ ಬರೆಯುವುದೆಂದರೆ ಕೃತಿಯೊಂದರಲ್ಲಿ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದು ಎಂದರ್ಥ. ಯಾವುದೇ ರೀತಿಯ ಸಂಬಂಧಗಳು ಕೂಡ ಸ್ಥಗಿತ ದೃಷ್ಟಿಕೋನವು ಆಗಿರುವುದಕ್ಕೆ ಸಾಧ್ಯವಿಲ್ಲ. ಇಲ್ಲಿಯೇ ಇನ್ನೊಂದು ಅಂಶವನ್ನು ಗಮನಿಸಬೇಕು. ಸಾಹಿತ್ಯ ವಿಮರ್ಶೆಯೆಂದರೆ ಅದು ಬೇಕು - ಬೇಡಗಳ ಪ್ರಶ್ನೆಯಲ್ಲ, ಸಾಹಿತ್ಯವೆನ್ನುವುದು ಹೇಗೆ ಮಾನವೀಯವಾದ ಚಟುವಟಿಕೆಯೋ ಅದೇ ರೀತಿ ಸಾಹಿತ್ಯ ವಿಮರ್ಶೆಯು ಕೂಡ ಮಾನವೀಯವಾದ ಒಂದು ಚಟುವಟಿಕೆ. ಮಾನವಿಕ ವಿಭಾಗಗಳಲ್ಲಿಯೇ ಸಾಹಿತ್ಯದ ಅಧ್ಯಯನವು ನಡೆಯುತ್ತದೆ. ಅಂದರೆ, ಸಾಹಿತ್ಯವೆನ್ನುವುದು ಮಾನವೀಯ ಸಂಬಂಧಗಳ ಅಧ್ಯಯನ. ಇದರ ಪರಿಣಾಮವೆಂದರೆ ಇತರ ಅಧ್ಯಯನಗಳು ಯಾವ ರೀತಿಯಲ್ಲಿ ನಡೆಯುವುದೋ ಅದೇ ರೀತಿಯಲ್ಲಿ ಸಾಹಿತ್ಯದ ಅಧ್ಯಯನಗಳು ನಡೆಯುತ್ತವೆ.

ಮಾನವೀಯ ಸಂಬಂಧಗಳನ್ನು ಬೇರೆ ಬೇರೆ ರೀತಿಯಲ್ಲಿ ನಿರ್ವಚಿಸುವ ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗಳೆರಡರಲ್ಲೂ ಗಂಡು ಮತ್ತು ಹೆಣ್ಣು ಎಂದು ಪ್ರತ್ಯೇಕಗೊಳಿಸಲಾಗಿರುವ ವ್ಯವಸ್ಥೆಯೊಂದರ ಚರ್ಚೆಯು ನಡೆಯಬೇಕಿತ್ತು. ಆದರೆ ಕನ್ನಡದ ಸೃಜನಶೀಲ ಬರಹಗಳು-ಹೆಣ್ಣನ್ನು, ಹೆಣ್ತನವನ್ನು ಒಂದು ಮಹತ್ವದ ಶಕ್ತಿಯೆಂದು ನಂಬಿವೆಯಾದರೂ 'ಸಾಹಿತ್ಯ ವಿಮರ್ಶೆ'ಯೆಂಬ ಪ್ರತ್ಯೇಕ ಜ್ಞಾನ ಶಿಸ್ತಿನಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ದೊಡ್ಡ ಮೌನ ವಿದೆ. ಸೃಜನಶೀಲ ಬರಹಗಳಲ್ಲಿ ತಾಯಿ, ನಲ್ಲೆ, ಪ್ರಕೃತಿ, ಭೂಮಿ ಮುಂತಾದ ಕ್ರಿಯಾತ್ಮಕ ಶಕ್ತಿಯುಳ್ಳ ರೂಪಕಗಳಿವೆ. ನವೋದಯದ ವೈಭವೀಕರಿಸಲಾಗಿರುವ ಹೆಣ್ತನದ ಆದರ್ಶವಾಗಲೀ, ಲಿಂಗ ವ್ಯತ್ಯಾಸವು ಕೂಡ ಗಂಡಿನ ಬಯಕೆಗೆ ಅನುಸಾರವಾಗಿ ಎಂಬಂಥ ನವ್ಯದ ತಿಳುವಳಿಕೆ ಕೂಡ ಹೆಣ್ತನವನ್ನು ಪೂರ್ತಿಯಾಗಿ ನಿರಾಕರಿಸಿಲ್ಲವೆಂಬುದು ಮುಖ್ಯ. ಈ ಮಾತು ವಾಗ್ವಾದಕ್ಕೆ ಅವಕಾಶ ಕಲ್ಪಿಸಬಹುದು. ಆದರೆ ಹೆಣ್ಣಿನ ಬಗ್ಗೆ, ಹೆಣ್ತನದ ಬಗ್ಗೆ ಮೌನವಿಲ್ಲ. ಆದರೆ ವಿಮರ್ಶೆಯ ಕ್ಷೇತ್ರಕ್ಕೆ ಬಂದರೆ ಈ ರೀತಿಯ ರೂಪಕಗಳೇ ಇಲ್ಲವಾಗಿವೆ. ಇದು ಕುತೂಹಲ ದಾಯಕ ಸಂಗತಿ.

೩. ರಾಜಕಾರಣವೆನ್ನುವುದು ಅಧಿಕಾರ-ಅನಧಿಕಾರಗಳ ನಡುವಣ ಸಂಬಂಧದ ನಿರ್ವಚನ. ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗದ ನಡುವೆ ಇರುವ ಸಂಬಂಧವನ್ನು ರಾಜಕಾರಣವು

ವ್ಯಾಖ್ಯಾನಿಸುತ್ತದೆ. ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ, ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಮೇಲೆ ಹಿಡಿತ ಸಾಧಿಸುವುದನ್ನು ರಾಜಕಾರಣವು ಚರ್ಚಿಸುತ್ತದೆ. ಈ ಸಂಗತಿಗಳ ಹಿಂದಿರುವ ನ್ಯಾಯ ಮತ್ತು ಕಾನೂನನ್ನು ಅದು ವಿವೇಚಿಸಲು ಪ್ರಯತ್ನಿಸುತ್ತದೆ. ಲೈಂಗಿಕ ರಾಜಕಾರಣವೆಂದರೆ ಲೈಂಗಿಕ ವ್ಯತ್ಯಾಸದ ಕಾರಣದಿಂದಲೇ ಒಬ್ಬರ ಮೇಲೆ ಮತ್ತೊಬ್ಬರು ಅಧಿಕಾರ ನಡೆಸುವುದು. ಇದರಿಂದ ಒಂದು ವರ್ಗವು (ಅಧಿಕಾರಕ್ಕೆ ಒಳಗಾದ ವರ್ಗ) ಮಾನಸಿಕ ಒತ್ತಡಕ್ಕೆ ಗುರಿಯಾಗುತ್ತದೆ. ಈ ದೃಷ್ಟಿಯಿಂದಲೇ ಅಧಿಕಾರದ ಸಂರಚನೆಗೂ ಲೈಂಗಿಕ ವ್ಯತ್ಯಾಸಕ್ಕೂ ಸಂಬಂಧವಿದೆ. "ಲೈಂಗಿಕ ರಾಜಕಾರಣವು ಲೈಂಗಿಕ ಯಜಮಾನಿಕೆಯ ಅಂಶವನ್ನು ಒಳಗೊಂಡಿದ್ದು, ಅದು ಮೂಲಭೂತವಾದ ಅಧಿಕಾರದ ಪರಿಕಲ್ಪನೆಯಾಗಿದೆ" ಎಂದು ಕೇಟ್ ಮಿಲ್ಲೆಟ್ ಹೇಳುತ್ತಾಳೆ. ಫುಕೋ ಕೂಡ ಒಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ. "ಲೈಂಗಿಕ ವ್ಯತ್ಯಾಸವು ಅಧಿಕಾರದ ವರ್ಗಾವಣೆಯ ಪ್ರಮುಖ ಅಂಶಗಳಲ್ಲಿ ಒಂದು. ಅಧಿಕಾರವೆನ್ನುವುದು ಗಂಡು-ಹೆಣ್ಣು, ಯುವಕರು, ಮುದುಕರು, ಪಾಲಕರು ಮತ್ತು ಮಕ್ಕಳು, ಆಡಳಿತ ವರ್ಗ ಮತ್ತು ಸಾಮಾನ್ಯ ಜನತೆಯ ನಡುವೆ ಹರಿಹಂಚಾಗಿ ಹೋಗುತ್ತದೆ". ಈ ದೃಷ್ಟಿಯಿಂದಲೇ ಗಂಡು ಅಧಿಕಾರದ ಸಂಕೇತವಾದರೆ, ಹೆಣ್ಣು ಶೋಷಿತ ವರ್ಗದ ಪ್ರತಿನಿಧಿಯಾಗಿರುತ್ತಾಳೆ. ಗಂಡು ಮತ್ತು ಹೆಣ್ಣಿನ ನಡುವೆ ಇರುವ ರಾಜಕಾರಣವು ಕೂಡ ದೃಶ್ಯ ಮತ್ತು ಭಾವನಾತ್ಮಕ ಸಂಗತಿಗಳ ನಡುವೆ ರೂಪುಗೊಂಡಿರುತ್ತದೆ. ಪಿತೃರೂಪಿ ಸಂಸ್ಕೃತಿಯು ಸ್ತ್ರೀ ವರ್ಗದ ಮೇಲೆ ಅಧಿಕಾರವನ್ನು ಸ್ಥಾಪಿಸಿಕೊಳ್ಳುತ್ತದೆ ಮತ್ತು ಸ್ತ್ರೀಯು ಗುಲಾಮ ಶಕ್ತಿ (Labour Power)ಯ ಪ್ರಾತಿನಿಧಿಕ ರೂಪವಾಗಿದ್ದಾಳೆ. ಲೈಂಗಿಕ ವ್ಯತ್ಯಾಸವೆನ್ನುವುದನ್ನು ಕಾಲಾಂತರದಲ್ಲಿ ಅಧಿಕಾರ ಮತ್ತು ಅನಧಿಕಾರಗಳ ವ್ಯತ್ಯಾಸವೆಂಬಂತೆ ಬಳಸಲಾಯಿತು. ಸ್ತ್ರೀವಾದದ ಪ್ರಕಾರ ಬಂಡವಾಳಶಾಹಿ ಜಗತ್ತು ಮತ್ತು ಪಿತೃರೂಪಿ ಸಂಸ್ಕೃತಿಯ ಜಗತ್ತು ಎರಡೂ ಬೇರೆ ಬೇರೆ ರೀತಿಯ ಮಾನಸಿಕ ಒತ್ತಡಗಳನ್ನು ನಿರ್ಮಿಸುತ್ತವೆ. ಪಿತೃರೂಪಿ ಸಂಸ್ಕೃತಿಯಲ್ಲಿ ಪುರುಷನನ್ನು ಉನ್ನತ ದರ್ಜೆಯವನೆಂದು, ಸ್ತ್ರೀಯನ್ನು ಕೆಳದರ್ಜೆಯವಳೆಂದು ಅಂಗೀಕರಿಸಲಾಗುತ್ತದೆ. ಇದರಿಂದಲೇ ತಾರತಮ್ಯ ವ್ಯತ್ಯಾಸಗಳು ಉಂಟಾಗುತ್ತವೆ. ಈ ರೀತಿಯ ತಾರತಮ್ಯಗಳಲ್ಲಿ ಅನೇಕ ಮಾದರಿಯ ನಿರ್ವಾತಗಳಿರುತ್ತವೆ.

೪. ಕನ್ನಡದಲ್ಲಿ ವಿಮರ್ಶೆಯೆಂಬ ಪ್ರಕಾರವು ಹುಟ್ಟಿಕೊಂಡಿರುವುದು ಸರಿಯಷ್ಟೇ? ಬರಹ ಮತ್ತು ಕಲಿಕೆಯ ಕ್ರಮಗಳು ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಬೇರೊಂದು ಮಾದರಿಯಾದವು. ಸಾಂಪ್ರದಾಯಿಕ ಕಲಿಕೆಯ ಕೇಂದ್ರಗಳಿಗೆ ಮಹಿಳೆಯರ ಪ್ರವೇಶವಿರಲಿಲ್ಲ. ಮಹಿಳೆಯ ಕಲಿಕೆಯ ಕ್ರಮಗಳು ವಸಾಹತುಪೂರ್ವದಲ್ಲಿ ಕೆಲವು ಕೌಶಲಗಳಿಗೆ ಸೀಮಿತವಾಗಿತ್ತು. ಮೇಲುಜಾತಿಯ ಹುಡುಗಿಯರು 'ನಾಕು ದೇವರ ನಾಮ' ಹಾಡಲು ಕಲಿತರೆ ಸಾಕಾಗುತ್ತಿತ್ತು. ಹಾಗೆಯೇ ಹುಡುಗಿಯೊಬ್ಬಳು ಅಡುಗೆಯ ಕೆಲಸವನ್ನು ಕಲಿತರೆ ಅದೇ ಮಹಾವಿದ್ಯೆಯಾಗಿರುತ್ತಿತ್ತು. ಈ ದೃಷ್ಟಿಯಿಂದ ವಸಾಹತುಪೂರ್ವದ ಮಹಿಳೆಯ ವ್ಯಕ್ತಿತ್ವವು 'ಮನೆ ಕೇಂದ್ರಿತ'. ಕೆಳವರ್ಗದ ಸ್ತ್ರೀಯರು ಮನೆಯೊಳಗೆ ಅಡುಗೆ ಮನೆಯ ಹೊರಗೆ ಕೂಲಿ ಕೆಲಸ ಮಾಡುತ್ತಿದ್ದರೂ

ಅದು ಕೂಡ ನಿಯಂತ್ರಣಕ್ಕೆ ಒಳಗಾಗಿತ್ತು. ಭಾರತೀಯ ಜಮೀನುದಾರಿ ಪದ್ಧತಿಯಲ್ಲಿ ಗಂಡು ಮತ್ತು ಹೆಣ್ಣು ಸಮಾನಾಂತರ ರೇಖೆಯಲ್ಲಿ ಚಲಿಸುವವರಲ್ಲ. ಗಂಡು ಮೇಲೆ ಮತ್ತು ಹೆಣ್ಣುಅಡಿಯಾಳು ಎಂಬ ವರ್ಗಗಳೇ ಅಲ್ಲಿ ಮುಖ್ಯ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಗಂಡು ಮತ್ತು ಹೆಣ್ಣು ಸಮಾನಾಂತರ ರೇಖೆಯಲ್ಲಿ ವಾಸಿಸಲು ಸಾಧ್ಯ. ಇಲ್ಲಿಯೂ ವ್ಯಕ್ತಿಯ ಅನನ್ಯತೆ ಯೆಂಬುದು ಮಾತ್ರ ಮುಖ್ಯ.

ಭಾರತೀಯ ಜಮೀನುದಾರಿ ಪದ್ಧತಿಯಲ್ಲಿ ಶಿಕ್ಷಣ ಎಲ್ಲರಿಗೂ ಇಲ್ಲ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಭಾರತದ ವಸಾಹತುಪೂರ್ವ ಸನ್ನಿವೇಶದಲ್ಲಿ ಕುಲಕಸುಬುಗಳು ಮುಖ್ಯ. ಈ ಕುಲಕಸುಬನ್ನು ಕಲಿಸುವಾಗಲೂ ಲೈಂಗಿಕ ವ್ಯತ್ಯಾಸವಿದೆ. ಹದಿನೆಂಟನೆಯ ಶತಮಾನದಲ್ಲಿ ಮಹತ್ವಪೂರ್ಣವಾದ ಬದಲಾವಣೆಯುಂಟಾಯಿತು. ಸ್ತ್ರೀಯರಿಗೂ ವಿದ್ಯಾಭ್ಯಾಸ ಅವಕಾಶವು ಸಾಂಸ್ಥಿಕವಾಗಿ ಸಾಧ್ಯವಾಯಿತು. ಆದರೆ ವಸಾಹತುಶಾಹಿ ಅನುಭದಲ್ಲಿ ಮಹಿಳೆಯರಿಗೆ ಎರಡು ರೀತಿಯ ತೊಡಕುಗಳು ಎದುರಾದವು. ಒಂದು ಪ್ರಭುತ್ವದ ಸಂಸ್ಕೃತಿಯನ್ನು ಎದುರಿಸ ಬೇಕಾದ ಅಗತ್ಯ. ಎರಡನೆಯದು ಸ್ಥಳೀಯ ಪಿತೃರೂಪಿ ಸಂಸ್ಕೃತಿಯ ಮೌಲ್ಯಗಳನ್ನು ಎದುರಿಸ ಬೇಕಾದ ತುರ್ತು. ಮಹಿಳೆಯರಿಗೆ ಸಾಂಸ್ಥಿಕ ಶಿಕ್ಷಣದಿಂದ ಉಂಟಾದ ಅರಿವು ಈ ಇಬ್ಬಗೆಯ ತೊಡಕುಗಳನ್ನು ಎದುರಿಸಲೇಬೇಕಾಗಿತ್ತು. ಮನೆಯ ಒಳಗಿನಿಂದ ಮನೆಯ ಹೊರಗೆ ಬಂದಾಗ ಉಂಟಾಗುವ ದ್ವಂದ್ವಗಳು ಸಹಜವಾಗಿ ಎದುರಾದವು. ಮನೆಯೊಳಗಿನ ಸ್ತ್ರೀಯ ಕೆಲಸಗಳು ಒಂದು ಬಗೆಯದಾದರೆ, ಮನೆಯ ಹೊರಗಿನ ಕೆಲಸಗಳು ಮತ್ತೊಂದು ಬಗೆಯವು. ಸಾಮಾಜಿಕ ವ್ಯವಸ್ಥೆಯೊಳಗೆ ಉಂಟಾದ ಮುಖ್ಯ ಪಲ್ಲಟವಿದು. ಇದು ಒಂದು ಬಗೆಯ ಪರಿವರ್ತನೆಯಾದರೆ ಇದರೊಂದಿಗೆ ಮತ್ತೊಂದು ರೀತಿಯ ಪರಿವರ್ತನೆಯು ಕೂಡ ಕಾಣಿಸಿಕೊಂಡಿತ್ತು. ಅದೆಂದರೆ - ಬ್ರಿಟೀಷರ ಕಾಲದಲ್ಲಿ ಉದ್ಯೋಗದ ಮಾದರಿಗಳಲ್ಲಿ ಉಂಟಾದ ಬದಲಾವಣೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಒಂದು ಹೊಸ ವರ್ಗಗಳ ಉದಯವಾಯಿತು. ಇದನ್ನು ಹೊಸ ಮಾದರಿಯ ಆಡಳಿತ ವರ್ಗವೆಂದು (ಬ್ಯೂರೋಕ್ರಸಿ) ಕರೆಯಬಹುದು. ಕಾರಕೂನರ ವರ್ಗವು ಉದಯವಾಯಿತು. ಔದ್ಯೋಗಿಕ ವಲಸೆಯು ಶುರುವಾಯಿತು. ಇದರಿಂದ ಭಾರತದಲ್ಲಿ ಪಾರಂಪರಿಕವಾಗಿದ್ದ ಅವಿಭಕ್ತ ಕುಟುಂಬವು ವಿಭಕ್ತ ಕುಟುಂಬಗಳಾದವು. ವಿಭಕ್ತ ಕುಟುಂಬದಲ್ಲಿ ಮಹಿಳೆಯ ಪಾತ್ರವು ಬದಲಾಯಿತು. ವಿಭಕ್ತ ಕುಟುಂಬದಲ್ಲಿ ಮಹಿಳೆಯೂ ಆರ್ಥಿಕ ಕಾರಣಗಳಿಗಾಗಿ ಮನೆಯ ಹೊರಗೆ ದುಡಿಯಬೇಕಾಯಿತು. ವಸಾಹತು ಸನ್ನಿವೇಶದಲ್ಲಿ ಅಧಿಕಾರ ಮತ್ತು ಸಂಸ್ಕೃತಿಯೆರಡೂ ಒಂದೇ ಆಯಿತು. ಇದರಿಂದ ಪಶ್ಚಿಮದ ಚಿಂತನೆಯ ಕ್ರಮಗಳು ಶಿಕ್ಷಣದ ಮೂಲಕ ಸಾಂಸ್ಕೃತಿಕ ವಿಸ್ತರಣೆಗೆ ಕಾರಣವಾಯಿತು. ಜಮೀನು, ಆಹಾರ, ಬಾಲ್ಯ ವಿವಾಹ ಇತ್ಯಾದಿಗಳು ಬ್ರಿಟೀಷರು ಬಂದ ಮೇಲೆ ಬದಲಾದವು. ಆ ಹೊತ್ತಿನ ಶಿಕ್ಷಣದಲ್ಲಿ ವಸ್ತುನಿಷ್ಠ ಜ್ಞಾನವೆಂಬುದು, ನೈತಿಕ ಶಿಕ್ಷಣವೆಂಬುದು ಮುಖ್ಯವಾಯಿತು. ಸ್ವ-ಅರಿವು ಇದರಿಂದ ಸಾಧ್ಯವಾಯಿತು. ಅಷ್ಟೇ ಅಲ್ಲ ಶಿಕ್ಷಣದಿಂದ ವೈಜ್ಞಾನಿಕ ಚಿಂತನೆಯ ಕ್ರಮ ಎಂಬುದು ಶುರುವಾಯಿತು. ನೆಹರೂರವರ ಅನೇಕ ಚಿಂತನೆಗಳ ಬೇರುಗಳು ಇದರಲ್ಲಿ ಅಡಕವಾಗಿವೆ.

ಬ್ರಿಟೀಷರು ಪ್ರಾರಂಭಿಸಿದ ಶಿಕ್ಷಣ ಕ್ರಮದಿಂದ ಜಾತಿಗಳ ಬಗೆಗಿನ ಪೂರ್ವಾಗ್ರಹಗಳು ಬದಲಾದವು. ಬ್ರಿಟೀಷರು ಧರ್ಮ ಮತ್ತು ರಾಜಕಾರಣವನ್ನು ಬೇರೆ ಮಾಡಲು ಪ್ರಯತ್ನಿಸಿದರು. ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ (ಪುನರುಜ್ಜೀವನ ಕಾಲಘಟ್ಟ) ಮಹಿಳೆಯರ ಪ್ರಶ್ನೆಯು ಮುಖ್ಯ ವಾಗ್ವಾದದ ಬಿಂದು ಆಯಿತು. ರಾಜಾರಾಮ್ ಮೋಹನರಾಯ್‌ಯಂಥವರು ಸತಿಪದ್ಧತಿಯ ನಿಷೇಧದ ಕುರಿತು ಮಾತಾಡಿದರು. ಈ ಸಂದರ್ಭದಲ್ಲಿಯು ವಿಧವಾ ವಿವಾಹದ ಅಗತ್ಯ ಎತ್ತಿಹಿಡಿಯಲಾಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಾರಂಭವಾದ ಸಾಮಾಜಿಕ ಸುಧಾರಣೆಯ ಚಳುವಳಿಗಳು ಸ್ತ್ರೀ ವಿದ್ಯಾಭ್ಯಾಸ, ಸತಿಪದ್ಧತಿಯ ನಿಷೇಧ, ವಿಧವಾ ವಿವಾಹದಂಥ ಪ್ರಮುಖ ಪ್ರಶ್ನೆಗಳನ್ನು ಎತ್ತಿಕೊಂಡವು. ಆಧುನಿಕತೆಗೆ ಮಹಿಳೆಯರನ್ನು ತಯಾರು ಮಾಡುವುದು ಇದರ ಹಿಂದಿನ ಉದ್ದೇಶ. ರಾಷ್ಟ್ರೀಯತೆಯ ಆಂದೋಲನದ ಜೊತೆಗಿದ್ದ ಉದಾರವಾದಿ ಮಾನವೀಯ ಚಿಂತನೆ ಮತ್ತು ಇನ್ನೊಂದು ಕಡೆಯಿಂದ ಆಧುನಿಕತೆ - ಎರಡೂ ಮಹಿಳೆಯರ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಿತು. ಇದರಿಂದ ಮಹಿಳಾ ಪ್ರಶ್ನೆಯು ತಾತ್ವಿಕ ಹಾಗೂ ಆದರ್ಶದ ಪರಿಕಲ್ಪನೆಯನ್ನು ಒಳಗೊಳ್ಳಬೇಕಾಯಿತು.

ರಾಷ್ಟ್ರೀಯ ಹೋರಾಟದ ಭಾಗವಾಗಿ ಮಹಿಳೆಯರ ಪ್ರಶ್ನೆಯನ್ನು ಅದು ಬಿಡಿಸಲು ಯತ್ನಿಸಿತು. ಸ್ತ್ರೀಯನ್ನು 'ಗೃಹಲಕ್ಷ್ಮಿ' ರೂಪಕದ ಮುಖಾಂತರ ಮಾತಾಡಿದ ರಾಷ್ಟ್ರೀಯ ಆಂದೋಲನವು ಸ್ತ್ರೀಯರಲ್ಲಿ ದೈವಾಂಶ ಗುಣವನ್ನೂ ಕಂಡುಕೊಂಡಿತು. ರಾಷ್ಟ್ರೀಯ ಆಂದೋಲನದಲ್ಲಿ ಮಹಿಳೆಯರು ಪ್ರಕೃತಿ, ಶಕ್ತಿ, ಆಧ್ಯಾತ್ಮಿಕ ರೂಪಕವಾದರು. ಸ್ತ್ರೀಯರನ್ನು ವೈಭವೀಕರಿಸಲಾದ ರೂಪಕಗಳ ಮತ್ತೊಂದು ಮಾದರಿಯೇ ಭಾರತಾಂಬೆ, ಕನ್ನಡಾಂಬೆಯ ಕಲ್ಪನೆ. ಭಾರತಾಂಬೆ, ಕನ್ನಡಾಂಬೆಯ ಪರಿಕಲ್ಪನೆಯಲ್ಲಿ ತಾಯ್ತನಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದು ಗಮನಾರ್ಹ. ವಾಸ್ತವವಾಗಿ ರಾಷ್ಟ್ರೀಯ ಆಂದೋಲನವು ವಸಾಹತುಶಾಹಿ ಮೌಲ್ಯ ಮತ್ತು ಪಶ್ಚಿಮದಿಂದ ಬಂದ ಮೌಲ್ಯಗಳ ಬಿಕ್ಕಟ್ಟನ್ನು ಎದುರಿಸಬೇಕಾಗಿತ್ತು. ಭೌತಿಕವಾಗಿ ಆಗ ಸ್ತ್ರೀಯರ ಸ್ಥಿತಿಯು ಅನುಕೂಲಕರವಾಗಿರಲಿಲ್ಲ. ಅಲೌಕಿಕವಾಗಿ ಮಾತ್ರ ಅನೇಕ ರೂಪಕಗಳು ಇದ್ದವು. ಈ ರೀತಿಯ ವ್ಯಾಖ್ಯೆಗಳಿಂದ ಸ್ತ್ರೀಯರ ಬಗ್ಗೆ ಉದಾರವಾದ ದೃಷ್ಟಿಕೋನವು ಬಂದಿದ್ದರೂ ಅಂತಿಮವಾಗಿ ಪಿತೃಪ್ರಧಾನ ವ್ಯವಸ್ಥೆಗೆ ಅದು ಬಲಿಯಾಯಿತು. ಸಾಮಾಜಿಕ ಸುಧಾರಣೆಯ ವಿಷಯದಲ್ಲಿ ಸ್ತ್ರೀ-ಪುರುಷರು ಸಮಭಾಗಿಗಳು ಎನ್ನುವುದನ್ನು ಕೂಡ ಆ ರಾಷ್ಟ್ರೀಯ ಆಂದೋಲನವೇ ಹೇಳಿತು. ಈ ರೀತಿಯ ವೈಚಾರಿಕ ಚೌಕಟ್ಟು ಕನ್ನಡದ ಮೊದ ಮೊದಲನೇ ವಿಮರ್ಶೆಯಲ್ಲಿ ಕಾಣಿಸಿಕೊಂಡಿತು.

೫. ತಿರುಮಲಾಂಬಾ ಅವರು ಸ್ತ್ರೀಯರಿಗೆ ದೊರೆಯಬೇಕಾದ ಶಿಕ್ಷಣ ಕ್ರಮ ಪುರುಷರಿಗೆ ದೊರೆಯುವ ಶಿಕ್ಷಣ ಕ್ರಮದಿಂದ ಬೇರೆ ರೀತಿಯಾಗಿರಬೇಕೆಂದು ಪ್ರತಿಪಾದಿಸುತ್ತಾರೆ. (ಹಿತೈಷಿಣಿಯ ಹೆಜ್ಜೆಗಳು ೧೯೯೨ ಪು. ೧೧೦) ತಿರುಮಲಾಂಬಾ ಅವರ ಪ್ರಕಾರ ಹೆಣ್ಣುಮಕ್ಕಳಿಗೆ, ಪುರುಷರಿಗೆ ದೊರೆಯುವ ರೀತಿ ಶಿಕ್ಷಣದ ಅಗತ್ಯವಿಲ್ಲ. "ಇಂತಹ ನವೀನ ವಿದ್ಯಾಭ್ಯಾಸದಿಂದ ನಮ್ಮ ಬಾಲಿಕೆಯರು ಯಾವುದನ್ನು ಸಂಪಾದಿಸಬೇಕಾಗಿದೆ? ಅವರಿಗೇನು ಕೊರತೆ? ಗಂಡಸರು

ದುಡಿದು ತಂದುದನ್ನು ಆಯವರಿತು ವೆಚ್ಚಮಾಡಿ ಸಮಯಕ್ಕೆ ಒದಗುವಂತೆ ಗಳಿಸಿಟ್ಟುಕೊಂಡು, ತಮ್ಮ ತಮ್ಮ ಮನೆ, ಮಾರು, ಮಠ, ಮಕ್ಕಳನ್ನು ಜೋಪಾನವಾಗಿಟ್ಟುಕೊಳ್ಳುವುದೇ, ಮನೆಯಲ್ಲಿರುವ ಅಶಕ್ತರು, ದಿನಗಳೆದವರು, ಆರ್ತರು ಇವರ ಲಾಲನೆ-ಪಾಲನೆಗಳಲ್ಲಿ ನಿರತರಾಗಿ, ದುಡಿದು ಬೇಸತ್ತು ಬರುವ ಗಂಡಸರಿಗೆ ತಮ್ಮ ಕೋಮಲ ಹೃದಯದಿಂದ ಆದರವನ್ನು ತೋರಿಸಿ, ಅವರ ಮನಸ್ಸಿಗೆ ಆಪ್ಯಾಯಮಾನವಾಗುವಂತೆ ಆರೈಕೆಯನ್ನು ಮಾಡಿಕೊಂಡರೆ, ಅವರ ಕರ್ತವ್ಯವೆಲ್ಲಾ ನೆರವೇರಿದಂತೆಯೇ ಸರಿ'' (ಅದೇ, ಪು. ೭೨೫). ಇದು ತಿರುಮಲಾಂಬಾ ಅವರ ಅಭಿಪ್ರಾಯ. ವಸಾಹತು ಕಾಲದ ಶಿಕ್ಷಣದ ಬಗ್ಗೆ ಬಂದಿರುವ ಒಂದು ಮಾದರಿಯ ಅಭಿಪ್ರಾಯ ಈ ರೀತಿಯದು. ಈ ಮಾದರಿಯ ಪ್ರತಿಕ್ರಿಯೆಯಲ್ಲಿ ಸಾಂಪ್ರದಾಯಿಕವಾದ ದೃಷ್ಟಿಕೋನವಿದೆ. ಆದರೆ ತಿರುಮಲಾಂಬಾ ಅವರ ಪ್ರತಿಕ್ರಿಯೆಯಲ್ಲಿ ಮತ್ತೊಂದು ಮಾದರಿಯಿದೆ. ''ಸ್ತ್ರೀಯರ ಉನ್ನತಿ ಅವನತಿಗಳ ಪ್ರತಿಯೊಂದು ವಿಚಾರದಲ್ಲಿಯೂ ಪುರುಷ ಲೇಖಕರಲ್ಲಿ ಭಿನ್ನಮತವು ಕಂಡು ಬರುತ್ತಲಿರುವುದು. ಈ ಬಗೆಯ ಭಿನ್ನಮತವು ಪುರುಷ ವರ್ಗದವರಲ್ಲಿ ಕಂಡುಬರುವುದಕ್ಕೆ ಸ್ತ್ರೀಯರ ಬುದ್ಧಿ, ಮನಸ್ಸು, ಅಂತಃಕರಣಗಳ ಪ್ರಾಕೃತಿಕ ರಚನೆ, ಸ್ವಭಾವಗಳ ಉಪಯುಕ್ತವಾಗಿಯೂ, ಸಾವಿರಾರು ವರ್ಷಗಳಿಂದ ಅನುವಂಶಿಕವಾಗಿಯೂ, ಅವರ ಮನಸ್ಸಿನ ಮೇಲೆ ಉಂಟಾಗಿರುವ ಸಂಸ್ಕಾರ ವಿಷಯಕವಾಗಿಯೂ ಪುರುಷರಿಗಿರುವ ಅಪೂರ್ಣ ಪರಿಚಯವೇ ಕಾರಣವಾಗಿರುವುದೆಂದು ನಮ್ಮ ಮತವಾಗಿರುವುದು'' (೧೯೨೦).

ತಿರುಮಲಾಂಬಾ ಅವರ ಮಾತಿನಲ್ಲಿ ಗೊತ್ತಾಗುತ್ತಿರುವಂತೆ ಅವರ ವಿಮರ್ಶೆಯ ನಿಲುವಿನ ಮಾನದಂಡ ದೈಹಿಕ ವ್ಯತ್ಯಾಸವನ್ನೇ ಅಂಗೀಕರಿಸಿದೆ. ದೇಹದ ವ್ಯತ್ಯಾಸವು ಗುಣ ಮತ್ತು ಬರವಣಿಗೆಯ ಪ್ರಭಾವ ಬೀರುತ್ತದೆ. ಆ ರೀತಿಯ ನಂಬಿಕೆಗೆ ಸಾವಿರಾರು ವರ್ಷದ ಇತಿಹಾಸವಿದೆಯೆಂದು ಅವರ ಅಭಿಪ್ರಾಯ. ತಿರುಮಲಾಂಬಾ ಅವರ ಬರಹವನ್ನು ಒಪ್ಪಬಹುದು ಅಥವಾ ಒಪ್ಪದೇ ಇರಬಹುದು. ಆದರೆ ಅವರ ಬರವಣಿಗೆಗೆ ಚಾರಿತ್ರಿಕ ಮಹತ್ವವಿದೆ. ಸಾಂಪ್ರದಾಯಿಕ ಪಿತೃರೂಪಿ ಸಂಸ್ಕೃತಿಯ ನಡುವೆ ಅವರಿಗೆ (ವಿಧವೆಯಾಗಿದ್ದು) ಲಿಖಿತ ರೂಪವಾಗಿ ಬರೆಯಲು ಸಾಧ್ಯವಾಯಿತು. ವಾಸ್ತವವಾಗಿ ಮೌನವನ್ನು ಭೇದಿಸಿ ಬರೆಯಲು ಸಾಧ್ಯವಾಗಿರುವುದೇ ಚಾರಿತ್ರಿಕವಾಗಿ ಮಹತ್ವದ ಪ್ರಕ್ರಿಯೆಯಾಗಿದೆ. ಸಾಂಪ್ರದಾಯಿಕ ಪಿತೃರೂಪಿ ಸಂಸ್ಕೃತಿಯಲ್ಲಿ ಬರೆಯಲು ಪ್ರಾರಂಭಿಸಿದ ಚಟುವಟಿಕೆಯು ಮುಖ್ಯವಾದುದು. ಚಾರಿತ್ರಿಕವಾಗಿ ಈ ರೀತಿಯ ಬರವಣಿಗೆಗಳ ಮಾದರಿಗಳು ಗಂಡು-ಹೆಣ್ಣಿನ ನಡುವಣ ತಾರತಮ್ಯ ಮತ್ತು ಅದರ ಹಿಂದಿರುವ ರಾಜಕಾರಣಗಳನ್ನು ಬಯಲಿಗೆಳೆಯುತ್ತವೆ. ಇದು ಮುಖ್ಯವಾದುದು.

ತಿರುಮಲಾಂಬಾ ಅವರ ಚಿಂತನೆಯಲ್ಲಿ ಆ ಹೊತ್ತಿನ (ಅಂದರೆ ವಸಾಹತು ಕಾಲಘಟ್ಟದ) ಮಹಿಳಾ ಸ್ಥಿತಿಗತಿ ಮತ್ತು ಅವರ ಮುಂದಿರುವ ಆಯ್ಕೆಯ ಸಂಗತಿಗಳಿವೆ. ಪಶ್ಚಿಮದ ಮಾದರಿಯು ಬೇಡವೆಂಬುದು ಅವರ ಖಚಿತವಾದ ನಿಲುವು. ವಸಾಹತು ಆಳ್ವಿಕೆಯಲ್ಲಿ ಒಳಗಾದ ಸ್ತ್ರೀಯರ ಶಿಕ್ಷಣ. ಅವರ ಜೊತೆಗಿರುವ ಸಂಪ್ರದಾಯ, ಕೌಟುಂಬಿಕ ಭಾವನಾತ್ಮಕ ಸಂಬಂಧಗಳ ನಿರೂಪಣೆಯೇ ತಿರುಮಲಾಂಬಾ ಅವರಲ್ಲಿ ಮುಖ್ಯವಾಗಿವೆ. ಮೂರನೆಯ ಜಗತ್ತಿನ ಸ್ತ್ರೀಯರು

ಆಧುನಿಕತೆ ಮತ್ತು ಸಂಪ್ರದಾಯಗಳ ಹಿಡಿತದಲ್ಲಿರುತ್ತಾರೆಂಬ ಗಾಯತ್ರಿ ಸ್ಪಿವಾಕ್ ಅವರ ಮಾತು ಇಲ್ಲಿ ಉಲ್ಲೇಖನೀಯ. ತಿರುಮಲಾಂಬಾ ಅಂಥವರು ಬರೆದುದೇ ಈ ದೃಷ್ಟಿಯಿಂದ ಸಾಂಸ್ಕೃತಿಕ ಬಿಡುಗಡೆಯ ದ್ಯೋತಕವಾಗಿದೆ ಮತ್ತು ಹೀಗೆ ತಿರುಮಲಾಂಬಾ ಅವರ ಬರಹಗಳು ಆ ಕಾಲದ ಸಾಮಾಜಿಕ, ರಾಜಕೀಯ ಸಂಕಥನ (Discourse) ವಾಗಿವೆ.

೬. ಸಾಹಿತ್ಯವೇ ಒಂದು ರೀತಿಯ ಸ್ತ್ರೀ ಮಾದರಿಯ ಸಂಕಥನ (Feminine Discourse). ಈ ರೀತಿಯ ತಾತ್ವಿಕ ಚಿಂತನೆಯು ಕನ್ನಡದಲ್ಲಿಯೂ ಬಂದಿದೆಯೆಂಬುದು ಗಮನಾರ್ಹ. "ಜೀವನವೇ ದೇವತೆಯಾದ, ತ್ರಿಪದಿ ಛಂದದಲ್ಲಿ ಹೊರಹೊಮ್ಮಿದ ಈ 'ಗರತಿಯ ಹಾಡಿನ' ಋಷಿಗಳು ಹೆಣ್ಣುಮಕ್ಕಳು. ನಮ್ಮ ತಾಯಿ ತಂಗಿಯರು ಅಮ್ಮ-ಅಕ್ಕಂದಿರು, ಮಡದಿ ಮಕ್ಕಳು. ಹಾಗೆ ವಿಚಾರಿಸಿ ನೋಡಿದರೆ ಅವರದೇ ನಿಜವಾದ ಕಾವ್ಯ. ಉಳಿದುದು ಕಾವ್ಯದ ಛಾಯೆ. ಕಾವ್ಯವು ಕಾಂತಾ ಸಮ್ಮಿತೆಯೆಂದು ಹೇಳುವರಷ್ಟೆ? ಕಾಂತೆಯರ ಮಾತಿನಂತಿರುವುದೇ ಕಾವ್ಯವಾದರೆ, ಕಾಂತೆಯರ ಮಾತೇ ಕಾವ್ಯದ ಮಾತೆಯಲ್ಲವೇ?" (ಬೇಂದ್ರೆ-ಗರತಿಯ ಹಾಡು ಕಾಂತಾ ಸಂಹಿತಿ) ಸಾಹಿತ್ಯವೆಂದರೆ ಒಂದು ಸಾಮಾನ್ಯವಾದ ಬೌದ್ಧಿಕ ಚಟುವಟಿಕೆಯೆಂಬುದನ್ನು ಬೇಂದ್ರೆಯವರು ನಿರಾಕರಿಸುತ್ತಾರೆ. ಕಾವ್ಯವೆಂದರೆ ಕಾಂತಾ ಸಂಹಿತೆಯೆಂಬುದು ಬೇಂದ್ರೆಯವರ ವಾದ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಬಂದಿರುವ ಪ್ರಭುಸಂಹಿತೆ, ಮಿತ್ರಸಂಹಿತೆ, ಕಾಂತಾ ಸಂಹಿತೆಯಲ್ಲಿ ಬೇಂದ್ರೆಯವರು ಕಾಂತಾ ಸಂಹಿತೆಯನ್ನು ಎತ್ತಿಕೊಂಡು ಹೊಸ ಬಗೆಯಲ್ಲಿ ವ್ಯಾಖ್ಯಾನಿಸುತ್ತಾರೆ. ಮೌಖಿಕ ಸಂಪ್ರದಾಯದ ಕಾವ್ಯವನ್ನು ಕಾಂತೆಯರದು ಮತ್ತು ಅದುವೇ ನಿಜವಾದ ಕಾವ್ಯವೆಂದು ಅವರು ಗುರುತಿಸಿರುವುದು ಕುತೂಹಲದಾಯಕವಾಗಿದೆ. ಅವರು ಮಹಿಳಾ ಸೃಜನಶೀಲತೆಯನ್ನು ಈ ಮೂಲಕ ಗುರುತಿಸಿದಂತಾಗಿದೆ. ಕಾವ್ಯದ ಉಗಮಕ್ಕೆ ಮಹಿಳೆಯರೇ ಕಾರಣವೆಂಬುದು ಇಲ್ಲಿಯ ಧ್ವನಿತಾರ್ಥವಾಗಿದೆ.

೭. 'ಕನ್ನಡ ಭಾರತದಲ್ಲಿ ಶೃಂಗಾರ ಸನ್ನಿವೇಶಗಳು' ಲೇಖನದಲ್ಲಿ ತೀ.ನಂ.ಶ್ರೀಯವರು ದ್ರೌಪದಿಯ ಬಗ್ಗೆ ಹೀಗೆ ಹೇಳುತ್ತಾರೆ. "ದ್ರೌಪದಿ ಭಾರತದ ಕ್ರಿಯಾಶಕ್ತಿ, ಆದ್ದರಿಂದಲೇ ಕುಮಾರವ್ಯಾಸನು ಅವಳ ಸ್ವಯಂವರದ ಪ್ರಸಂಗವನ್ನು ಉದ್ದೇಶಪೂರ್ವಕವಾಗಿ ಬೆಳೆಸಿದನು. ಅವಳ ಸೌಂದರ್ಯವನ್ನು ಮನದಣಿಯ ಬಣ್ಣಿಸಿದನು". ತೀ.ನಂ. ಶ್ರೀಯವರು ದ್ರೌಪದಿಯನ್ನು ಕ್ರಿಯಾಶಕ್ತಿಯೆಂದು ಕರೆದರೂ ಅನಂತರದ ವಾಕ್ಯಗಳು ಅವರ ನಿಲುವನ್ನು ಸ್ಪಷ್ಟಪಡಿಸುತ್ತವೆ. ಕುಮಾರವ್ಯಾಸನು ದ್ರೌಪದಿಯ ವರ್ಣನೆಯನ್ನು ಮಾಡಿರುವುದರಲ್ಲಿ ತೀ.ನಂ. ಶ್ರೀಯವರಿಗೆ ಯಾವ ತೊಡಕೂ ಕಾಣಿಸುವುದಿಲ್ಲ. ದ್ರೌಪದಿಯನ್ನು ಯಾಕಾಗಿ ಕುಮಾರವ್ಯಾಸ ಅಷ್ಟೊಂದು ವೈಭವೀಕರಿಸಿದ? ಅದರ ಚಾರಿತ್ರಿಕ ಹಿನ್ನೆಲೆಯೇನು? ದ್ರೌಪದಿಯನ್ನೇ ಕೇಂದ್ರವಾಗಿರಿಸಿ ಕೊಂಡುದರಲ್ಲಿ ಕುಮಾರವ್ಯಾಸನ ದೃಷ್ಟಿಯು ಯಾವ ಬಗೆಯಿತ್ತು? ಇತ್ಯಾದಿಗಳ ವಿಶ್ಲೇಷಣೆಯು ತೀ.ನಂ.ಶ್ರೀಯವರ ಬರಹದಲ್ಲಿ ದೊರೆಯುವುದಿಲ್ಲ. ದ್ರೌಪದಿಯನ್ನು ಮನದಣಿಯೆ ಹೊಗಳುವ ಕುಮಾರವ್ಯಾಸನಲ್ಲಿ ವ್ಯಕ್ತವಾಗುವ ಪುರುಷಕೇಂದ್ರಿತ ದೃಷ್ಟಿಕೋನವನ್ನು ಮರೆಮಾಚುವಂತಿಲ್ಲ. ಕುಮಾರವ್ಯಾಸನ ಗಮನವು ದ್ರೌಪದಿಯ ದೇಹದ ವಿವರದಲ್ಲಿಲ್ಲವೇ? ಮಹಿಳೆಯು ಸಾಮಾಜಿಕ

ವಾಗಿ ಇರುವುದಕ್ಕೂ, ಕುಮಾರವ್ಯಾಸನು ಸಾಹಿತ್ಯದಲ್ಲಿ ದ್ರೌಪದಿಯನ್ನು ಕಟ್ಟಿರುವುದಕ್ಕೂ ವ್ಯತ್ಯಾಸವಿದೆ. ಬರಹದಲ್ಲಿ ಕುಮಾರವ್ಯಾಸನು 'ದ್ರೌಪದಿ'ಯೆಂಬ ಮಹಿಳೆಯನ್ನು ನೋಡಿರುವುದು ಅವನ ಲಿಂಗ ತಾರತಮ್ಯ ತಾತ್ವಿಕತೆಗೂ ಸಂಬಂಧಿಸಿದೆ. ಮಹಾಕಾವ್ಯ ಸಂರಚನೆಯ ಕ್ರಮದಲ್ಲಿ ಸ್ತ್ರೀ ಪಾತ್ರಗಳು ಪೂರಕವಾಗಿರುತ್ತವೆ. ಈ ದೃಷ್ಟಿಯಿಂದ ಕುಮಾರವ್ಯಾಸ ಭಾರತದಲ್ಲಿ ಬರುವ ದ್ರೌಪದಿಯ ವರ್ಣನೆಯು ಆ ಸಂರಚನೆಯ ಒಂದು ಭಾಗವಾಗಿದೆ. ಅದು ಕೂಡಾ ಪಿತೃರೂಪಿ ಸೌಂದರ್ಯ ಮೀಮಾಂಸೆಯ ಒಂದು ಭಾಗ ಮಾತ್ರವೆಂಬುದು ಉಲ್ಲೇಖನೀಯ. ಪುರುಷ ಕೇಂದ್ರಿತ ಸೌಂದರ್ಯ ಮೀಮಾಂಸೆಯು ಸ್ತ್ರೀ ದೇಹದ ವರ್ಣನೆಯನ್ನು ಕೂಡ ಸೌಂದರ್ಯದ ಭಾಗವೆಂದು ಮಾತ್ರ ಪರಿಗಣಿಸುತ್ತದೆ. ಅಂಗಸೌಷ್ಟವವಿರುವ ಸ್ತ್ರೀಯರಿಗೆ ಮಾತ್ರ ಮಹಾಕಾವ್ಯ ದಲ್ಲಿ ಅವಕಾಶ.

೮. ಆದರೆ ಸೀತಾಮಾತೆ ಸಾಮಾನ್ಯ ಸ್ತ್ರೀಯಲ್ಲ. ಭರತಖಂಡದ ರಮಣಿಯರಿಗೆ ಆದರ್ಶಪ್ರಾಯಳಾದವಳು. ಶ್ರೀ ವಿವೇಕಾನಂದರ ಮಾತಿನಲ್ಲಿ, "ಶ್ರೀರಾಮರಂಥಾ ಮಹಾ ಪುರುಷರು ಹಿಂದೆಯೂ ಅನೇಕರಿದ್ದರು, ಮುಂದೆಯೂ ಅನೇಕರು ಬರಬಹುದು. ಆದರೆ ಸೀತಾದೇವಿ ಸರ್ವಕಾಲಕ್ಕೂ ಒಬ್ಬಳೇ. ತನಗೆ ಬಂದೊದಗಿದ ಎಡರುಗಳನೆಲ್ಲವನ್ನು ಗೊಣ ಗುಟ್ಟದೆ ಸಹಿಸಿದ ಪುಣ್ಯಮಾತೆ ಆಕೆ. ಆಕೆ ಅಪ್ರತಿಮ ಸ್ತ್ರೀ, ಅದ್ವಿತೀಯಳಾದವಳು, ಎಣೆ ಯಿಲ್ಲದವಳು ಅಂಥಾ ಮಾತೆಯನ್ನು ಹಿಂದೆ ನಾವೆಲ್ಲಿಯೂ ಕಂಡಿಲ್ಲ, ಮುಂದೆಯೂ ಕಾಣ ಲಾರೆವು" (ಕುವೆಂಪು-ಲಕ್ಷ್ಮೀಶನ ಸೀತಾ ವನವಾಸ-ಕಾವ್ಯವಿಹಾರ) ಸಾಹಿತ್ಯ ಕೃತಿಗಳಲ್ಲಿಯೂ 'ಆದರ್ಶ ಸ್ತ್ರೀ'ಯ ಹುಡುಕಾಟವು ಹೇಗೆ ನಡೆಯಿತು ಎಂಬುದಕ್ಕೆ ಇದೊಂದು ಸಾಕ್ಷಿ. ರಾಷ್ಟ್ರೀಯ ಆಂದೋಲನವು ಆದರ್ಶ ಸ್ತ್ರೀಯ ಕಲ್ಪನೆಯನ್ನು ಮುಂದಕ್ಕಿಟ್ಟಿತು. ಅದರ ಹಿಂದಿರುವ ತಾತ್ವಿಕತೆಯೇ ಸಾಹಿತ್ಯ ವಿಮರ್ಶೆಯಲ್ಲಿಯೂ ವ್ಯಾಪಿಸಿಕೊಂಡಿತು. ಸೀತೆಯನ್ನು ಮಾತೆಯೆಂದು ಕರೆಯುವುದರ ಮೂಲಕ ಸ್ತ್ರೀಯ ಒಂದು ಕೆಲಸ (ತಾಯ್ತನ)ದ ವೈಭವೀಕರಣ ನಡೆಯಿತು ಮಾತ್ರವಲ್ಲ; ಅದರ ಸ್ತ್ರೀ ಪ್ರತೀಕದ ಆದರ್ಶ ನಿರ್ಮಾಣವು ಸಾಹಿತ್ಯ ವಿಮರ್ಶೆಯಲ್ಲಿ ಜರುಗಿತು.

೯. 'ಸತೀ ಹಿತೈಷಿಣೀ ಗ್ರಂಥಮಾಲೆ'ಯಲ್ಲಿ ತಿರುಮಲಮ್ಮನವರ ಕೃತಿಗಳು ಪ್ರಕಟವಾಗಿದ್ದವು. ಅವುಗಳ ಕುರಿತು ಮಾಸ್ತಿಯವರು ಸುದೀರ್ಘವಾದ ಲೇಖನವೊಂದನ್ನು ಬರೆದು ತಿರುಮಲಮ್ಮ ನವರ ವಿಚಾರದ ಬಗ್ಗೆ ತಮ್ಮ ಭಿನ್ನಾಭಿಪ್ರಾಯವನ್ನು ಹೇಳುತ್ತಾರೆ. "ಸ್ತ್ರೀಯರು ವಿದ್ಯಾವತಿಯರಾ ಗುವುದು ದೇಶದ ಏಳಿಗೆಗೆ ಅತ್ಯಾವಶ್ಯಕವೆಂದು ಎಲ್ಲರೂ ಒಪ್ಪುವರು. ಈ ವಿಷಯವನ್ನು ಈ ಪುಸ್ತಕಗಳಲ್ಲಿ ಗ್ರಂಥಕರ್ತರು ಒತ್ತಿ ಒತ್ತಿ ಹೇಳಿದ್ದಾರೆ. ಆದರೆ ವಿದ್ಯೆ ಎಂದರೆ ಓದುಬರಹ ಬರುವುದು ಎಂದು ಸಾಮಾನ್ಯವಾಗಿ ಜನರೆಲ್ಲರೂ ತಿಳಿದಿರುವ ಹಾಗೆಯೇ ಇವರೂ ಎಣಿಸುತ್ತಾರೆಂದು ತೋರುತ್ತದೆ". ಮಾಸ್ತಿಯವರು ಹೀಗೆ ತಿರುಮಲಾಂಬಾ ಅವರ ಪುಸ್ತಕಗಳ ಹಿಂದಿರುವ ತಾತ್ವಿಕತೆಯನ್ನೇ ಪ್ರಶ್ನಿಸುತ್ತಾರೆ. ಆದರೆ ಒಟ್ಟು ವಿಮರ್ಶೆಯಲ್ಲಿ ಮಾಸ್ತಿಯವರ ನಿಲುವು ಕೃತಿಯ ಬಂಧದಲ್ಲಿಯೂ ಪೂರ್ಣವಾಗಿರಬೇಕೆಂಬುದೇ ಆಗಿದೆ.

೧೦. ಕುವೆಂಪು ಅವರ 'ದ್ರೌಪದಿಯ ಶ್ರೀಮುಡಿ' ಲೇಖನದಲ್ಲಿ ದ್ರೌಪದಿಯ ಮುಡಿಯ

ಔಚಿತ್ಯದ ಕುರಿತು ವಿವರವಾದ ಚರ್ಚೆಯನ್ನು ಮಾಡುತ್ತಾರೆ. ಪರೋಕ್ಷವಾಗಿ ಇದರ ಮುಖಾಂತರ ಸಾಹಿತ್ಯ ವಿಮರ್ಶೆಯ ಒಂದು ಮಾದರಿಯನ್ನು ಕುವೆಂಪು ಸೂಚಿಸುತ್ತಾರೆ. ಪಾತ್ರ ವಿಶ್ಲೇಷಣೆಯ ಹೆಜ್ಜೆಯಲ್ಲಿ ಸಾಗುವ ಈ ವಿಮರ್ಶೆಯಲ್ಲಿ 'ದ್ರೌಪದಿ'ಯ ಶ್ರೀಮುಡಿಯೇ ಹೆಚ್ಚು ಮುಖ್ಯವಾದುದು. ಪದ್ಯ ವಿಶ್ಲೇಷಣೆಯ ಸಂದರ್ಭದಲ್ಲಿ ಕುವೆಂಪು ಅವರು ಹೇಳುವ ಮಾತು ಹೀಗಿದೆ. "ಆ ಮುಡಿ ಬರಿಯ ಕೂದಲುಂಡೆಯಲ್ಲ, ಆ ಕೂದಲು ಯಃಕಶ್ಚಿತ್ ಸ್ತ್ರೀಯೊಬ್ಬಳದ್ದಲ್ಲ; ಅದು ಸಿರಿಮುಡಿ ಮಾತ್ರವಲ್ಲ, ಶ್ರೀಮುಡಿಯೂ ಹೌದು". ಕೃತಿಯೊಂದರ ಪಾತ್ರ ವಿಶ್ಲೇಷಣೆಯ ಮಾದರಿಯಲ್ಲಿ ಮೇಲುನೋಟಕ್ಕೆ ಪುರುಷ-ಸ್ತ್ರೀಯೆಂಬುದರ ವರ್ಗೀಕರಣವಿದ್ದು, ಅದು ಪಾತ್ರ ವಿಶ್ಲೇಷಣೆಯ ಕಡೆಗೆ ಸಾಗುತ್ತದೆ. ಆದರೆ ಈ ಮಾದರಿಯಲ್ಲಿ ಪಾತ್ರ ಮುಖ್ಯವಾಗಿರುವುದರಿಂದ ಸಾಹಿತ್ಯ ಕೃತಿ ಸೂಚಿಸುವ ಇತರ ಅನೇಕ ಅಂಶಗಳು ಕಾಣೆಯಾಗಿ ಬಿಡುತ್ತವೆ.

೧೧. "ಪುರುಷ ಕಾವ್ಯವಿರಲಿ, ಮಹಿಳಾ ಕಾವ್ಯವಿರಲಿ ಅದು ಮೊದಲು ಕಾವ್ಯವಾಗಿರಬೇಕು" ಎಂದು ಜಿ.ಎಸ್. ಅಮೂರ ಅವರು ಹೇಳುತ್ತಾರೆ. (ಮಹಿಳಾ ಕಾವ್ಯ, ಸಾಧನೆ ಮತ್ತು ಸಮಸ್ಯೆಗಳು) ಅಮೂರರು ಹೇಳಿ, ಕೇಳಿ ನವ್ಯ ವಿಮರ್ಶಕರು. ಆದುದರಿಂದ ಅವರು ಸಹಜವಾಗಿಯೇ ಕಾವ್ಯಕ್ಕಾಗಿ ಕಾವ್ಯ ಎಂಬ ಅಂತಸ್ಥ ಧೋರಣೆಯಿಂದಲೇ ಕಾವ್ಯದ ನಿರೀಕ್ಷೆಯನ್ನು ಮಾಡುತ್ತಾರೆ. ಕಲಾತ್ಮಕತೆಯೆನ್ನುವುದೇ ಒಂದು ಪೂರ್ವಾಗ್ರಹ. ಈ ರೀತಿಯ ಪೂರ್ವಾಗ್ರಹದಿಂದಲೇ ಸುಲಭವಾಗಿ ವಾಸ್ತವದಲ್ಲಿರುವ ಗಂಡು - ಹೆಣ್ಣಿನ ವರ್ಗ ಪ್ರಭೇದವನ್ನು ತಳ್ಳಿ ಹಾಕುತ್ತಾರೆ.

೧೨. ಅಮೂರ, ಜಿ.ಎಸ್. ಅವರು ಮತ್ತೊಂದು ಕಡೆ ಹೀಗೆ ಹೇಳುತ್ತಾರೆ. "ಪೂರಕ ವಿಮರ್ಶೆಯ ಅಭಾವ ಮಹಿಳಾ ಸಾಹಿತ್ಯದ ಆರೋಗ್ಯಕರ ಬೆಳವಣಿಗೆಗೆ ಮಾರಕವಾಗಿದೆ ಎಂಬ ಮಾತೊಂದಿದೆ. ಮಹಿಳೆಯರು ಬರೆದ ಕತೆಗಳು ಗಂಭೀರ ವಿಮರ್ಶೆಗೆ ಒಳಗಾಗಿಲ್ಲ ಎನ್ನುವುದನ್ನು ಒಪ್ಪಿಕೊಳ್ಳಲೇಬೇಕು. ಆದರೆ ಮೊದಲಿನಿಂದಲೂ ಉದಯೋನ್ಮುಖ ಕತೆಗಾರ್ತಿಯರಿಗೆ ಹಿರಿಯ ಸಾಹಿತಿಗಳಿಂದ ಪ್ರೋತ್ಸಾಹ ಹಾಗೂ ತಕ್ಕಮಟ್ಟಿನ ಮಾರ್ಗದರ್ಶನ ದೊರೆಯುತ್ತಲೇ ಬಂದಿದೆ ಎನ್ನುವ ಮಾತು ಅಷ್ಟೇ ನಿಜವಾದ್ದು" (ಅವಳ ಕತೆಗಳು). ಮಹಿಳಾ ಸಾಹಿತ್ಯದ ಆರೋಗ್ಯಕರವಾದ ಬೆಳವಣಿಗೆಯು ಆಗಿಲ್ಲವೆಂಬುದೇ ಅಮೂರರ ಕೊರಗು. ಇದು ಅಷ್ಟು ಸರಿಯಾದ ಅಭಿಪ್ರಾಯವಲ್ಲ.

೧೩. "ಲಿಂಗ ಅಸಮಾನತೆಯನ್ನು ಶೋಧಿಸುವುದೇ ಗೌರಮ್ಮನ ಬರವಣಿಗೆಯ ಪ್ರಧಾನ ಕಾಳಜಿ ಎಂದೆ. ಹೀಗಿರುವುದರಿಂದಲೇ ಅವರ ಅನೇಕ ಕತೆಗಳ ಮುಕ್ತಾಯ ಸಮಸ್ಯೆಗಳ ಸರಳೀಕೃತ ಪರಿಹಾರಗಳೆಂದು ಮೇಲುನೋಟಕ್ಕೆ ಕಂಡರೂ ಕಥೆಗಳು ನಿಯೋಜಿಸುವ ಅರಿವಿನ ಸ್ಫೋಟಕ್ಕೇನೂ ಅಂಥ ಭಂಗ ಬರುವುದಿಲ್ಲ" ಎಂದು ಕೊಡಗಿನ ಗೌರಮ್ಮನ ಕಥೆಗಳ ಕುರಿತು ಬರೆಯುತ್ತಾ, ಟಿ.ಪಿ. ಅಶೋಕ ಅವರು ಹೇಳುತ್ತಾರೆ. ಆದರೆ ಅಶೋಕರ ಮಾತುಗಳಲ್ಲಿ ಲಿಂಗ ರಾಜಕಾರಣದ ಸಮಸ್ಯೆಗಳಿಗಿಂತ ಕೃತಿಯ ರಚನೆಯ ಪರಿಣಾಮಗಳೇ ಹೆಚ್ಚು ಮುಖ್ಯವಾಗಿವೆ.

೧೪. ಕವಿತೆಯೆಂದರೆ ನಿರ್ಧಾರವಾಗಬಾರದು ಎಂಬ ಅಭಿಪ್ರಾಯವನ್ನು ಮಂಡಿಸುತ್ತಾ ಎನ್.ಎಸ್. ಲಕ್ಷ್ಮೀನಾರಾಯಣಭಟ್ಟರು ಶೈಲಜಾ ಉಡುಚಣ ಅವರ ಕವಿತೆಗಳ ಕುರಿತು ಹೀಗೆ ಬರೆಯುತ್ತಾರೆ. "ಅವರ ಬರಹದ ಉತ್ತಮಾಂಶ ಕೆಲವು ಅನುಭವದ ಗಳಿಗೆಗಳನ್ನು ಆಕರ್ಷಕವಾಗಿ ಹಿಡಿದಿಡುವ ರೀತಿಯಲ್ಲಿದೆ. ಆದರೆ ಹೆಚ್ಚು ತೊಡಕಿಗೆ ಹೋಗದೆ ಸುಲಭವಾಗಿ ಒಂದು ನಿರ್ಧಾರಕ್ಕೆ ಜಾರಿಬಿಡುವ ಇವರ ಕವನಗಳು ಬಹುಬೇಗನೆ ನಿರ್ಣಯಗಳಲ್ಲಿ ಫಲಿಸಿಬಿಡುತ್ತವೆ". (ಎಪ್ಪತ್ತೆರಡರ ಕಾವ್ಯ-ಹೊರಳು ದಾರಿಯಲ್ಲಿ ಕಾವ್ಯ) ಈ ಮಾತುಗಳಲ್ಲಿಯೂ ಕಾವ್ಯಶಿಲ್ಪವೇ ಮುಖ್ಯವಾಗಿದೆ.

೧೫. 'ಅಕ್ಕಮಹಾದೇವಿ ಪ್ರೇಮ ಮತ್ತು ಕಾಮದ ಸಂಘರ್ಷ ಹಾಗೂ ಅನುಭಾವದ ಆಶಯ' (ಬಸವರಾಜ ಕಲ್ಗುಡಿ), ಎಂ.ಕೆ. ಇಂದಿರಾ ಅವರ ಫಣಿಯಮ್ಮ - ಒಂದು ಸಮೀಕ್ಷೆ (ವಿ.ಗ. ನಾಯಕ)ದಂಥ ಲೇಖನಗಳು ಕೃತಿಕಾರ್ತಿಯರ ಕೃತಿಯನ್ನು ಸಾಂಸ್ಕೃತಿಕ ವಿಮರ್ಶೆಯ ಮಾನದಂಡದಲ್ಲಿ ವಿಮರ್ಶಿಸುವ ಪ್ರಯತ್ನವನ್ನು ಮಾಡುತ್ತವೆ. ಈ ಇಬ್ಬರೂ ವಿಮರ್ಶಕರು ಸಂಸ್ಕೃತಿಯನ್ನು ಒಂದು ಅವಕಾಶದಲ್ಲಿ (Space) ಇಡುವುದಿಲ್ಲ ಎಂಬುದು ಗಮನಾರ್ಹ.

೧೬. "ಕನ್ನಡ ಕಾದಂಬರಿಕಾರ್ತಿಯರ ಮುಕ್ಕಾಲು ಪಾಲು ಕೃತಿಗಳಲ್ಲಿಯ ಒಡೆದು ಕಾಣುವ ಅಂಶವೆಂದರೆ, ಇವುಗಳಲ್ಲಿ ಈ ಬಗೆಯ ಕೇಂದ್ರ ವಸ್ತುವೇ ಇಲ್ಲದಿರುವುದು. ಇವರಲ್ಲಿ ಹೆಚ್ಚು ಜನ ಕೇವಲ ಘಟನೆ ಇಲ್ಲವೆ ಪಾತ್ರವೇ ಮುಖ್ಯವಾದ ಕಥೆಗಳ ನಿರೂಪಣೆಯಲ್ಲಿಯೇ ಆಸಕ್ತಿ ತಳೆದಿದ್ದಾರೆ. ಈ ಕಥೆಯ ಹಿಂದೆ ಒಂದು ನಿರ್ದಿಷ್ಟವಾದ ಉದ್ದೇಶ, ಘಟನೆ-ಪಾತ್ರ ವರ್ಣನೆ ಇತ್ಯಾದಿಗಳನ್ನೆಲ್ಲ ಒಂದು ಕೇಂದ್ರಕ್ಕೆ ಜೋಡಿಸುವ ವಸ್ತು ಇಲ್ಲ. ವಸ್ತುವೇ ಇಲ್ಲದ್ದರಿಂದ ಅದರ ಬಗೆಗೆ ಲೇಖಿಕಿ ತಳೆಯುವ ದೃಷ್ಟಿಕೋನ ಮೌಲ್ಯ ವಿವೇಚನೆಯ ತೊಡಕು. ಆ ವಸ್ತುವಿನ ಸಂಕೀರ್ಣ ಸ್ವರೂಪವನ್ನು ತೋರಿಸುವ ಸಂವಿಧಾನ ಕೌಶಲ ಇತ್ಯಾದಿಗಳ ಪ್ರಶ್ನೆಯೇ ಏಳುವುದಿಲ್ಲ" ಎಂದು ಗಿರಡ್ಡಿ ಗೋವಿಂದರಾಜರು ಹೇಳುತ್ತಾರೆ(ಹೆಣ್ಣುಮಕ್ಕಳ ಕಾದಂಬರಿಯಲ್ಲಿ ವಸ್ತು ವಿನ್ಯಾಸ-ಸಾಹಿತ್ಯ ಮತ್ತು ಪರಂಪರೆ). ನವ್ಯ ವಿಮರ್ಶಕರಾದ ಗಿರಡ್ಡಿಯವರು - ನವ್ಯ ವಿಮರ್ಶೆಯ ತಾತ್ವಿಕತೆಗೆ ತಕ್ಕಂತೆ ಈ ಮಾತುಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ ಈ ಮಾತುಗಳಲ್ಲಿ ಪುರುಷಕೇದ್ರಿತ ದೃಷ್ಟಿಕೋನದ ಪೂರ್ವಾಗ್ರಹವಿದೆ. ಎರಡನೆಯದಾಗಿ ಕೃತಿಯೆಂದರೆ ಒಂದು ಕೇಂದ್ರವಿರಲೇಬೇಕೆಂಬ ಹಂಬಲವಿದೆ. ಈ ಎರಡೂ ದೃಷ್ಟಿಕೋನಗಳು-ಮಹಿಳೆಯರು ಬರೆದ ಕಾದಂಬರಿಗಳ ಬಗ್ಗೆ ತಾಳ್ಮೆಯಿಲ್ಲದೆ ಮಾತಾಡುವ ಹಾಗೆ ಮಾಡಿಬಿಟ್ಟಿದೆ.

೧೭. ಮಲ್ಲಿಕಾ ಘಂಟಿಯವರ 'ತನು ಕರಗದವರಲ್ಲಿ', ಚೆನ್ನಕ್ಕ ಪಾವಟೆಯವರ 'ಸಾಹಿತ್ಯ ಚೈತ್ರ'ದ ಕೃತಿಗಳು "ಸ್ತ್ರೀ"ಯನ್ನು ಕೇಂದ್ರವಾಗಿರಿಸಿಕೊಂಡಿವೆಯಾದರೂ ಇವಕ್ಕೆ ಅನೇಕ ಮಿತಿಗಳಿವೆ. ಮತ್ತೆ ಈ ರೀತಿಯ ಕೃತಿಗಳು ಉಕ್ತವಾದ ಸ್ತ್ರೀ ಪಾತ್ರಗಳನ್ನು ಮಾತ್ರ ಚರ್ಚೆಯ ಕೇಂದ್ರವಾಗಿರಿಸಿಕೊಂಡಿವೆ.

೧೮. ಭಾರತೀಯ ಸ್ತ್ರೀವಾದ(ಮನು ಚಕ್ರವರ್ತಿ), ಸ್ತ್ರೀವಾದಿ ಪ್ರವೇಶಿಕೆ(ಎನ್. ಗಾಯತ್ರಿ), ಸ್ತ್ರೀವಾದಿ ಸಾಹಿತ್ಯ ವಿಮರ್ಶೆ (ತೇಜಸ್ವಿನಿ ನಿರಂಜನ), ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ (ಎಂ. ಉಷಾ), ಮಹಿಳೆ ಸಾಹಿತ್ಯ ಮತ್ತು ಸಮಾಜ (ವಿಜಯಾ ದಬ್ಬೆ), ಸ್ತ್ರೀವಾದ

(ಬಿ.ಎನ್. ಸುಮಿತ್ರಾಬಾಯಿ) ಮುಂತಾದವು ಸ್ತ್ರೀವಾದಿ ಮೀಮಾಂಸೆಯನ್ನು ಬೇರೆ ಬೇರೆ ರೀತಿಯಲ್ಲಿ ಮಂಡಿಸುತ್ತವೆ. 'ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು' (ಗಾಯತ್ರೀ ನಾವಡ) ಬಹಳ ಮುಖ್ಯ ಪ್ರಯತ್ನವಾಗಿದ್ದು ಸ್ತ್ರೀವಾದಿ ಮೀಮಾಂಸೆಯನ್ನು ಸಾಂಸ್ಕೃತಿಕವಾಗಿ ನೋಡಲು ಬಯಸುತ್ತದೆ. "ಒಟ್ಟು ಕನ್ನಡ ಸಾಹಿತ್ಯವನ್ನು ಪರಿಶೀಲಿಸಿದರೆ ಮಹಿಳೆಯರು ಕೃತಿ ರಚನೆಗೆ ತೀವ್ರವಾಗಿ ತೊಡಗಿಸಿಕೊಂಡದ್ದು ಈ ಶತಮಾನದ ಆರಂಭದಿಂದ. ಈ ಸುದೀರ್ಘ ಮಹಿಳಾ ಇತಿಹಾಸವನ್ನು ಮೂರು ಹಂತಗಳಲ್ಲಿ ಗುರುತಿಸಬಹುದು. ೧. ಸ್ವೀಕೃತ ಹಂತ. ೨. ಪ್ರತಿರೋಧದ ಹಂತ. ೩. ಸ್ವಾಯತ್ತ ಹಂತ" (ಅಡಿಟಿಪ್ಪಣಿ-ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು) ಇದು ಮುಖ್ಯವಾದುದು.

೧೯. ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಲಿಂಗ ರಾಜಕಾರಣವು ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗಿದೆ. ಅನೇಕ ವಿಮರ್ಶಕರು ಮಹಿಳೆಯರ ಬರವಣಿಗೆಯ ಬಗ್ಗೆ ಮೌನವಹಿಸಿದ್ದಾರೆ. ಈ ಮೌನವು ಮಹಿಳಾ ಬರವಣಿಗೆಯ ಕುರಿತು ಒಂದು ಔದಾಸೀನ್ಯ ಅಥವಾ ಉಪೇಕ್ಷೆಯಿಂದ ಹುಟ್ಟಿರುವಂಥದ್ದು. ಲಿಂಗ ರಾಜಕಾರಣವೆಂದರೆ ಕೃತಿಗಳ ಪಾತ್ರ ಶೋಧನೆ, ಕೃತಿಯೊಂದರ ರಾಚನಿಕ ಏಕತೆಯೆಂದು ಕೆಲವು ವಿಮರ್ಶಕರು ಪ್ರತಿಪಾದಿಸಿದರು.

೨೦. ವಸಾಹತುಶಾಹಿ ಅನುಭವದ ಅನಂತರ ನಮ್ಮ ಸಾಹಿತ್ಯದ ಅಧ್ಯಯನ ಕ್ರಮಗಳು ಸಂಸ್ಕೃತಿಯಲ್ಲಿ ಮುಕ್ತಾಯವಾಗುತ್ತವೆ. ಹಾಗೆಯೇ ಸಾಹಿತ್ಯವು ನಮಗೆ ಯಾಕೆ ಮುಖ್ಯವಾಗಿದೆಯೆಂದರೆ ಅಂತಿಮವಾಗಿ ಸಾಹಿತ್ಯದ ಪ್ರಶ್ನೆಯು ಮಾನವೀಯತೆಯ ಪ್ರಶ್ನೆ ಯಾಗಿದೆ. "ಸಾಹಿತ್ಯ ಕೃತಿಯೊಂದು ನಮಗೆ ಜ್ಞಾನವನ್ನು ಕೊಡುತ್ತದೆಯೆಂಬ ಕಾರಣಕ್ಕೆ ಅದನ್ನು ನಾವು ಓದುವುದಿಲ್ಲ. ಸಾಮಾಜಿಕ ಸಂರಚನೆಯ ಕಾರಣಕ್ಕೆ ಅದನ್ನು ಸ್ವೀಕರಿಸುವುದಿಲ್ಲ. ಆದರೆ ಅವು ಸಂಸ್ಕೃತಿಯ ವಿಶ್ಲೇಷಣೆಯ ಸಂದರ್ಭದಲ್ಲಿ ನಿಜವಾದ ಸಂಬಂಧವನ್ನು ಪ್ರಾತಿನಿಧಿಕಗೊಳಿಸುತ್ತದೆಯೆಂಬ ಕಾರಣಕ್ಕೆ ಓದುತ್ತೇವೆ" ಎಂದು ಅಲ್ತೂಸರ್ ಹೇಳಿರುವುದು ಈ ಮಟ್ಟಿಗೆ ನಿಜ. ಸಾಹಿತ್ಯವು ಅಂತಿಮವಾಗಿ ನಿರ್ವಚಿಸಬೇಕಾದುದು ಮಾನವೀಯ ಸಂಬಂಧಗಳನ್ನು. ಆದರೆ ನಮ್ಮಲ್ಲಿ ಸಾಹಿತ್ಯ ವಿಮರ್ಶೆಯು ಅಂತಿಮವಾಗಿ ಕೃತಿಯ ವಿಶ್ಲೇಷಣೆಯಲ್ಲಿಯೇ ತಲ್ಲೀನವಾಯಿತು. ಇದರಿಂದ ಸಾಹಿತ್ಯ ಕೃತಿಯೊಂದು ಎತ್ತಿಕೊಳ್ಳುವ ಅಂಶಗಳೇನು ಎಂಬುದರ ಮುಖಾಮುಖಿಯಲ್ಲಿಯೇ ಸಾಹಿತ್ಯ ವಿಮರ್ಶೆಯು ಕೆಲಸ ಮಾಡಲು ಶುರುಮಾಡಿತು. ಸೃಜನಶೀಲ ಸಾಹಿತ್ಯವನ್ನು ಶ್ರೇಷ್ಠವೆಂದೂ, ಸಾಹಿತ್ಯ ವಿಮರ್ಶೆಯೆಂದರೆ ಅದು ಕೃತಿಯ ಬಾಲಂಗೋಚಿಯೆಂಬ ಅಭಿಪ್ರಾಯವು ಚಾಲ್ತಿಗೆ ಬಂತು.

ಸಾಹಿತ್ಯಕ್ಕೆ ಅಪ್ರತಿಮವಾದ ಶಕ್ತಿಯನ್ನು ಕೊಟ್ಟು, ಸಾಹಿತ್ಯ ವಿಮರ್ಶೆಯನ್ನು ಎರಡನೆಯ ದರ್ಜೆಯ ಕಸುಬುಗಾರಿಕೆಯೆಂದು ಕರೆಯುವದರ ಮೂಲಕ ಒಂದು ಅಂತಸ್ಥ ರಾಜಕೀಯ ಪರಿಭಾಷೆಯನ್ನು ಚಾಲ್ತಿಗೆ ತರಲಾಯಿತು. ಆದರಿಂದ ಸಾಹಿತ್ಯ ವಿಮರ್ಶೆಯ ಕೆಲಸವೂ ಸ್ವಲ್ಪಮಟ್ಟಿಗೆ ಸರಳವಾಯಿತು. ಸಾಹಿತ್ಯ ವಿಮರ್ಶೆಯು ತನ್ನ ಸುಲಭವಾದ ಹತ್ಯಾರಗಳಿಂದ ಕೃತಿಯನ್ನು ತೆರೆಯುವ ಪ್ರಯತ್ನ ಮಾಡಿತು. ಇಂಥ ಸಂದರ್ಭಗಳಲ್ಲಿ ಸಾಹಿತ್ಯ ಯಾವ ರೀತಿಯ

ಮಾನವೀಯ ಸಂಬಂಧಗಳನ್ನು ನಿರ್ವಚಿಸಬೇಕೋ-ಅದನ್ನು ಅದು ಮಾಡದೇ ಹೋಗಬಹುದು. ಕನ್ನಡದ ಸೃಜನಶೀಲ ಕೃತಿಗಳಲ್ಲಿ "ಸ್ತ್ರೀ" ಎಂಬುದಕ್ಕೆ ಕೆಲವೇ ಕೆಲವು ಮಾದರಿ ಚಹರೆಗಳಿವೆ. ಸ್ತ್ರೀತ್ವವೆನ್ನುವುದು ಕೂಡ ನಿರ್ದಿಷ್ಟ ವ್ಯಾಪ್ತಿಯದೇ. ಇದರಿಂದ ಸೃಜನಶೀಲ ಕೃತಿಗಳ ಬಗ್ಗೆ ವಿಮರ್ಶಿಸುವುದು ಎಂದರೆ ಬರವಣಿಗೆಯ ರೂಪಕ್ಕಿಳಿದ ಪಠ್ಯಗಳ ಕುರಿತು ಚರ್ಚಿಸುವುದು ಎಂದರ್ಥ. ಇನ್ನೊಂದು ಅಂಶವನ್ನು ಗಮನಿಸಬೇಕು. ಅದೆಂದರೆ-ಬರವಣಿಗೆಯೇ ಭಾರತೀಯ ಸನ್ನಿವೇಶದಲ್ಲಿ ಒಂದು ರಾಜಕೀಯ ರೂಪ. ಬರವಣಿಗೆಯೆಂಬ ಕ್ಷೇತ್ರಕ್ಕೆ ತುಂಬಾ ತಡವಾಗಿ ಪ್ರವೇಶಿಸಿದ ಮಹಿಳೆಯರು, ದಲಿತರನ್ನು ನೋಡುವಾಗಂತೂ ಇದು ನಿಜವೆಂದೇ ಅನಿಸುತ್ತದೆ. ಬರವಣಿಗೆಯೆನ್ನುವುದು ಯಾವಾಗ ಮುದ್ರಿತ ರೂಪಕ್ಕಿಳಿದು ಅಸಂಖ್ಯಾತ ಜನರಿಗೆ ಮುಟ್ಟುವ ವ್ಯಾಪಾರ ನಡೆಯಲು ಶುರುವಾಯಿತೋ ಅಲ್ಲಿಂದ ಸಾಂಸ್ಕೃತಿಕ ರಾಜಕಾರಣಗಳು ಬೇರೆಯಾಗ ತೊಡಗಿದವು. ಮುದ್ರಣ ಸಂಸ್ಕೃತಿಯು ಮಾನವೀಯತೆಯ ಪ್ರಶ್ನೆಗಳನ್ನು ಹೇಗೆ ಎತ್ತಿಕೊಳ್ಳುತ್ತದೆ ಯೆಂಬುದು ಆ ಮಾಧ್ಯಮದ ಸಮಸ್ಯೆ. ಇರಲಿ. ಅಕ್ಷರ ಮಾಧ್ಯಮದಲ್ಲಿ ವಾಸ್ತವ ಸ್ತ್ರೀಯ ಸಮಸ್ಯೆಯನ್ನು 'ದ್ವಿರೂಪಕತೆ'(Double Image)ಯ ಮೂಲಕ ಹೇಳಲಾಯಿತು. ಆದುದ ರಿಂದಲೇ ಸಾಹಿತ್ಯ ವಿಮರ್ಶೆಯಲ್ಲಿ ಲಿಂಗ ರಾಜಕಾರಣದ ನೆಲೆಗಳನ್ನು ಕೂಡ ಪ್ರಾತಿನಿಧಿಕ ಗೊಳಿಸಿದ ಹಾಗೆ ಭಾಸವಾಗುತ್ತದೆ.

ವಸಾಹತುಶಾಹಿ ಮತ್ತು ಅದರ ಅನಂತರ ಸಂಸ್ಕೃತಿಯ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಲಾಯಿತು. ಹಾಗೆ ನೋಡುವುದಿದ್ದರೆ ಸಾಹಿತ್ಯ ಕೃತಿಗಳ ಸಂಸ್ಕೃತಿಯ ಪ್ರಶ್ನೆಯು ಭಾರವಾಗಿ ಪರಿಣಮಿಸಿದೆ. ಆದರೆ ಈ ರೀತಿಯ ಚಿಂತನೆಗಳಲ್ಲಿ "ಸ್ತ್ರೀ" ಎಲ್ಲಿ ಯೋಚಿಸಬೇಕು. ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಶ್ನೆಗಳೆರಡೂ ವಾಸ್ತವವಾಗಿ ರಾಜಕೀಯ, ಸಾಮಾಜಿಕ ಮಾನವೀಯತೆಯ ಅನೇಕ ಅಂಶಗಳನ್ನು ಒಳಗೊಂಡಿರುತ್ತದೆ. ಇದರಲ್ಲಿ ಅಧಿಕಾರವಿಲ್ಲದವರ ಚರ್ಚೆಗಳು ಬಹಳ ಕಡಿಮೆಯೆನ್ನಬಹುದು.

ರಾಷ್ಟ್ರೀಯ ಆಂದೋಲನ ಮತ್ತು ಅನಂತರದ ಪ್ರಜಾಪ್ರಭುತ್ವವು ರಾಜಕೀಯ ಏಕತೆಯ ಬಗ್ಗೆ ಬಹಳ ಮಾತಾಡಿತು ತಾನೇ? ಈ ರೀತಿಯ ರಾಜಕೀಯ ಏಕತೆಯ ಪ್ರಶ್ನೆಗಳು ಪ್ರಜೆಗಳಲ್ಲಿ ಸಮಾನತೆಯೆಂಬುದನ್ನು ಹೇಳುತ್ತವೆ. ಆದರೆ ಪ್ರಾಯೋಗಿಕವಾಗಿ ಪ್ರಜೆಗಳಲ್ಲಿ ಸಮಾನತೆ ಯೆಂಬುದು ಸಾಧ್ಯವಾಗಲಿಲ್ಲ. ಇದರಿಂದಲೇ 'ಮಹಿಳೆ'ಯ ಸಮಸ್ಯೆ ಅಪ್ರಮುಖವಾಯಿತು.

ಸಾಂಸ್ಥಿಕ ಕಲಿಕೆ ಮತ್ತು ಅದು ಕಲಿಸಿಕೊಡುವ ಪರಿಕರಗಳದ್ದು ಮತ್ತೊಂದು ಸಮಸ್ಯೆ. ತೀರಾ ಈಚಿನ ವರ್ಷಗಳವರೆಗೂ ನಮ್ಮ ಅಧ್ಯಯನ ಕ್ರಮಗಳಿಂದ ಕೂಡಿಕೊಂಡ ವಿಮರ್ಶೆ ಪ್ರಾಯೋಗಿಕವಾದ ಸಮಸ್ಯೆಯನ್ನು ಎತ್ತಿಕೊಳ್ಳುವುದು ಸಾಧ್ಯವಿರಲಿಲ್ಲ. ಮತ್ತೊಂದು ರೀತಿಯಲ್ಲಿ ಹೇಳಬೇಕೆಂದರೆ ಸಾಂಪ್ರದಾಯಿಕ ಅಧ್ಯಯನ ಕ್ರಮಗಳಲ್ಲಿ ವಾಸ್ತವ ಸಮಸ್ಯೆಯ ಅರಿವು ಅಷ್ಟಾಗಿ ಇಲ್ಲ. "ಕಲಿಕೆಯೆನ್ನುವುದು ಜ್ಞಾನಕ್ಕಾಗಿ" ಎಂಬ ಪ್ರಣಾಳಿಕೆಯಿಂದ ಬಂದ ವಿದ್ಯಾಭ್ಯಾಸದ ಕ್ರಮದಲ್ಲಿ ಗಂಡಿನಷ್ಟೇ ಇರುವ ಹೆಣ್ಣಿನ ಕುರಿತು ಯಾವ ಮಾತುಗಳೂ ಇಲ್ಲ. ಇದರಿಂದ ಉಂಟಾದ ವಿಮರ್ಶೆಯು ಕೂಡ ಒಂದು ರೀತಿಯಿಂದ ದಂತಗೋಪುರದಲ್ಲಿ ನಿಂತುಕೊಂಡು ಮಾತಾಡುತ್ತಿದ್ದವು.

ಹೇಳಲಾಗಿರುವ ಅಥವಾ ಬರೆಯಲಾಗಿರುವ ಪಠ್ಯಗಳನ್ನು ಅಧಿಕೃತ ಜ್ಞಾನ ಪರಂಪರೆ ಯೆಂಬಂತೆ ಪರಿಗಣಿಸಿ ಕನ್ನಡದಲ್ಲಿ ಸಾಕಷ್ಟು ವಿಮರ್ಶೆಯನ್ನು ಬರೆಯಲಾಗಿದೆ. ಸಾಹಿತ್ಯ ಕೃತಿಯೆಂದರೆ ಅದನ್ನು ಬರೆಯಲಾಗಿದೆ ಮತ್ತು ಮುದ್ರಣಗೊಳಿಸಲಾಗಿದೆಯೆಂದೇ ನಾವು ಭಾವಿಸುತ್ತೇವೆ. ಬರಹವೇ ಜ್ಞಾನವೆಂದು ಗುರುತಿಸುವಾಗ ಕೆಲವು ತೊಡಕುಗಳು ಬರುತ್ತವೆ. ಬರೆಯಲಾಗದ ಅನೇಕ ಪಠ್ಯಗಳು ಇರಬಹುದು ಮತ್ತು ಬರೆದ ಕೃತಿಗೂ ಅದರ ಹಿಂದಿರುವ ಮೌನಕ್ಕೂ ಅನೇಕ ಅಂತರಗಳಿರಬಹುದು. ವಿಮರ್ಶೆಯು ಅದನ್ನು ಗ್ರಹಿಸದೇ ಹೋದಾಗ ಕೆಲವು ಸಮಸ್ಯೆಗಳು ಉಂಟಾಗುತ್ತವೆ. ಉದಾಹರಣೆಗೆ ಕುವೆಂಪುರವರ "ಕಾನೂರು ಹೆಗ್ಗಡತಿ" ಕಾದಂಬರಿಯನ್ನು ವಾಸ್ತವವಾದಿ ಕಾದಂಬರಿಯೆಂದು ಕರೆಯಲಾಗಿದೆ. 'ನಿಜವಾದ ಸುಬ್ಬಮ್ಮ ನಿಗೂ ಕೃತಿಯಲ್ಲಿ ಬಂದಿರುವ ಸುಬ್ಬಮ್ಮನಿಗೂ ವ್ಯತ್ಯಾಸವಿಲ್ಲವೇ? ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಬರುವ 'ಸುಬ್ಬಮ್ಮ'ನನ್ನು ಇಟ್ಟುಕೊಂಡು ಇದು ಕುವೆಂಪು ಅವರ ನಿಲುವು ಎಂದು ಕರೆಯುವುದು ಎಷ್ಟರಮಟ್ಟಿಗೆ ಸರಿ?

ಮಹಿಳೆಯರ ಬರವಣಿಗೆಯ ಕ್ರಮ, ಅವರು ಬಳಸುವ ಭಾಷೆ ಇತ್ಯಾದಿಗಳನ್ನು ಕೂಡ ಗಮನಿಸಬೇಕು. ಇದು ವಿಮರ್ಶಕರಿಗೂ ಅನ್ವಯವಾಗುತ್ತದೆ. ಪುರುಷ ಕೇಂದ್ರಿತ ಸಂಸ್ಕೃತಿಯಲ್ಲಿ ಸ್ತ್ರೀಯರ ಮಾತುಕತೆಗಳನ್ನು, ಬರಹಗಳನ್ನು ಒಂದು ರೀತಿಯ ಒತ್ತಡಕ್ಕೆ ಗುರಿಪಡಿಸಲಾಗುತ್ತದೆ. ಇದರಿಂದ ಅವರ ಭಾಷೆಯೂ ಕೂಡ ಪುರುಷರ ನಿರೀಕ್ಷೆಗೆ ಅನುಸಾರವಾಗಿ ರೂಪುಗೊಳ್ಳುತ್ತದೆ. ಯಾವುದನ್ನು ಉನ್ನತ ದರ್ಜೆಯ ಸಾಹಿತ್ಯವೆಂದು ನಾವು ಕರೆದಿದ್ದೇವೋ ಅದರಲ್ಲಿ ಹೆಣ್ಣಿನ ದೇಹದ ವಿವರ. ಅವಳು ಗಂಡಿನೊಂದಿಗೆ ಇಟ್ಟುಕೊಳ್ಳುವ ಸಂಬಂಧದ ಮಾದರಿಗಳೇ ಚರ್ಚೆಗೆ ಗುರಿಯಾಗಿವೆ. ಆದರೆ ಅದು ಅಷ್ಟು ಮಾತ್ರವೇ ಅಲ್ಲತಾನೆ?

ಸ್ತ್ರೀಯರಾಗಲೀ, ಪುರುಷರಾಗಲೀ ಯಾವತ್ತೂ ಅಧಿಕಾರದ ಸಂರಚನೆಯಿಂದ ಹೊರಗಿರುವು ದಿಲ್ಲ. ಹೀಗಾಗಿ ಲೈಂಗಿಕ ರಾಜಕಾರಣದ ವಿಶ್ಲೇಷಣೆಯು ಅಂತಿಮವಾಗಿ ಅಧಿಕಾರದ ನಡುವಣ ಸಂಬಂಧವನ್ನು ನಿರ್ವಚಿಸುತ್ತದೆ. ಹಾಗೆಯೇ ಕೃತಿಯೊಳಗಿನ ಸ್ತ್ರೀ ಮತ್ತು ಕೃತಿಯ ಹೊರಗಿನ ಸ್ತ್ರೀಯೆಂಬ ಪರಿಕಲ್ಪನೆಗಳು ಭಿನ್ನ. ಇವುಗಳ ಕ್ರಿಯಾತ್ಮಕ ಸ್ವರೂಪವೂ ಭಿನ್ನವಾಗಿವೆ. ಹೀಗಾಗಿ, ಕನ್ನಡ ಸಾಹಿತ್ಯ ವಿಮರ್ಶೆಯ ಲಿಂಗ ರಾಜಕಾರಣದ ನೆಲೆಯನ್ನು ಶೋಧಿಸಲು ಮತ್ತಷ್ಟು ಅವಕಾಶವಿದೆ.

●

# ಕನ್ನಡದಲ್ಲಿ ಸ್ತ್ರೀವಾದ - ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆ

ಕೆ. ಜಿ. ನಾಗರಾಜಪ್ಪ

ಭಾಗ-೧

ಕನ್ನಡ ಸಾಹಿತ್ಯ ಚರಿತ್ರೆಗಳು ಮತ್ತು ವಿಮರ್ಶಾ ಗ್ರಂಥಗಳು ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬೆಳಕು ಕಂಡಿವೆ. ಸಾಹಿತ್ಯ ಚರಿತ್ರೆ ಸಂಶೋಧನೆಯನ್ನೂ ಮತ್ತು ವಿಮರ್ಶೆಯನ್ನೂ ಒಳಗೊಂಡಿರುತ್ತವೆ. ಸಾಹಿತ್ಯ ಚರಿತ್ರೆಯಲ್ಲಿ ಕವಿಯ ಜೀವನ ಚರಿತ್ರೆಗೂ, ವಿಮರ್ಶೆಯಲ್ಲಿ ಕೃತಿಗಳ ಮೌಲ್ಯಮಾಪನಕ್ಕೂ, ಸಂಶೋಧನೆಯಲ್ಲಿ ಪ್ರಾಮಾಣಿಕ ಪರಿಕರ ಒದಗಿಸುವುದಕ್ಕೂ ಒತ್ತು ಬಿದ್ದಿರುತ್ತದೆ. ವಿಮರ್ಶೆ ಸಾಹಿತ್ಯದಲ್ಲಿ ಪ್ರತ್ಯೇಕವಾಗಿ ವಿಶಾಲವಾಗಿ ಬೆಳೆದು ನಿಂತಿದೆ. ಸಾಹಿತ್ಯ ಚರಿತ್ರೆಯಲ್ಲಿ ವಿಮರ್ಶೆ ಸಂಕ್ಷಿಪ್ತವಾಗಿ, ಸಮೀಕ್ಷಾರೂಪದಲ್ಲಿದ್ದು, ಖಚಿತವಾಗಿರಬೇಕು. ಸಾಹಿತ್ಯಚರಿತ್ರೆ ಕಾಲ-ಧರ್ಮಕ್ಕನುಗುಣವಾಗಿ, ಸಾಹಿತ್ಯದಲ್ಲಿ ಆಗಾಗ್ಗೆ ತಲೆದೋರುವ ಬದಲಾಣೆಗಳು, ಸಂಘರ್ಷಗಳು, ಚಳುವಳಿಗಳು, ಸಾಹಿತ್ಯಕ್ಕೆ ಪೂರಕವಾಗಬಹುದಾದ ಮತ್ತಿತರ ಸಾಹಿತ್ಯ ಸಾಧನ ಸಾಮಗ್ರಿಯನ್ನು ಒಳಗೊಂಡು, ಸಾಹಿತ್ಯ ಚರಿತ್ರೆ ಸಮಗ್ರವೂ ಮತ್ತು ಪರಿಪೂರ್ಣವೂ ಆಗಿರಬೇಕು. ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆ-ಶಾಸ್ತ್ರಗಳು, ಕಾವ್ಯ ಮತ್ತಿತರ ಸಾಹಿತ್ಯ ಪ್ರಕಾರಗಳ ನಾಡಿ ಬಡಿತವನ್ನು ಗುರುತಿಸಬಲ್ಲವು. ಅವುಗಳಲ್ಲಿ ಪಾಂಡಿತ್ಯ, ಬೌದ್ಧಿಕತೆ, ಪ್ರಾಮಾಣಿಕತೆ, ಅಧಿಕೃತತೆ ಇದ್ದು ವಸ್ತುನಿಷ್ಠವಾಗಿರಬೇಕು. ಸ್ತ್ರೀ ತತ್ತ್ವ ನೆಲೆಯಲ್ಲಿ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಯನ್ನು ಸಮೀಕ್ಷಿಸಿ ವಿಶ್ಲೇಷಿಸುವುದಕ್ಕೆ ಮಾತ್ರ ಸೀಮಿತಗೊಂಡಿದೆ ಈ ಲೇಖನ.

ಸಾಹಿತ್ಯ ಚರಿತ್ರೆ ಸಾಹಿತ್ಯದ ಎಲ್ಲಾ ಪ್ರಕಾರಗಳ ಮೀಮಾಂಸೆ ಮತ್ತು ಚರಿತ್ರೆ. ಅದಕ್ಕೆ ಸಾಹಿತ್ಯದ ಕಾವ್ಯ ಮತ್ತು ಶಾಸ್ತ್ರ ಹೊರತಲ್ಲ. ಭಾವ ಮತ್ತು ಬುದ್ಧಿಗಳು ಸಾಹಿತ್ಯ ಚರಿತ್ರೆಯ ರಚನೆಯಲ್ಲಿ ಕೆಲಸ ಮಾಡುತ್ತವೆ. ಸಾಹಿತ್ಯ ಚರಿತ್ರೆ ಒಂದು ದೇಶದ ಜೀವನ ಚರಿತ್ರೆ. ಅಂದರೆ ಅದು ಒಂದು ದೇಶದ ಸಾಂಸ್ಕೃತಿಕ ಚರಿತ್ರೆ. ಅದಕ್ಕೆ ಅಗತ್ಯವಾದುದು ಸಾಮಾಜಿಕ ಪ್ರಜ್ಞೆ. ಈ ಹಿನ್ನೆಲೆಯಲ್ಲಿ ಲಭ್ಯವಿರುವ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಯ ಕೃತಿಗಳನ್ನು ನಿಷ್ಪಕ್ಷಪಾತವಾಗಿ ಅಧ್ಯಯನ ಮಾಡಿದರೆ, ಅವು ಎಷ್ಟರಮಟ್ಟಿಗೆ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಮತ್ತು ಬದುಕನ್ನು ಸಮಗ್ರವಾಗಿ ಕಟ್ಟಿಕೊಡಬಲ್ಲವು ಎಂಬ ಪ್ರಶ್ನೆ ಯಾರಿಗಾದರೂ ಮೊತ್ತ ಮೊದಲು

ಎದುರಾಗುತ್ತದೆ. ಅದಕ್ಕೆ: - 'ನಮ್ಮ ಸಾಂಸ್ಕೃತಿಕ ಇತಿಹಾಸವೆಲ್ಲವೂ, ಮಾನವನ ನೋವುಗಳನ್ನೂ, ತಾಕಲಾಟಗಳನ್ನೂ, ಗಣನೆಗೆ ತೆಗೆದುಕೊಳ್ಳದೆ, ತತ್ಪರಿಣಾಮವಾದ ಸಾಧನೆಗಳನ್ನು ಮಾತ್ರವೇ ವ್ಯಾಖ್ಯಾನಿಸುವ ಸ್ವರೂಪವಾಗಿರುವುದರಿಂದ ಅದು ಕೇವಲ ಸಂಸ್ಕೃತಿಯ ವೈಭವೀಕರಣವೇನೋ ಎಂದು ಅನುಮಾನ ನನಗೆ. ಚರಿತ್ರೆಯ ಹಿನ್ನೆಲೆಗಿರುವ ಶೋಷಣೆ, ನೋವು ಸಂಕಟಗಳು ಮತ್ತು ಮೌಲ್ಯದ ಹೆಸರಿನಲ್ಲಿ ಜನ ಸಾಮಾನ್ಯರು ಸದ್ದಿಲ್ಲದೆ ಅನುಭವಿಸಿದ ಯಾತನೆಗಳು ಯಾವುದೇ ಸಂಸ್ಕೃತಿಯ ಸಾಧನೆಯನ್ನು ಅಧ್ಯಯನ ಮಾಡುವವರ ಪಾಲಿಗೆ ನಿರ್ಲಕ್ಷ್ಯದ ಸಂಗತಿಗಳಾಗಿ ಉಳಿದಿರುವ ತನಕ, ನಮ್ಮ ಸಾಂಸ್ಕೃತಿಕ ಚರಿತ್ರೆ ಒಂದು ರೀತಿಯಲ್ಲಿ ಏಕಮುಖವೂ, ಅಸಮಗ್ರವೂ ಆಗಿಯೇ ಉಳಿದಿರುತ್ತವೆ."- ಡಾ.ಜಿ.ಎಸ್. ಶಿವರುದ್ರಪ್ಪನವರು ಮತ್ತೆ ಮುಂದುವರಿದು "ಯಾವ ದೊಡ್ಡ ಕವಿಯೇ ಆಗಲಿ. ತನ್ನ ಕೃತಿ ತನ್ನ ಕಾಲದ ಮೌಲ್ಯಗಳನ್ನು ಪ್ರಕಟಿಸುತ್ತಲೇ ಅದಕ್ಕೆ ಹಿನ್ನೆಲೆಯಾದ, ಮಾನವೀಯವಾದ ವೈಯಕ್ತಿಕ ಸಂಘರ್ಷಗಳನ್ನೂ, ನೋವುಗಳನ್ನೂ ಕೇವಲ ಮೌಲ್ಯದ ಪ್ರತಿನಿಧಿಗಳೆಂದೋ ಉದ್ ಘೋಷಕರೆಂದೋ ಭಾವಿಸುವುದು ಅಸಮಗ್ರ ಕಲೆಯಾಗುತ್ತದೆ" ಎನ್ನುತ್ತಾರೆ. ಜಿ.ಎಸ್.ಎಸ್. ಅವರ ಮಾತುಗಳು ಹೋಮರನಿಗೆ ಪಂಪನನ್ನು ಹೋಲಿಸಿ, ತುಲನಾತ್ಮಕವಾಗಿ ಬೆಲೆಗಟ್ಟುವ ಸಂದರ್ಭದಲ್ಲಿ ಆಡಿರುವ ಮಾತುಗಳಾದರೂ ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಕನ್ನಡ ಸಾಹಿತ್ಯ ವಿಮರ್ಶೆಗೂ ಅನ್ವಯಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತಿಯ ವೈಭವೀಕರಣವಾಗಿ, ಜನಸಾಮಾನ್ಯರ ನೋವು, ಸಂಕಟಗಳಿಗೆ ಕನ್ನಡ ಸಾಹಿತ್ಯ ಕುರುಡಾಗಿದೆ. ಸಾಮಾನ್ಯ ಜನರು ಎಂದರೆ ಅಧಿಕ ಸಂಖ್ಯೆಯ ಸ್ತ್ರೀಯರು ಮತ್ತು ಶೂದ್ರರು, ಕನ್ನಡ ಸಾಹಿತ್ಯ ಶೋಷಣೆಗೆ ತುತ್ತಾದವರು. ಜೈನಸಾಹಿತ್ಯ, ವೀರಶೈವ ಸಾಹಿತ್ಯ ಮತ್ತು ವೈದಿಕ ಸಾಹಿತ್ಯಕ್ಕೆ ಪ್ರೋತ್ಸಾಹ ಮತ್ತು ಪ್ರೇರಕರಾದ ಸ್ತ್ರೀಯರು ಬಾಡಿಗೆ ಗರ್ಭ ಹೊತ್ತು ಸಾಹಿತ್ಯ ಬೆಳೆಸಿದರು. ಜೈನ ಮತ್ತು ವೀರಶೈವರು ಪರಸ್ಪರ ಕಿತ್ತಾಡುತ್ತಲೇ, ವೈದಿಕರನ್ನು ವಿರೋಧಿಸುತ್ತಲೇ, ವೈದಿಕ ಸಾಹಿತ್ಯಕ್ಕೆ ಕನ್ನಡದಲ್ಲಿ ಜನ್ಮವಿತ್ತವರು. ಅಂದರೆ ಪಿತೃ ಸಂಸ್ಕೃತಿಯ ಅನುವಂಶಿಕ ರಕ್ಷಣೆ ಮತ್ತು ಪೋಷಣೆ, ಬಂಡವಾಳಶಾಹಿ ಮತ್ತು ಫ್ಯೂಡರ್ ವ್ಯವಸ್ಥೆಯ ಬೇರನ್ನು ಭದ್ರಗೊಳಿಸಿ, ಶಾಶ್ವತವಾಗಿ ಸ್ತ್ರೀ ಮತ್ತು ಶೂದ್ರರ ಶೋಷಣೆಗೆ ಜೈನರು ಮತ್ತು ವೀರಶೈವರು ವೈದಿಕರೊಂದಿಗೆ ಕೈ ಜೋಡಿಸಿದುದೇ ಕನ್ನಡ ಸಾಹಿತ್ಯ ಸಂಸ್ಕೃತಿಯ ಇತಿಹಾಸ. ಮೇಲ್ವರ್ಗದ ಸ್ತ್ರೀಯರೂ ಶೋಷಣೆಯಿಂದ ಹೊರತಾಗಲಿಲ್ಲ.

ಶ್ರೀ ಸಾಮಾನ್ಯರ ಸಂವೇದನಗಳಿಗೆ ನಾಲಿಗೆಯಾಗದ, ಕೇವಲ ಕೆಲವೇ ವರ್ಗಗಳನ್ನು ಪ್ರತಿನಿಧಿಸುವ ಕನ್ನಡ ಸಾಹಿತ್ಯ ಚರಿತ್ರೆಗಳು, ಇಂದು ಅವು ಎಲ್ಲಾ ವರ್ಗಗಳಿಗೂ ಆದರ್ಶವೇ? ಅನುಕರಣೀಯವೆ? ಎಂಬ ಅಂಶವನ್ನು ಗಂಭೀರವಾಗಿ ಪರಿಗಣಿಸಬೇಕಿದೆ. ಏಕಸಂಸ್ಕೃತಿ ಮತ್ತು ಏಕ ಸಮಾಜದ ಸರ್ವಾಧಿಕಾರವನ್ನು ಅಧಿಕ ಸಂಖ್ಯೆಯ ಶ್ರೀ ಸಾಮಾನ್ಯರ ಮೇಲೆ ಬಲಾತ್ಕರಿಸಿ, ಅವರ ಬಹು ಸಂಸ್ಕೃತಿ ಮತ್ತು ಬಹು ಸಮಾಜಗಳ ನಾಶಕ್ಕೆ ಸತತವಾಗಿ ಕಾರಣವಾಗಿರುವ ಶೋಷಿತ ಸಂಸ್ಕೃತಿ ಹೇಗೆ ಕನ್ನಡ ನೆಲದ, ಕನ್ನಡ ಜನರ, ಕನ್ನಡ ಭಾಷೆಯ, ಕನ್ನಡ ಸಂಸ್ಕೃತಿಯಾದೀತು? ಶೋಷಿತರನ್ನೂ ಶೋಷಕರನ್ನಾಗಿಸುವ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ

ನಾಡಿನ ಸಂಸ್ಕೃತಿಯ ಮೂಲವನ್ನು ಗುರುತಿಸಿ, ಮರುಸ್ಥಾಪನೆಗೆ ಹೇಗೆ ನೆರವಾದೀತು ಮತ್ತು ಮಾರ್ಗದರ್ಶನ ಮಾಡೀತು? ಭಾರತೀಯ ಕಾವ್ಯ ಮೀಮಾಂಸೆ, ವೈದಿಕ ತತ್ತ್ವಶಾಸ್ತ್ರದ ಪ್ರಣಾಳಿಕೆ, ಕನ್ನಡಕ್ಕೆ ಆಯ್ದು ಅಳವಡಿಸಿಕೊಂಡಿರುವ ಪಾಶ್ಚಾತ್ಯ ವಿಮರ್ಶಾ ಸೂತ್ರಗಳಿಗೆ ಚರಿತ್ರೆಗೆ ಬೆಲೆ ಇಲ್ಲ. (ಅಂದರೆ ಶ್ರೀ ಸಾಮಾನ್ಯರ ಚರಿತ್ರೆಗೆ) ಜೈನರು ಮತ್ತು ವೀರಶೈವರು ತಮ್ಮ ತಮ್ಮ ಸಾಹಿತ್ಯ ಚರಿತ್ರೆಗಳನ್ನು ರಚಿಸಿಕೊಂಡಿದ್ದಾರೆ. ಜೈನರು ಕಾವ್ಯ ಮೀಮಾಂಸೆಯ ಸೂತ್ರಗಳನ್ನು ಪ್ರತ್ಯೇಕವಾಗಿ ರೂಪಿಸಲು ಪ್ರಯತ್ನಿಸಿದರು. ಆದರೆ ವೀರಶೈವರಿಗೆ ಅದೂ ಸಾಧ್ಯವಾಗಲಿಲ್ಲ. ಆದರೆ ವೈದಿಕರು ತಮ್ಮ ರಸ ಸೂತ್ರದಿಂದಲೇ ಜೈನ ಮತ್ತು ವೀರಶೈವ ಕೃತಿಗಳನ್ನು ವಿಮರ್ಶಿಸಿದರು. ಸ್ತ್ರೀ ಬರಹಗಾರರು ಮತ್ತು ಕೃತಿಗಳು ಅಸಡ್ಡೆಗೆ ಒಳಗಾದವು. ಒಟ್ಟಿನಲ್ಲಿ ಪ್ರಾಂತೀಯ ಸಾಹಿತ್ಯ ವಿಮರ್ಶೆಗೆ, ಪ್ರಾಂತೀಯ ವಿಮರ್ಶೆಯ ಸೂತ್ರಗಳನ್ನು ಅಭಿವೃದ್ಧಿಪಡಿಸಿ, ಬಳಸಲಾಗಲಿಲ್ಲ.

"...A Brahmanic one in which the Indian society and its History was reduced what could be found in the ancient texts, one of the Consequences of reaffirming the high Brahmanical image in the context of a history that was astensibly in decline was the marginalization of the more recent literatures as well as the literatures that emerged from historically changing and secular context."

- Women Writingin India

ಸೃಜನಶೀಲ ಕೃತಿಗಳೂ ವೈದಿಕ ಧರ್ಮಶಾಸ್ತ್ರದ ಮುಖವಾಣಿಗಳಾದವು ಮತ್ತು ವೈದಿಕ ಧರ್ಮಶಾಸ್ತ್ರ ನಿಯಂತ್ರಣಕ್ಕೆ ಒಳಪಟ್ಟವು. ಸ್ತ್ರೀಯರ ಲೈಂಗಿಕತೆ ಮತ್ತು ಸಂತಾನೋನ್ಮತ್ತಿ ವೈದಿಕ ಧರ್ಮದ ಹಿಡತಕ್ಕೆ ಸಿಕ್ಕಿತು. ಸ್ತ್ರೀಯರ ಮೇಲೆ ಪುರುಷರ ದಬ್ಬಾಳಿಕೆ ಹೆಚ್ಚಿತು.

ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ಹಿನ್ನೆಲೆಯಲ್ಲಿ ಯಾವ ಒತ್ತಡಗಳು ಕೆಲಸ ಮಾಡುತ್ತಿವೆ. ಎಂಬುದನ್ನು ತಿಳಿಯುವುದು ಅತ್ಯಂತ ಮುಖ್ಯವಾದುದು. ಜೈನವೂ, ವೀರಶೈವವೂ ಅಥವಾ ವೈದಿಕವೂ-ಯಾವ ಮತೀಯ ಶಕ್ತಿಗಳು ಕೆಲಸ ಮಾಡಿದ್ದರೂ, ಅವುಗಳ ಹಿಂದೆ ಪಿತೃ ಸಂಸ್ಕೃತಿಯ ಮತ್ತು ಏಕೆ ಸಂಸ್ಕೃತಿ ಒತ್ತಡವಿರುವುದು ಸ್ಪಷ್ಟವಾಗುತ್ತದೆ. ಸಾಹಿತ್ಯದ ಮೂಲ ಪುರುಷ ಪ್ರಧಾನ ಸಮಾಜ ಸೃಷ್ಟಿಯೇ ಅದರ ಗುರಿ. ಈ ಒತ್ತಡಗಳಲ್ಲಿ ಪರಸ್ಪರ ವೈರುಧ್ಯಗಳಿದ್ದರೂ, ಪುರುಷ ಪ್ರಧಾನ ಸಂಸ್ಕೃತಿಯ ಅನುವಂಶಿಕ ಸ್ಥಾಪನೆಯಲ್ಲಿ ಸಾಮ್ಯವಿದೆ. ಸ್ತ್ರೀಯರನ್ನು ಶೋಷಿಸುವುದೇ ಕನ್ನಡ ಸಾಹಿತ್ಯ ಪ್ರೇರಣೆಯ ಧರ್ಮಗಳ ಮೂಲ ಉದ್ದೇಶವಾಯಿತು. "ಕನ್ನಡ ಸಾಹಿತ್ಯ ಚರಿತ್ರೆಕಾರನಿಗೆ ಇಂಥ ಮೂಲ ಸಾಮಗ್ರಿಯ ಅಭಾವ ಎಷ್ಟಿದೆಯೆಂದರೆ ಗ್ರಂಥ ಕರ್ತನ ಹೆಸರು ಕೂಡ ದೊರೆಯದೆ ಎಷ್ಟೋ ವೇಳೆ ಅವನು ನಿರಾಶನಾಗಿ ಬಾಯಿಕಟ್ಟಿ, ಮೌನಿಯಾಗಿರಬೇಕಾದಷ್ಟು ಉಂಟು. ಈ ದೃಷ್ಟಿಯಿಂದ ಕನ್ನಡ, ತಮಿಳು ಮುಂತಾದ ಸಾಹಿತ್ಯಗಳ ಚರಿತ್ರೆಗಳು ಎಂದಿಗೂ ಪೂರ್ಣತೆಯನ್ನು ಪಡೆಯಲಾರವು" ಎಂದು ಡಿ.ಎಲ್. ನರಸಿಂಹಾಚಾರ್ ಅಭಿಪ್ರಾಯ ಪಡುತ್ತಾರೆ. ಆದರೆ ಕನ್ನಡ ಸಾಹಿತ್ಯ ಚರಿತ್ರೆಗಳ ವಸ್ತುಸ್ಥಿತಿಯೇ ಬೇರೆಯಾಗಿದೆ. ಲಭ್ಯವಿರಬಹುದಾದ ಕೆಳಸ್ತರದ ಬರಹಗಾರರು ಮತ್ತು ಕೃತಿಗಳನ್ನು

ಅಲಕ್ಷಿಸುವುದು. ಮತ್ತು ಅವರ ಸಂಪ್ರದಾಯಗಳನ್ನು ತಿರಸ್ಕರಿಸುವುದು ಪಿತೃ ಸಂಸ್ಕೃತಿಯ ಸಾಹಿತ್ಯ ಚರಿತ್ರೆಕಾರರು ಅನುಸರಿಸುವ ವಿಧಾನವಾಗಿದೆ. 'ಸಾಮಗ್ರಿಯ ಅಭಾವ' ಎಂದರೆ ಕಣ್ಣ ಮುಂದಿರುವ ಸಾಮಗ್ರಿಯನ್ನು ಕಂಡೂ ಕಾಣದಂತೆ ಮೂಲೆಗೆ ಸರಿಸುವುದು, ಇಲ್ಲದ ಪಿತೃ ಸಂಸ್ಕೃತಿಯ ಶೋಧನೆಗಾಗಿ ತಡ ಕಾಡುವುದು, ಕನ್ನಡ ಸಾಹಿತ್ಯ ಚರಿತ್ರೆಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಕರ್ನಾಟಕದಲ್ಲಿ ಶಾಕ್ತಪಂಥ ಲಿಖಿತ ಮತ್ತು ತೋಂಡಿ ಸಂಪ್ರದಾಯದಲ್ಲಿ ಲಭ್ಯವಿದೆ. ಶಾಕ್ತ ಸಂಸ್ಕೃತಿಯ ಪ್ರಭಾವಕ್ಕೆ ಜೈನ, ವೀರಶೈವ ಮತ್ತು ವೈದಿಕ ಧರ್ಮ ಮತ್ತು ಸಾಹಿತ್ಯ ಒಳಗಾಗಿರುವುದು ಎದ್ದು ಕಾಣುತ್ತದೆ. ಪಿತೃ ಸಂಸ್ಕೃತಿಗೆ ಪರ್ಯಾಯವಾಗಿ, ಪ್ರಬಲ ಸ್ಪರ್ಧಿಯಾಗಿ, ಸವಾಲಾಗಿ ಇಂದೂ ಶಾಕ್ತ ಸಂಸ್ಕೃತಿ ಶ್ರೀ ಸಾಮಾನ್ಯರ ನಿತ್ಯ ಜೀವನದಲ್ಲಿ ಜೀವಂತವಾಗಿದೆ. ಶಾಕ್ತ ಸಂಸ್ಕೃತಿಯಲ್ಲಿ ಸ್ತ್ರೀ ಕೇಂದ್ರಿತ ತತ್ತ್ವಗಳು ಭದ್ರವಾಗಿ ಬೇರೂರಿವೆ. ಪಿತೃ ಸಂಸ್ಕೃತಿಕಾರರಿಂದ ರಚಿತವಾದ ಕನ್ನಡ ಸಾಹಿತ್ಯ ಚರಿತ್ರೆಗಳು ಮಾತ್ರ ಸಮಾಜದ ಭಿನ್ನ ಭಿನ್ನ ನೆಲೆಗಳನ್ನು ಗುರುತಿಸಿಯೇ ಇಲ್ಲ. ಜನ ಸಂಸ್ಕೃತಿಯಾದ ಜಾನಪದ ಸಂಸ್ಕೃತಿಯೂ ಅಸಡ್ಡೆಗೆ ಒಳಗಾಗಿದೆ. ಇಂದಿಗೂ ಅಧಿಕ ಸಂಖ್ಯೆಯ ಕನ್ನಡಿಗರ ಆಚಾರದಲ್ಲಿರುವ ಶಾಕ್ತ ಸಂಸ್ಕೃತಿ ಮತ್ತು ಜಾನಪದ ಸಂಸ್ಕೃತಿಯನ್ನು ಹೊರಗಿಟ್ಟು, ರಚಿತವಾಗಿರುವ ಅಲ್ಪಸಂಖ್ಯಾತರ ಪ್ರಾತಿನಿಧಿಕ ಪಿತೃ ಸಂಸ್ಕೃತಿಯ ಕನ್ನಡ ಸಾಹಿತ್ಯ ಚರಿತ್ರೆಗಳಿಂದ ಸಾಹಿತ್ಯ ಚರಿತ್ರೆಗಳು ಮತ್ತು ಸಾಂಸ್ಕೃತಿಕ ಚರಿತ್ರೆ ಪರಿಪೂರ್ಣವಾದುವು ಎಂದು ಒಪ್ಪುವುದು ಸಾಧ್ಯವೇ? ಪಾಶ್ಚಾತ್ಯರಲ್ಲಿ ಮಾತೃ ಸಂಸ್ಕೃತಿಯ ಅಸ್ತಿತ್ವದ ಬಗ್ಗೆಯೇ ಅನುಮಾನ ಪಡುತ್ತಾರೆ. ಆದರೆ ಕರ್ನಾಟಕದಲ್ಲಿ ಎಷ್ಟೋ ಮಾತೃ ಸಂಸ್ಕೃತಿಯ ಜನಾಂಗಗಳು ಪಿತೃ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿವೆ. ಇಂದಿಗೂ ಇನ್ನೂ ಅನೇಕ ಜನಾಂಗಗಳು ಮಾತೃ ಸಂಸ್ಕೃತಿಯನ್ನೇ ಅನುಸರಿಸುತ್ತಿವೆ. ಮಾತೃ ಸಂಸ್ಕೃತಿಯಲ್ಲಿ ಸ್ತ್ರೀಯೇ ಕೇಂದ್ರ ವ್ಯಕ್ತಿ.

"ಭಾರತೀಯ ಸಂಸ್ಕೃತಿಯಲ್ಲಿ ಬ್ರಾಹ್ಮಣ್ಯ ಮತ್ತು ಭಕ್ತಿಗಳು ಎರಡು ವಿರುದ್ಧ ಧ್ರುವಗಳು ಎಂದು ಬಹುಜನರು ಸಾಮಾನ್ಯವಾಗಿ ಹೇಳುವುದುಂಟು. ಆದರೆ ವಾಸ್ತವದಲ್ಲಿ ಬ್ರಾಹ್ಮಣ್ಯಕ್ಕೆ ಭಕ್ತಿಗಿಂತಲೂ ಬಲವಾದ ಸವಾಲುಗಳನ್ನು ಒಡ್ಡಿರುವ ಹಾಗೂ ಧಕ್ಕೆಯನ್ನುಂಟು ಮಾಡಿರುವಂತಹ ಧಾರೆಗಳೆಂದರೆ ಯೋಗ ಮತ್ತು ತಂತ್ರಗಳು. ಸದ್ಯ ಲಭ್ಯವಿರುವ ಕನ್ನಡ ಸಾಹಿತ್ಯವನ್ನು ವಿಶೇಷವಾಗಿ ಅಧ್ಯಯನ ಮಾಡಿದರೆ ವೈದಿಕ ಕೃತಿಗಳು, ಶ್ರಮಣ ಕೃತಿಗಳು ಹಾಗೂ ಭಕ್ತಿ ಕೃತಿಗಳು ಸಿಗುತ್ತವೆಯೇ ಹೊರತು ಯೋಗ ಮತ್ತು ತಂತ್ರ ಮಾರ್ಗದ ಕೃತಿಗಳು ಸಿಗುವುದಿಲ್ಲ. ಹಾಗಾಗಿ ನಾವು ಅವುಗಳನ್ನು ಮತ್ತೆ ಶೋಧಿಸಿ, ಅವುಗಳಲ್ಲಿಯ ಅಂಶಗಳನ್ನು ಪುನರಾವಿಷ್ಕರಿಸಿ ನಮ್ಮ ಪರಂಪರೆಯನ್ನು ಹೊಸದಾಗಿಯೇ ಬರೆಯಬೇಕಾಗಿದೆ. ಇದೇ ರೀತಿ ನಾವು ಇದುವರೆಗೆ ಒಪ್ಪಿ ಕೊಂಡು ಬಂದ ಕನ್ನಡ ಪರಂಪರೆಯೆಂಬುದರ ಹೊರಗಿರುವ ಕನ್ನಡಗಳನ್ನೂ ಸೇರಿಸಿಕೊಂಡು ನಮ್ಮ ಸಾಹಿತ್ಯ-ಸಂಸ್ಕೃತಿ ಪರಂಪರೆಯನ್ನು ಪುನಸ್ಸಂಘಟಿಸಬೇಕಾಗಿದೆ" ಎಂದು ಡಿ.ಆರ್. ನಾಗರಾಜ್ ಹೇಳುತ್ತಾರೆ. ಯೋಗ ಮತ್ತು ತಂತ್ರ ಅವೈದಿಕವಾದ ಪರಂಪರೆಗಳು. ವೇದಾಂತದ ವ್ಯಾಖ್ಯಾನ ಈ ಪರಂಪರೆಗಳನ್ನು ಕುಲಗೆಡಿಸಿದವು.

ಶಾಕ್ತ ಪ್ರಾಚೀನವಾದದ್ದು, ವೇದ ಪೂರ್ವದ್ದು. ಅದೂ ಅಲ್ಲದೆ ಶಾಕ್ತಕ್ಕೂ ಮತ್ತು ಶೈವಕ್ಕೂ

ಘರ್ಷಣೆಯಾಗಿದೆ ಮತ್ತು ಶಾಕ್ತದ ಕೈ ಮೇಲಾಗಿದೆ. ಶಾಕ್ತ ತಾಂತ್ರಿಕ ಸಂಸ್ಕೃತಿಯಾದಾಗ ಪಿತೃ ಸಂಸ್ಕೃತಿ ಶೈವ ಮತ್ತು ವೈಷ್ಣವ ತಂತ್ರಗಳಲ್ಲಿ ಬೇರೂರಿತು. ತಂತ್ರಗಳು ಜನಸಾಮಾನ್ಯರ ಬದುಕಿನ ದಾರಿ. ತಂತ್ರ ಪೂಜೆ ಪುರೋಹಿತ ರಹಿತ, ಶೋಷಣೆ ರಹಿತ, ಹೆಚ್ಚು ಖರ್ಚಿನದಲ್ಲ, ಜಾತಿ ಮತ್ತು ವರ್ಗ ರಹಿತವಾದದ್ದು. ತಂತ್ರದಲ್ಲಿ ಸ್ತ್ರೀಯೇ ಕೇಂದ್ರ. ಸ್ತ್ರೀ ಗುರುವಾಗಿ ದೀಕ್ಷೆ ಕೊಡಬಲ್ಲಳು. ತಂತ್ರ ಲೋಕ ರಹಸ್ಯವಾದುದು. ತಂತ್ರ ಸಾಧಕರು ಇಂದ್ರಿಯ ಲೋಲುಪ್ತರಲ್ಲ, ವಿಷಯ ಲಂಪಟರಲ್ಲ, ಹಾಗಿದ್ದರೆ ಕುಡುಕರು, ಮಾಂಸಾಹಾರಿಗಳು, ವ್ಯಭಿಚಾರಿಗಳು ಮಹಾಸುಖಿ ಸಾಧಕರಾಗಿ ಮುಕ್ತಿಗೆ ಅರ್ಹರಾಗಿ ಬಿಡುತ್ತಿದ್ದರು. ತಂತ್ರ ಸಾಧಕರು ವಿಧಿವಾದಿಗಳಲ್ಲ, ನೀತಿವಾದಿಗಳಲ್ಲ. ತಂತ್ರ ಸಾಧನೆಯಲ್ಲಿ ಹೆಣ್ಣು - ಗಂಡು ಸಾಧಕರು ಭೈರವಿ-ಭೈರವ, ಪಾರ್ವತಿ-ಶಿವರೇ ಆಗುತ್ತಾರೆ. ತಂತ್ರ ಸಾಧನೆಯಲ್ಲಿ ಸ್ತ್ರೀಯರ ಮಾತಿರಲಿ, ಹೆಣ್ಣು ಪ್ರಾಣಿಗಳನ್ನೂ ಬಲಿಕೊಡುವುದಿಲ್ಲ. ಸ್ತ್ರೀ ಶೋಷಣೆ ಮತ್ತು ಸ್ತ್ರೀ ಹಿಂಸೆಯ ಮುಕ್ತವಲಯವೇ ತಂತ್ರದ್ದು. ಇಂಥ ಒಂದು ಪರಂಪರೆಗೆ ಬೆನ್ನು ತಿರುಗಿಸಿದ್ದು ಪಿತೃ ಸಂಸ್ಕೃತಿ. ಲೈಂಗಿಕತೆ, ಸಂತಾನೋತ್ಪತ್ತಿ ಮತ್ತು ವಿವಾಹ ಸೂತ್ರಗಳಿಂದ ಪುರುಷ ಸಂಸ್ಕೃತಿ ಸ್ತ್ರೀ ಬದುಕಿಗೆ ಎರವಾಯಿತು. ಸ್ತ್ರೀಯರ ಆಸ್ತಿಯ ಒಡೆತನ ಕಿತ್ತುಕೊಂಡಿತು. ಅದಕ್ಕೆ ಸ್ವಗೋತ್ರ ವಿವಾಹ ನಿಷಿದ್ಧಿಯನ್ನು ಸಾಧನವಾಗಿ ಬಳಸಿತು: ಗೃಹಕೃತ್ಯಕ್ಕೆ ಸಂಬಳವಿಲ್ಲದ ಆಳಾಗಿಸಿತು. ಕೈಗಾರಿಕ ಯುಗವಲ್ಲಿ ಒಡೆಯರು ಮತ್ತು ಕಾರ್ಮಿಕ ನಾಯಕರ ಸಂಚಿನಿಂದ, ಕುಟುಂಬ ಭತ್ಯೆ ಜಾರಿಗೆ ತಂದು, ಹೆಣ್ಣನ್ನು ಅಡಿಗೆ ಮನೆಗೆ ಕೂಲಿರಹಿತ ಆಳಾಗಿ ಹಚ್ಚಿತು. ವೈದಿಕರ ಸ್ವಗೋತ್ರದ ಬಲೆಗೆ, ಬೆಡಗಿನ ಸಂಪ್ರದಾಯದ ಮಾತೃ ಸಂಸ್ಕೃತಿಯವರೂ, ಹೆಣ್ಣಿನ ಆಸ್ತಿ ಒಡೆತನ ತಪ್ಪಿಸಲು ಬಲಿ ಬಿದ್ದರು. ಗೋತ್ರ ಪಿತೃ ಪ್ರಧಾನ ಮತ್ತು ಪುರುಷ ಕೇಂದ್ರಿತ, ಬೆಡಗು ಮಾತೃಪ್ರಧಾನ ಮತ್ತು ಸ್ತ್ರೀ ಕೇಂದ್ರಿತ. ಬೆಡಗಿನಲ್ಲಿ ಕೆಲವು ಜನಾಂಗಗಳು ಗೋತ್ರಗಳನ್ನೂ ರೂಢಿಗೆ ತಂದು ಸ್ತ್ರೀಯನ್ನು ಪುರುಷಾಧೀನ ಮಾಡಿದವು. ಆದ್ದರಿಂದ ಸ್ತ್ರೀ ಪುರುಷರ ವಸ್ತುವಾಯಿತು. ಹೀಗಾಗಿ ಸ್ತ್ರೀಯರು ಹಕ್ಕುಗಳಿಂದ ವಂಚಿತರಾದರು. ಜಗತ್ತಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಶಾಶ್ವತ ಶೋಷಣೆಗೆ ಒಳಗಾದರು.

ಈ ಹಿನ್ನೆಲೆಯಲ್ಲಿ ಇದುವರೆವಿಗೂ ಪ್ರಕಟವಾಗಿರುವ ಕನ್ನಡ ಸಾಹಿತ್ಯ ಚರಿತ್ರೆಗಳನ್ನು ಸಮೀಕ್ಷಿಸಬಹುದು. ವೇಯ್‌ಗ್ಲೆ, ಕಿಟಲ್, ಇ.ಪಿ.ರೈಸ್ ಮುಂತಾದವರು ಇಂಗ್ಲೀಷಿನಲ್ಲಿ ಬರೆದ ಪ್ರಬಂಧ ಮತ್ತು ಕೃತಿಗಳೇ ಕನ್ನಡ ಸಾಹಿತ್ಯ ಚರಿತ್ರೆಗಳಿಗೆ ಮಾರ್ಗದರ್ಶಕವಾದವು. ಮೂರು ಸಂಪುಟಗಳಲ್ಲಿ ಸಾಹಿತ್ಯ ಚರಿತ್ರೆಯನ್ನು ಆರ್. ನರಸಿಂಹಾಚಾರ್ ರಚಿಸಿದರು. ಮುಗಳಿಯವರು "ಇಷ್ಟು ವಿಸ್ತಾರವಾಗಿ ಕನ್ನಡ ಸಾಹಿತ್ಯದ ತವನಿಧಿಯನ್ನು ಒದಗಿಸಿಕೊಟ್ಟುದ್ದಕ್ಕಾಗಿ ಕವಿ ಚರಿತ್ರೆಕಾರರಿಗೆ ಕನ್ನಡಿಗರು ಚಿರಋಣಿಗಳಾಗಿದ್ದಾರೆ. ಆದರೆ ಈ ಕವಿ ಚರಿತ್ರೆ ಪೂರ್ಣ ಅರ್ಥದಲ್ಲಿ ಸಾಹಿತ್ಯ ಸಮೀಕ್ಷೆಯೂ ಆಗಲಿಲ್ಲ. ಸಾಹಿತ್ಯ ಚರಿತ್ರೆಯೂ ಆಗಲಿಲ್ಲ. ಅದರ ಉದ್ದೇಶವೂ ಅದಾಗಿರಲಿಲ್ಲ" ಎನ್ನುತ್ತಾರೆ. ಆದರೆ ನರಸಿಂಹಾಚಾರ್ ಅವರ ಕವಿ ಚರಿತ್ರೆ, ಮುಂದಿನವರ ಸೂಕ್ಷ್ಮ ಸಂಕ್ಷಿಪ್ತ- ವಿಸ್ತೃತ, ಜನ ಪ್ರಿಯ- ಪ್ರೌಢ ಸಾಹಿತ್ಯ ಚರಿತ್ರೆಗಳಿಗೆ ಸಾಮಗ್ರಿಯನ್ನು ಒದಗಿಸಿ ಆಕರ ಗ್ರಂಥವಾಯಿತು. ಎನ್.ಕೆ. ಕುಲಕರ್ಣಿ, ಎಂ. ಮರಿಯಪ್ಪ ಭಟ್ಟ, ತ.ಸು. ಶಾಮರಾಯರು,

ಕೆ. ವೆಂಕಟರಾಮಪ್ಪ, ಸದಾನಂದ ನಾಯಕ ಮುಂತಾದವರು ಬರೆದಿರುವ ಸಾಹಿತ್ಯ ಚರಿತ್ರೆಯ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ಪಠ್ಯಪುಸ್ತಕಗಳೇ ಸರಿ. ವಿ.ಸೀ ಅವರ ಸಂಪಾದಕತ್ವದಲ್ಲಿ, ಪ್ರಮುಖ ಕವಿಗಳನ್ನು ಕೇಂದ್ರವಾಗಿಟ್ಟು ಹೊರತಂದ ಕವಿ-ಕಾವ್ಯ-ಪರಂಪರೆಯ ಮಾಲೆಯಲ್ಲಿನ ಕೃತಿಗಳೂ ಸಾಹಿತ್ಯ ಚರಿತ್ರೆಗೆ ಕೊಡುಗೆಗಳೇ ಸರಿ. ಎಷ್ಟೇ ಕೊರತೆಗಳಿದ್ದರೂ ಮುಗುಳಿಯವರ ಕನ್ನಡ ಸಾಹಿತ್ಯ ಚರಿತ್ರೆ ಒಂದು ಉತ್ತಮ ಗ್ರಂಥ. ಅಪೂರ್ಣವಾದರೂ ಬಿ.ಎಂ.ಶ್ರೀ ಅವರ ಕನ್ನಡ ಸಾಹಿತ್ಯ ಚರಿತ್ರೆ ಒಂದು ಮಾದರಿಯಾಗಿದೆ. ಶ್ರೀ ಸಾಮಾನ್ಯನನ್ನು ದೃಷ್ಟಿಯಲ್ಲಿ ಇಟ್ಟು ಕೊಂಡು, ಬೆಂಗಳೂರು ವಿಶ್ವವಿದ್ಯಾಲಯ ಶ್ರೀ ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆಯ ಹತ್ತು ಸಂಪುಟಗಳನ್ನು ಪ್ರಕಟಿಸಿತು. ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳು ಯೋಜನೆ ಹಾಕಿಕೊಂಡು, ಪರಸ್ಪರ ಸ್ಪರ್ಧಿಗಳಂತೆ. ಸಾಹಿತ್ಯ ಚರಿತ್ರೆಯ ಸಂಪುಟಗಳನ್ನು ವಿವಿಧ ಲೇಖಕರಿಂದ ಲೇಖನಗಳನ್ನು ಬರೆಸಿ ಹೊರತಂದವು. ವಸ್ತುನಿಷ್ಠವಾಗಿ, ವಿಮರ್ಶಾತ್ಮಕವಾಗಿ ಸಾಹಿತ್ಯ ಚರಿತ್ರೆಯನ್ನು ರಚಿಸಬೇಕೆಂಬುದೇ ಎರಡೂ ವಿಶ್ವವಿದ್ಯಾಲಯಗಳ ಆಶಯ. 'ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯ ಚರಿತ್ರೆಯಲ್ಲಿ ಯಥೇಚ್ಛವಾದ ಸಾಮಗ್ರಿ ಸಂಗ್ರಹವಿದ್ದೂ ಮೌಲ್ಯ ಮಾಪನ ಅಭಾವವಿದೆ. ಎರಡರಲ್ಲೂ ಬರವಣಿಗೆಯ ವೈವಿಧ್ಯವಿರುವಂತೆಯೇ ಸಾಹಿತ್ಯ ಚರಿತ್ರೆಯ ಬೆಳವಣಿಗೆಯನ್ನು ಕುರಿತಂತೆ ಪರಸ್ಪರ ವಿರುದ್ಧಾಭಿಪ್ರಾಯಗಳೂ ಅನಿವಾರ್ಯವಾಗಿ ನುಸುಳಿಕೊಂಡಿದೆ. ಒಂದು ವ್ಯವಸ್ಥಿತ ಸಮಗ್ರತೆ ಅವುಗಳಿಗೆ ಬಾರದೆ ಎಲ್ಲ ವಿಮರ್ಶಾ ಸಂಕಲನ ಗಳಂತೆ ಅವು ಸಂಪಾದನೆಗೊಂಡಿವೆ. ಬೆಂಗಳೂರು ವಿಶ್ವವಿದ್ಯಾಲಯ ಹೊರತಂದ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆಯ ಹತ್ತು ಕಿರು ಸಂಪುಟಗಳು 'ಸಾಮಾನ್ಯನಿಗೆ' ಎಂಬ ತಲೆ ಪಟ್ಟಿ ಅಂಟಿಸಿಕೊಂಡಿ ರುವುದನ್ನು ಬಿಟ್ಟರೆ ಬಹುಪಾಲು ಚರ್ವಿತ ಚರ್ವಣ ಬರವಣಿಗೆಯೇ' ಎನ್ನುವ ಸಿ. ವೀರಣ್ಣನವರ ಮಾತು ಕೆಲವರಿಗೆ ಅತಿಯಾಯಿತು ಎನ್ನಿಸಬಹುದು. ಇದುವರೆವಿಗೆ ಬಂದಿರುವ ಎಲ್ಲಾ ಸಾಹಿತ್ಯ ಚರಿತ್ರೆಗಳ ಕೊರತೆಯನ್ನು ನೀಗಿಸಲು, ಸಾಮಾಜಿಕ ದೃಷ್ಟಿಯಿಂದ ಸಾಹಿತ್ಯ ರಚನೆಯ ಐದು ಸಂಪುಟಗಳ ಯೋಜನೆಯನ್ನು ಹಾಕಿಕೊಂಡ ಸಿ. ವೀರಣ್ಣನವರು, ಮೊದಲನೆಯ ಸಂಪುಟ ಸಾಹಿತ್ಯ ಚರಿತ್ರೆಯನ್ನು ಪ್ರಕಟಿಸಿ ಕೈತೊಳೆದುಕೊಂಡು ಬಿಟ್ಟರು. ಅವರ ಮೊದಲ ಸಂಪುಟವನ್ನು ಕುರಿತು 'ಸಾಹಿತ್ಯ ಚರಿತ್ರೆ' ಎಂದರೆ 'ಸಾಹಿತ್ಯ ಚರಿತ್ರೆಯೋ' ಅಥವಾ 'ಸಾಹಿತ್ಯದಲ್ಲಿ ಚರಿತ್ರೆಯೋ?' ಎಂಬ ತಲೆ ತಿನ್ನುವ ಪ್ರಶ್ನೆಯನ್ನು ಎತ್ತಿದ ಕೆ.ವಿ. ನಾರಾಯಣ "ಈ ಸಾಹಿತ್ಯ ಚರಿತ್ರೆಯು 'ಸಾಹಿತ್ಯ' 'ಚರಿತ್ರೆ'ಗಳನ್ನು ಸ್ಥಗಿತಗಳೆಂದು ಗ್ರಹಿಸುತ್ತದೆ 'ಸಾಹಿತ್ಯ ಚರಿತ್ರೆಯನ್ನು ವಿವರಿಸಿ ಕೊಳ್ಳುವಾಗ 'ಚರಿತ್ರೆಯ ಮೂಲಕ ಸಾಹಿತ್ಯ'ವೆಂಬ ನೆಲೆಗೆ ಒತ್ತನ್ನು ನೀಡುತ್ತದೆ. ಈ ಗ್ರಹಿಕೆಯ ಮುಲಭೂತವಾಗಿ ಪ್ರಶ್ನಾರ್ಹವೆಂಬುದು ಈ ಸಮೀಕ್ಷಕನ ನಿಲುವು" ಎಂದು ಸ್ಪಷ್ಟವಾಗಿ ಹೇಳಿ, "ಈ ಸಾಹಿತ್ಯ ಚರಿತ್ರೆಯು ಇಲ್ಲಿಯವರೆಗಿನ ಪ್ರಯತ್ನಗಳಿಗಿಂತ ಭಿನ್ನವಲ್ಲ" ಎನ್ನುತ್ತಾರೆ. ಅಂತೂ ಇದುವರೆವಿಗೂ ಬಂದಿರುವ ಸಾಹಿತ್ಯ ಚರಿತ್ರೆಗಳು ಪ್ರಯತ್ನಗಳೇ ಹೊರತು, ಯಾವೊಂದು ಸಾಹಿತ್ಯ ಚರಿತ್ರೆಯೂ ಸಮಗ್ರವೂ ಅಲ್ಲ, ಪರಿಪೂರ್ಣವೂ ಅಲ್ಲ. ಆದ್ದರಿಂದ ಬೇರೆ ಬೇರೆ ಮಗ್ಗುಲುಗಳಿಂದ ಸಾಹಿತ್ಯ ಚರಿತ್ರಗೆಳನ್ನು ಹೊಸದಾಗಿ ರಚಿಸುವ ಅಗತ್ಯ ಇಂದಿಗೂ ಇದೆ. ಅದಕ್ಕಾಗಿ ಸಾಹಿತ್ಯ ಚರಿತ್ರೆಯ ರೂಪ-ರೇಷಗಳನ್ನು ಚರ್ಚಿಸಿ ಸಿದ್ಧಪಡಿಸಬೇಕಿದೆ.

ಇಲ್ಲಿಯತನಕ ಬಂದಿರುವ ಸಾಹಿತ್ಯ ಚರಿತ್ರೆಗಳನ್ನು ತಿರಸ್ಕರಿಸಬೇಕೇ ಎಂಬ ಪ್ರಶ್ನೆ ಎದುರಾಗುತ್ತದೆ. ಅವುಗಳಲ್ಲಿ ಎಷ್ಟೇ ಇತಿಮಿತಿಗಳಿದ್ದರೂ, ಅವುಗಳ ಮಾದರಿಗಳನ್ನು ಸೂಕ್ತವಾಗಿ ಅಧ್ಯಯನ ಮಾಡಿ, ಒಳ್ಳೆಯ ಅಂಶಗಳಿದ್ದರೆ ಸ್ವೀಕರಿಸಿ, ಒಪ್ಪದ, ಮಾನವೀಯತೆಗೆ ವಿರುದ್ಧ ವಿದ್ದರೆ, ಅಂಥ ಜೀವ ವಿರೋಧಿ ಅಂಶಗಳನ್ನು ತಿರಸ್ಕರಿಸುವುದಕ್ಕಾಗಿಯಾದರೂ, ಅವುಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ. ಆದರೆ ಮುಂದಿನ ಪೀಳಿಗೆಗೆ ಅವು ಅನುಕರಣೀಯವೂ ಅಲ್ಲ ಮತ್ತು ಆದರ್ಶವೂ ಅಲ್ಲ ಎಂದು ಅರಿತರೆ ಸಾಕು. ಸಾಹಿತ್ಯ ಚರಿತ್ರೆಯ ಬೆಳವಣಿಗೆಯಲ್ಲಿ ಆದ ವಿವಿಧ ಹಂತಗಳಲ್ಲಿ "ಚಾರಿತ್ರಿಕ ಪ್ರಜ್ಞೆ ಅನ್ನುವುದು ಒಂದು ಆಧುನಿಕ ಸಂವೇದನೆ. ಚರಿತ್ರೆಯನ್ನು ಗ್ರಹಿಸುವಂತಹ ಈ ರೀತಿಯ ಪ್ರಜ್ಞೆ ಸಾಹಿತ್ಯ ಚರಿತ್ರೆಯ ಕ್ಷೇತ್ರವನ್ನು ಪ್ರಭಾವಿಸ ತೊಡಗಿದಾಗಿ ಸಾಹಿತ್ಯವನ್ನೂ ಚರಿತ್ರೆಯಂತೆಯೇ ಗ್ರಹಿಸಲೆಳಸುವ ಒಂದು ಮೋಹಕ ದುರಭ್ಯಾಸ ಹಬ್ಬಿತು. ಈ ರೀತಿಯ ಸಾಹಿತ್ಯ ಚರಿತ್ರೆ ಅನ್ನುವುದು ಒಂದು ಕೃತಕವಾದ ವಿಕಲ್ಪ. ಹಾಗಾಗಿ ಇಂದು ಸಾಹಿತ್ಯ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವಲ್ಲಿ ಹಾಗೂ ಅದಕ್ಕೆ ಒಂದು ಬಗೆಯ ರಮ್ಯತೆಯನ್ನು ತಂದು ಕೊಡುವಲ್ಲಿ ಸಾಹಿತ್ಯ ಚರಿತ್ರೆ ವಿಧಾನವನ್ನು ಬಿಟ್ಟುಕೊಡದೆ ಕವಿ-ಕೃತಿ-ಛಂದಸ್ಸುಗಳ ಜೊತೆಗಿನ ನಮ್ಮ ಅನುಸಂಧಾನವನ್ನು ಬಿಟ್ಟು ಕೊಡದೆ ಸಾಹಿತ್ಯದ ಚರಿತ್ರೆಯನ್ನು ಮಾತ್ರ ಹೊಸದೊಂದು ಕ್ರಮದ ಮುಖಾಂತರ ಸಮೀಪಿಸಲು ಪ್ರಯತ್ನಿಸಿದಾಗಲಷ್ಟೇ ಅದರ ಒಳ ಸತ್ಯಗಳು ನಮಗೆ ಗೋಚರವಾಗುವುದು. ಅದರಲ್ಲೂ ಕನ್ನಡ ಸಾಹಿತ್ಯ ಸಂಸ್ಕೃತಿಯೊಳಗಡೆ ದೇಶದ ಕಲ್ಪನೆ ಪ್ರಮುಖವಾಗಿದೆಯೇ ಹೊರತು ಕಾಲದ ಕಲ್ಪನೆಯಲ್ಲ" ಎನ್ನುತ್ತಾರೆ ಡಿ.ಆರ್. ನಾಗರಾಜ್. ಅವರ ದೇಶಿ ಪರಿಕಲ್ಪನೆಯ ಪರಿಶೀಲನೆಯಿಂದ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಯ ನಡುವಣ ಅಂತರ ಮತ್ತಷ್ಟು ಕಡಿಮೆಯಾಗಿ ಪಾರದರ್ಶಕತೆ ಏರ್ಪಡುತ್ತದೆ. "ಸಾಹಿತ್ಯ ಚರಿತ್ರೆ ಎಂದರೆ ಸಾಮಾಜಿಕ ಎಚ್ಚರ ಹಾಗೂ ಅಭಿವ್ಯಕ್ತಿ ಸಾಮರ್ಥ್ಯಗಳು ಹೇಗೆ ಮೇಲ್ಪದರದಿಂದ ಕ್ರಮೇಣ ಕ್ರಮೇಣ ಕೆಳ ಪದರಗಳ ಮೂಲಕ ಇಳಿಯುತ್ತಾ, ವ್ಯಾಪಕವಾಗುತ್ತಾ ಬಂದಿತೆಂಬುದರ ಚರಿತ್ರೆಯೇ ಎನ್ನಬಹುದು" ಎನ್ನುವ ಜಿ.ಎಸ್. ಶಿವರುದ್ರಪ್ಪ ಅವರ ಮಾತಿನಲ್ಲಿ ಸಾಹಿತ್ಯ ಚರಿತ್ರೆ ಸಮಗ್ರ ಕನ್ನಡಿಗರ ಸಂವೇದನೆಗಳ ಅಭಿವ್ಯಕ್ತಿಯಾಗಬೇಕು ಎಂಬ ಧ್ವನಿ ಸ್ವಾಗತಾರ್ಹವಾದುದು. ಅಂತೂ ಸಾಹಿತ್ಯ ಚರಿತ್ರೆಗಳ ಅಧ್ಯಯನ ಮತ್ತು ಅವುಗಳ ರಚನೆಯ ಮಾದರಿ ಬದಲಾಗಬೇಕೆಂಬುದು ಎಲ್ಲರ ಅಭಿಪ್ರಾಯ.

### ಭಾಗ-೨

ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ಒಂದು ವ್ಯವಸ್ಥಿತ ಶಿಸ್ತಿಗೆ ಒಳಪಡಲಿಲ್ಲ. ಭಾರತೀಯ ಕಾವ್ಯ ಮೀಮಾಂಸೆ ಮತ್ತು ಪಾಶ್ಚಾತ್ಯ ವಿಮರ್ಶೆಯ ಪ್ರಭಾವದಿಂದ ಕನ್ನಡ ಸಾಹಿತ್ಯ ವಿಮರ್ಶೆ ತನ್ನ ಮೂಲ ವಿಮರ್ಶಾ ಪರಂಪರೆಯ ನೆಲೆಗಾಗಿ ತಡಕಾಡುವ ಪರಿಸ್ಥಿತಿ ಒದಗಿದೆ. ಪಿತೃ ಸಂಸ್ಕೃತಿಯ ಕರಾಳ ಹಿಡಿತದಿಂದ ಕನ್ನಡ ಸಾಹಿತ್ಯ ವಿಮರ್ಶೆಯೂ ಬಿಡುಗಡೆ ಹೊಂದಲು ಸಾಧ್ಯವಾಗಿಲಿಲ್ಲ. ಪಿತೃ ಸಂಸ್ಕೃತಿಯ ಕನ್ನಡ ವಿಮರ್ಶಕರು, ತಮ್ಮ ಪಿತೃ ಸಂಸ್ಕೃತಿಯನ್ನೇ ಸಮರ್ಥಿಸುವ ಮತ್ತು ಹೊಂದಿಕೊಳ್ಳುವ ಪಾಶ್ಚಾತ್ಯ ವಿಮರ್ಶೆಯ ಪರಿಭಾಷೆಗಳು ಮತ್ತು

ಸಾಹಿತ್ಯ ವಿಮರ್ಶೆಯು ಸಿದ್ಧಾಂತಗಳನ್ನೇ ಅಳವಡಿಸಿಕೊಂಡು, ಪಿತೃ ಸಂಸ್ಕೃತಿಯ ಯಜಮಾನಿಕೆಯನ್ನು ಕನ್ನಡ ವಿಮರ್ಶಾ ಕ್ಷೇತ್ರದಲ್ಲಿಯೂ ಸ್ಥಾಪಿಸಿದರು. ಈಗಾಗಲೇ ಪಿತೃ ಸಂಸ್ಕೃತಿಯ ಭಾರತೀಯ ಸಂಸ್ಕೃತಿಯ, ಭಾರತೀಯ ಕಾವ್ಯ ಮೀಮಾಂಸೆ, ಕನ್ನಡ ವಿಮರ್ಶೆಯಲ್ಲಿ ಅಧಿಕವಾಗಿ ಮತ್ತು ಅಧಿಕೃತವಾಗಿ ಬಳಕೆಯಾಗಿ, ಅದಕ್ಕೆ ಹೊಂದುವ ಪಾಶ್ಚಾತ್ಯ ವಿಮರ್ಶೆಯ ಪರಿಕಲ್ಪನೆಗಳನ್ನು ಕಸಿ ಮಾಡುವುದು ಸುಲಭವಾಯಿತು. ಪಾಶ್ಚಾತ್ಯ ವಿಮರ್ಶೆಯ ಪ್ರಭಾವ ಪಿತೃ ಸಂಸ್ಕೃತಿಗೆ ಮರುಹುಟ್ಟು ಕಲ್ಪಿಸಿ, ಮತ್ತಷ್ಟು ಬಲಗೊಂಡಿತು. ಅದಕ್ಕೆ: - " As in every other descipline or walk of life, by now it can be taken as an established fact that male structures of power are inscribed with in our literary inheritance too. Characters, readers and even writers to some extent are encoded within the frame work prescribed by patriarchy. We must then examine the ethical implications of the erstwhile unquestioned "Aesthetic" pleasure, pleasures derived at times at the cost of the second sex. By raising new and deifferent questions, feminist criticism seeks to liberate new and live significanccs from the same texts". - Sukrit-Paul Kumar. ಈ ಮಾತಿನಿಂದ ಪಿತೃ ಸಂಸ್ಕೃತಿ ಹೇಗೆ ಸಾಹಿತ್ಯ ಕ್ಷೇತ್ರದಲ್ಲಿಯೂ ಅಂಕುಶವಾಗಿ ನಿಯಂತ್ರಿಸುತ್ತ ಸರ್ವಾಧಿಕಾರಿಯಾಗಿ ಸಾಂಸ್ಕೃತಿಕ ವಿಷ ಬಿತ್ತಿತ್ತು, ಅದೇ ಪಠ್ಯಗಳ ಬಹುಮುಖಿ ಅರ್ಥದ ಅಸ್ತಿತ್ವ ಎತ್ತಿ ಹಿಡಿದು ಪಿತೃ ಸಂಸ್ಕೃತಿಯ ಮುಖವಾಡವನ್ನು ಕಳಚಿತು ಎಂಬುದು ಸ್ಪಷ್ಟವಾಗುತ್ತದೆ. "ಪೂರ್ವ ನಿರ್ಧಾರಿತ ಲಿಂಗಜಾತಿಯನ್ನು ಆಧರಿಸಿ ಸ್ತ್ರೀಯನ್ನು ಕುರಿತು ಹಲವು ಆದಿಮ ಪ್ರತಿಮೆಗಳು ಸಂಸ್ಕೃತಿಯಲ್ಲಿದ್ದು ವ್ಯಕ್ತಿಯ ಸಂಸ್ಕೃತೀಕರಣದ ಪ್ರಕ್ರಿಯೆಯಲ್ಲಿ ಅವುಗಳನ್ನು ಅಂತರ್ಗತವಾಗಿಸಿಕೊಳ್ಳುವುದರ ಪರಿಣಾಮವಾಗಿ ಸಾಂಪ್ರದಾಯಿಕ ಲಿಂಗಜಾತಿ ಸ್ವರೂಪವು ನಮ್ಮ ಪ್ರಜ್ಞೆಯಲ್ಲಿ ತಳವೂರಿರುತ್ತದೆ. ಈ ಪ್ರತಿಮೆ, ಸಂಕೇತಗಳನ್ನು ಪ್ರಶ್ನಿಸುವುದು, ಬದಲಿಸುವುದು, ಒಡೆಯುವುದು ಸ್ತ್ರೀ ವಾದಿ ಪ್ರಜ್ಞೆಯ ಒಂದು ಅಗತ್ಯವಾಗಿದೆ. ಸ್ತ್ರೀಯನ್ನು ವೈಭವೀಕರಿಸಲಿ, ಅವಳ ಶಕ್ತಿಯನ್ನು ನಿರಾಕರಿಸಲಿ ಅಂತಿಮ ಪರಿಣಾಮವಾಗಿ ಅವಳನ್ನು ಅವಳಿರುವಂತೆಯೇ ಗುರುತಿಸಲು ಸಾಧ್ಯವಾಗದಂತೆ ಈ ಪ್ರಕ್ರಿಯೆಗಳು ತಡೆಯುತ್ತವೆ. ಈ ಶ್ಲಾಘನೆ-ನಿಂದನೆಗಳ ಗೋಡೆಯನ್ನು ಒಡೆದು ನಿಜವಾದ ಮಹಿಳೆಯನ್ನು ಉಸಿರಾಡ ಬಿಡುವುದು ಈ ದಿಕ್ಕಿನ ಒಂದು ಅಗತ್ಯವಾಗಿದೆ" ಎಂದು ಹೇಳುತ್ತಾರೆ ಡಾ. ವಿಜಯಾದಬ್ಬೆ. ಅಂದರೆ ಸ್ತ್ರೀವಾದಿ ವಿಮರ್ಶೆ ಕನ್ನಡ ಸಾಹಿತ್ಯ ವಿಮರ್ಶೆಯನ್ನು ಮುರಿದು-ಕಟ್ಟುವ ತುರ್ತನ್ನು ಸ್ತ್ರೀತ್ವ ಪ್ರಜ್ಞೆಯ ಸ್ತ್ರೀವಾದಿ ವಿಮರ್ಶಕರಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ.

ಪಾಶ್ಚಾತ್ಯರಲ್ಲಿ ಮಹಿಳಾ ಸಾಹಿತ್ಯ, ಮಹಿಳಾ ಚಳುವಳಿಗಳು ಮತ್ತು ಸ್ತ್ರೀವಾದಿ ವಿಮರ್ಶೆಗೆ ದೀರ್ಘಕಾಲದ ಚರಿತ್ರೆ ಇದೆ. ಇತ್ತೀಚೆಗೆ ಅದೂ ಇದುವರೆವಿಗೂ ಬಂದಿರುವ ಕನ್ನಡ ಸಾಹಿತ್ಯದ ಮಹಿಳಾ ಚಳುವಳಿಗಳು, ಮಹಿಳಾ ಸಾಹಿತ್ಯ ಮತ್ತು ಸ್ತ್ರೀವಾದಿ ವಿಮರ್ಶೆ ಪಾಶ್ಚಾತ್ಯ ಮಹಿಳೆಯರ ಗುಹಾಧ್ವನಿಯೇ ಎಂಬ ಪ್ರಶ್ನೆ ಎದುರಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಪರಂಪರೆಯನ್ನು ಪ್ರಾಚೀನ ಕಾಲದಿಂದ ಗುರುತಿಸಲು ಹೆಣಗಾಡಿದರೂ, ಪಾಶ್ಚಾತ್ಯ ಸ್ತ್ರೀವಾದದಿಂದ

ಪ್ರೇರಿತವಾಗಿರುವುದನ್ನು ಅಲ್ಲಗಳೆಯುವಂತಿಲ್ಲ. ಸ್ತ್ರೀ ಕೇಂದ್ರಿತ ಶಾಕ್ತ ಪರಂಪರೆಯ ಸಂಸ್ಕೃತಿಯ ಬೇರನ್ನು ಗುರುತಿಸಿದಾಗ ಮಾತ್ರ, ಪಾಶ್ಚಾತ್ಯ ಸ್ತ್ರೀವಾದಕ್ಕಿಂತ ಭಿನ್ನವಾದ ಮತ್ತು ಸ್ತ್ರೀವಾದಿ ಸಂಸ್ಕೃತಿಯ ಸ್ವತಂತ್ರ ಪರಂಪರೆಯ ನೆಲಗಟ್ಟನ್ನು ಪಡೆಯಬಹುದಾಗಿದೆ. ಆದರೆ ಮೇಲ್ವರ್ಗ ದಿಂದ ಬಂದಿರುವ ಸ್ತ್ರೀವಾದಿ ಮಹಿಳೆಯರಿಗೆ ತಂತ್ರ ಸಂಸ್ಕೃತಿ, ಪಿತೃ ಸಂಸ್ಕೃತಿಯ ಅಪಪ್ರಚಾರ ದಿಂದ, ತಂತ್ರದ ಮಾತೃ ಸಂಸ್ಕೃತಿ ಸ್ತ್ರೀಯರಿಗೇ ಅಸ್ಪೃಶ್ಯವಾಗಿರುವುದು ಒಂದು ದುರಂತ. ಈ ಬುದ್ಧಿಜೀವಿ ಮಹಿಳೆಯರು ಸ್ತ್ರೀ ಸಂಸ್ಕೃತಿ ಮುಖವಾಡದ ಪಿತೃ ಸಂಸ್ಕೃತಿಯ ಹರಿಕಾರರೇ ಎಂಬ ಅನುಮಾನ ಬರುತ್ತದೆ. ಏತಕ್ಕೆಂದರೆ ಪಿತೃ ಸಂಸ್ಕೃತಿಯ ಹೆಣ್ಣಿನ ಮಾಯೆ ಮತ್ತು ಮಹಾಮಾಯೆಯ ಕಲ್ಪನೆ, ಸ್ತ್ರೀ ಕೇಂದ್ರಿತ ನೆಲೆಯ ಪರಿಕಲ್ಪನೆಗಳಲ್ಲ. ಮಾಯೆ ತಾಮಸಿಕ, ಮಹಾಮಾಯೆ ಸಾತ್ವಿಕ ಮತ್ತು ರಾಜಸಿಕ ಗುಣಗಳ ಸಂಕೇತ. ಮಾಯೆ ತಿರಸ್ಕೃತವಾದುದು, ಮಹಾಮಾಯೆ ಸ್ವೀಕೃತವಾದುದು. ಸ್ತ್ರೀ ದೇವತೆಯರಾದ ಸರಸ್ವತಿ, ಲಕ್ಷ್ಮಿ ಮತ್ತು ಪಾರ್ವತಿ-ಮಹಾಮಾಯೆಯರು ಕ್ರಮವಾಗಿ ಬ್ರಹ್ಮ, ವಿಷ್ಣು ಮತ್ತು ಶಿವ-ಪುರುಷ ದೇವರ ಅಧೀನರು. ಸ್ಥಗಿತ ತತ್ತ್ವ (ಬ್ರಹ್ಮ) ಪುರುಷರಲ್ಲಿ ಐಕ್ಯತೆ ಸಾಧಿಸಬೇಕಾದವರು. ಅಂದರೆ ಪುರುಷ ಪ್ರಧಾನ ಪಿತೃ ಸಂಸ್ಕೃತಿಗೆ ಮಾತೃ ಸಂಸ್ಕೃತಿಯ ಸ್ತ್ರೀಯರು ಅಧೀನರು ಎಂಬ ತತ್ತ್ವವನ್ನು ಬಹುಸಂಖ್ಯಾತ ಹಿಂದೂ ಸ್ತ್ರೀಯರು ತಮಗೆ ಅರಿವಿಲ್ಲದೆ ಒಪ್ಪಿರುತ್ತಾರೆ. ಆದರೆ ಸ್ತ್ರೀ ಕೇಂದ್ರಿತವಾದದ್ದು ದೇವಿ ಭಾಗವತದ ದೇವಿ. ಅವಳು ರಣಚಂಡಿ, ಉಗ್ರ ಸ್ವರೂಪಳು. ಶೋಷಿಕರ ರಕ್ತ ಬಯಸುವ ರಕ್ತ ಪಿಪಾಸಿ. ಪಿತೃ ಸಂಸ್ಕೃತಿಗೆ ಪರ್ಯಾಯ ಮಾತೃ ಸಂಸ್ಕೃತಿ ದೇವಿಯದು. ಸೃಷ್ಟಿ, ಸ್ಥಿತಿ ಮತ್ತು ನಾಶ - ಮೂರಕ್ಕೂ ಅವಳೇ ಕಾರಣಳು. ಪುರುಷ ದೇವತೆಗಳು ಸ್ತ್ರೀ ದೇವತೆಯ ಅಧೀನ. ಅವಳು ರೌದ್ರ ಮತ್ತು ಸೌಮ್ಯ ಸ್ವರೂಪಳು. ಸ್ವತಂತ್ರವಾದ ಮಾತೃ ಸಂಸ್ಕೃತಿಯ ಅರಿವು ಸ್ತ್ರೀವಾದಿಗಳಿಗಿಲ್ಲ. ಮಹಾ ಮಾಯೆಯರು ಬ್ರಹ್ಮ ಸ್ವರೂಪಿಣಿಯರಲ್ಲ. ಆದರೆ ದೇವಿ ಭಾಗವತದ ದೇವಿ ಬ್ರಹ್ಮ ಸ್ವರೂಪಳು. ಬ್ರಹ್ಮ ಪುರುಷನಲ್ಲ, ಅಂತಿಮ ಸತ್ಯ, ದೇವಿ ಪರಂಪರೆ ಯಿಂದ, ಪಾಶ್ಚಾತ್ಯಕ್ಕಿಂತ ಭಿನ್ನವಾದ ಮತ್ತು ಸ್ವತಂತ್ರವಾದ ಸ್ತ್ರೀ ಪರಂಪರೆಯನ್ನು ಗುರುತಿಸ ಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಮಹಿಳಾ ಸಾಹಿತ್ಯ ಮತ್ತು ಸ್ತ್ರೀವಾದಿ ವಿಮರ್ಶೆಯನ್ನು ಪರಿಶೀಲಿಸಬಹುದು.

ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯ ಮತ್ತು ಸ್ತ್ರೀವಾದಿ ವಿಮರ್ಶೆ ಪ್ರತ್ಯೇಕವಾಗಿ ಇರಲು ಸಾಧ್ಯವೇ, ಇದ್ದರೆ ಅದರ ಸ್ವರೂಪವೇನು ಎಂದು ಕೆಲವರು ಅನುಮಾನಿಸಿ ಪ್ರಶ್ನಿಸುತ್ತಾರೆ. "ಕನ್ನಡ ಸಾಹಿತ್ಯ ಪರಂಪರೆಯಲ್ಲಿ, ಪುರುಷರಂತೆ ಮಹಿಳೆಯರೂ ಸಾಹಿತ್ಯ ರಚನೆಯಲ್ಲಿ ಪಾಲುಗೊಂಡಿದ್ದಾರೆ. ಹಾಗೆ ಪಾಲುಗೊಂಡವರ ಸಂಖ್ಯೆ ಸಹಜವಾಗಿಯೇ ಪುರುಷರ ಸಂಖ್ಯೆಗಿಂತ ತೀರಾ ಕಡಿಮೆಯಾಗಿದೆ. ಆದರೂ ಕನ್ನಡದಲ್ಲಿ ಕೃತಿ ರಚನೆ ಮಾಡಿದ ಮಹಿಳೆಯರ ಸಾಧನೆ ಯಾವ ರೀತಿಯಲ್ಲೂ ಕಡಿಮೆ ದರ್ಜೆಯದೇನಲ್ಲ. ಇದನ್ನು ನಾವು 'ಮಹಿಳಾ ಸಾಹಿತ್ಯ' ಎಂದು ಕರೆಯಲು ಇಷ್ಟಪಡುವುದಿಲ್ಲ. ಯಾಕೆಂದರೆ 'ಮಹಿಳಾ ಸಾಹಿತ್ಯ'ವೆಂಬುದೊಂದು ಇದೆ ಎನ್ನುವುದನ್ನು ನಾವು ಒಪ್ಪುವುದಿಲ್ಲ. ಸಾಹಿತ್ಯವೆನ್ನುವುದು ಒಂದು ಮನಸ್ಸಿನ ಸೃಷ್ಟಿಯಾದುದರಿಂದ,

ಅದನ್ನು 'ಪುರುಷ ಸಾಹಿತ್ಯ', 'ಮಹಿಳಾ ಸಾಹಿತ್ಯ' ಎಂದು ವಿಭಾಗಿಸಿ ನೋಡುವುದು ಉಚಿತವಲ್ಲ" ಎನ್ನುತ್ತಾರೆ ಡಾ.ಜಿ.ಎಸ್. ಶಿವರುದ್ರಪ್ಪನವರು. ಸಾಹಿತ್ಯ ಮನಸ್ಸಿನ ಸೃಷ್ಟಿಯಾದರೂ, ಸಾಮಾಜಿಕ ಪ್ರಜ್ಞೆಯಿಂದ ಮನಸ್ಸು ಸಂಪೂರ್ಣವಾಗಿ ನಿರ್ಲಿಪ್ತವಲ್ಲ. ಜೈನನಾದವನು ಜೈನ ಸಾಹಿತ್ಯದ ಬಗೆಗೆ, ವೀರಶೈವನಾದವರು ವೀರಶೈವ ಸಾಹಿತ್ಯದ ಬಗೆಗೆ, ಮತ್ತು ವೈದಿಕ ನಾದವನು ವೈದಿಕ ಸಾಹಿತ್ಯದ ಬಗೆಗೆ ಏತಕ್ಕೆ ಒಲವು ತೋರಿಸುತ್ತಾನೆ ಮತ್ತು ತಮ್ಮ ತಮ್ಮ ಸಾಹಿತ್ಯದಲ್ಲಿ ಅಭಿಮಾನ ಹೊಂದಿರುತ್ತಾರೆ? ತಮ್ಮ ತಮ್ಮ ಸಾಹಿತ್ಯಕ್ಕಿಂತ, ಅನ್ಯ ಜಾತಿ ಸಾಹಿತ್ಯ ಕುರಿತು ಬರೆದದ್ದು ಎಷ್ಟು ಅಧಿಕೃತ? ಹಾಗಾದರೆ ಸಮಗ್ರ ಸ್ತರದ ಸಂವೇದನೆಗಳು ಸಾಹಿತ್ಯದಲ್ಲಿ ಏಕೆ ಅಭಿವ್ಯಕ್ತ ವಾಗಲಿಲ್ಲ? ಬಂಡಾಯ-ದಲಿತ ಸಾಹಿತ್ಯವನ್ನು ಅಧಿಕೃತವಾಗಿ ಮಾನ್ಯ ಮಾಡಿರುವಾಗ ಮಹಿಳಾ ಸಾಹಿತ್ಯವನ್ನು ಮಾನ್ಯ ಮಾಡದಿರಲು ಅಡ್ಡಿ ಯಾವುದು? ಶೋಷಿತರು ಮತ್ತು ಶೋಷಕರು-ಇಬ್ಬರ ಶೋಷಣೆಗೆ, ಕಿರುಕುಳಕ್ಕೆ ತುತ್ತಾಗಿರುವ ಮಹಿಳೆಯರ ನೋವು,ಸಂಕಟ ತೋಡಿಕೊಳ್ಳುವ ಸಾಹಿತ್ಯವನ್ನು ಪರಿಗಣಿಸದಿರುವಲ್ಲಿ ಯಾವ ಔಚಿತ್ಯವಿದೆ? ಅಂದರೆ ಮಹಿಳಾ ಸಾಹಿತ್ಯ ಪುರುಷ ಪ್ರಧಾನ ಸಾಹಿತ್ಯ ಮಾದರಿಯಲ್ಲಿಯೇ ರಚನೆಯಾಗುತ್ತಾ ಅದರಲ್ಲಿ ಸಂಸ್ಕೃತಿಯ ಆರಾಧಕರಾಗಿರುವ ಲಕ್ಷಣಗಳಿವೆಯೆ? ಕೆಳಸ್ತರದ ಮಹಿಳಾ ಲೇಖಕಿಯರ ಹೊರತಾಗಿ, ಮಿಕ್ಕ ಮೇಲ್ವರ್ಗದ ಲೇಖಕಿಯರು ಮನುವಿನ ಗೃಹಣಿಯ ಮಾದರಿಯನ್ನೇ ಬರವಣಿಗೆಯಲ್ಲಿ ಅನುಸರಿಸುತ್ತಿದ್ದಾರೆಯೆ? ಮಹಿಳಾ ಸಾಹಿತ್ಯವನ್ನು ಒಪ್ಪದ ಡಾ.ಜಿ.ಎಸ್. ಶಿವರುದ್ರಪ್ಪನವರ "ಅಲಿಖಿತ ಸಾಹಿತ್ಯದ ಅಜ್ಞಾತ ಸ್ತ್ರೀಯರೇ, ಕನ್ನಡದ ಸಹಜವಾದ ಕವಿತ್ರಿಯರು" ಎನ್ನುವ ಮಾತನ್ನು ಮೆಚ್ಚಲೇಬೇಕು.

ಮಹಿಳಾ ಸಾಹಿತ್ಯ ಮತ್ತು ಸ್ತ್ರೀವಾದದ ವಿಮರ್ಶೆಯನ್ನು ಕುರಿತ ಅಸಡ್ಡೆಗೆ, "Criticism in India has been much more conservative and contious than creative literature, probably because criticism has largely remained the domiain of acedemics" ಎಂಬ ಕೆ.ವಿ. ಗುಪ್ತರ ಮಾತನ್ನು ಗಂಭೀರವಾಗಿ ಚಿಂತಿಸಬೇಕಿದೆ. ಮಾನವೀಯ ಚರಿತ್ರೆ ಎಂದರೆ ಸ್ತ್ರೀಯರನ್ನು ಹತ್ತಿಕ್ಕಿ ದನಿಯಿಲ್ಲದವರನ್ನಾಗಿಸಿದ ಚರಿತ್ರೆ ಎಂದು ಹೇಳಿರುವ ಸ್ತ್ರೀ ಮಿಮರ್ಶಕಿಯ ಮಾತು ನೆನಪಿಗೆ ಬರುತ್ತದೆ. (.....that the history of humanity is a history of systematic attempts to silence the female)

ಡಿ.ಆರ್. ನಾಗರಾಜ್ ಸಾಮಾನ್ಯವಾಗಿ ವೈರುಧ್ಯಗಳ ಪರಿಕಲ್ಪನೆಯ ಭಾಷೆಯನ್ನೇ ತಮ್ಮ ಚಿಂತನೆಯ ನೆಲೆಯಾಗಿ ಬಳಸುತ್ತಾರೆ. ಅವರ ಶಕ್ತಿ-ಶಾರದೆ ಪರಿಕಲ್ಪನೆಯ ಬಳಕೆಯೇ ಇದಕ್ಕೆ ಸಾಕ್ಷಿ. ಇದೊಂದು ಸರಳ ಚಿಂತನೆಯನ್ನು ಸಂಕೀರ್ಣಗೊಳಿಸಿ ಗೊಂದಲಗೊಳಿಸುವ ಸಾಧನವೂ ಆಗಬಹುದು. ಸರಳೀಕರಣ ಚಿಂತನೆಯ ಅಪಾಯದ ವಿರುದ್ಧ ಎಚ್ಚರಿಸುತ್ತಲೇ ಹೊಂದಾಣಿಕೆಯ ಉಪಾಯವನ್ನು ಸೂಚಿಸುವ ವಿಧಾನವೂ ಹೌದು. ಈ ಹಿನ್ನೆಲೆಯಲ್ಲಿ ಅವರ ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಲೇಖನವನ್ನು ಪರಿಶೀಲಿಸಬಹುದು. ಪಾಶ್ಚಾತ್ಯ ವೈರುಧ್ಯ ಚಿಂತನೆ ಗಳನ್ನು, ಭಾರತೀಯ ವೈರುಧ್ಯ ಚಿಂತನೆಗಳ ಹಿನ್ನೆಲೆಯಲ್ಲಿ ಪರಿಶೀಲಿಸುತ್ತ, ಎರಡನ್ನೂ ಕಸಿಗೊಳಿಸುವ ಮಾತುಗಾರಿಕೆಯ ಮಾಂತ್ರಿಕತೆಯಲ್ಲಿ ಡಿ.ಆರ್.ಎನ್. ಸಿದ್ಧ ಹಸ್ತರು. ಪಾಶ್ಚಾತ್ಯರ

ಬಯಲು-ಬಿಲ ದೃಷ್ಟಾಂತಗಳಿಂದ, ಭಾರತೀಯ ಸ್ತ್ರೀ ಕಾತ್ಯಾಯಿನಿ-ಗಾರ್ಗಿಯರ ಸ್ತ್ರೀ ಮಾದರಿಗಳಿಂದ ಸ್ತ್ರೀ ವಿಮರ್ಶೆಗೆ ತೊಡುಗುವಿಕೆಯೇ ಇದಕ್ಕೆ ಸಾಕ್ಷಿ. ಸುಪ್ತವಾಗಿ ಪುರುಷ ವಿಮರ್ಶೆಗೆ ಮಾರು ಹೋಗಿ, ಪ್ರಜ್ಞಾಪೂರ್ವಕವಾಗಿ ಸ್ತ್ರೀ ವಿಮರ್ಶೆಯನ್ನು ಮೆಚ್ಚುತ್ತಾರೆ. ಇದು ಮಾಯೆ. ಮಹಾಮಾಯೆಯಾಗಿ ಸ್ತ್ರೀ ಪುರುಷರಿಗೆ ಆಧೀನಳಾಗಿ, ಹೊಂದಿಕೊಂಡು ಹೋಗುವ ವಿಧಾನ. ಸ್ತ್ರೀ ದೇವಿಯಾಗಿ ಪರ್ಯಾಯ ಸಂಸ್ಕೃತಿಯ ಒಡೆಯಳಾಗಬಹುದು ಎಂಬುದರ ಬಗ್ಗೆ ಆತ್ಮವಿಶ್ವಾವಿಲ್ಲ. ಬಯಲು ಬಯಲನ್ನು ನುಂಗುವ, ಬೆಳಕು ಬೆಳಕನ್ನು ನುಂಗುವ, ಶೂನ್ಯ - ನಿಶ್ಯೂನ್ಯವಾಗುವ, ಶಬ್ದ ನಿಶ್ಶಬ್ಧವಾಗುವ ಪರ್ಯಾಯ ದರ್ಶನ ಬಂದಿದೆ. ಅದು ಶಾಸ್ತ್ರ ಪ್ರಮಾಣವಲ್ಲ. ಸಾಧನೆಯಿಂದ ಲಭ್ಯ ಎಂಬ ಅರಿವು ಅಗತ್ಯ. ಅಲ್ಲಮನ ಲಿಂಗಾನುಭವದಲ್ಲಿ ಲಿಂಗವಿಲ್ಲದಿದ್ದರೂ, ಅದು ಸೂಕ್ಷ್ಮಲಿಂಗವಾಗುತ್ತದೆ, ಭಾವಲಿಂಗವಾಗುತ್ತದೆ. ಶಾಸ್ತ್ರ ಪ್ರಮಾಣವೇ ಪುರುಷ, ಸಾಧನೆಯೇ ಸ್ತ್ರೀ ಮತ್ತು ಶೂದ್ರ. ಕಾತ್ಯಾಯಿನಿ ಮತ್ತು ಗಾರ್ಗಿ ಸ್ತ್ರೀ ಮಾದರಿಗಳು ಸಂಸ್ಕೃತೀಕರಣಕ್ಕೆ ಒಳಗಾದ ಶೂದ್ರ ಸ್ತ್ರೀ ಮಾದರಿಗಳು- ಅವು ಪರೋಕ್ಷವಾಗಿ ಪುರುಷ ಮಾದರಿಗಳೇ. ಈ ರೀತಿಯ ದೃಷ್ಟಾಂತಗಳ ಸ್ತ್ರೀ ಕಾವ್ಯ ಮೀಮಾಂಸೆಯ ವ್ಯಾಖ್ಯಾನ ಗೊಂದಲಗೊಳಿಸುತ್ತದೆ. ಶಾಸ್ತ್ರ ಶಾಸ್ತ್ರ ಪ್ರಮಾಣವನ್ನು ನಿರಾಕರಿಸುವುದಕ್ಕೂ, ಸಾಧನೆಯ ಮಾರ್ಗಶಾಸ್ತ್ರ ಪ್ರಮಾಣವನ್ನು ನಿರಾಕರಿಸುವುದಕ್ಕೂ ಇರುವ ವ್ಯತ್ಯಾಸವನ್ನು ಅರಿಯುವ ಅಗತ್ಯವಿದೆ. ಬೌದ್ಧಿಕ ಕಸರತ್ತು ಬೆಟ್ಟ ಅಗೆದು ಇಲಿ ಹಿಡಿದಂತಾಗುತ್ತದೆ. ಪುರುಷ ಸಂಸ್ಕೃತಿಯ ಲಿಂಗಾಧಾರಿತ ಅಹಂ ಮುರಿದು, ಗಂಡು-ಹೆಣ್ಣಿನ ಸಮಾನತೆಯ ಬದುಕನ್ನು ಕಟ್ಟಿಕೊಳ್ಳುವುದೇ ಸ್ತ್ರೀ ಸಂಸ್ಕೃತಿಯ ಗುರಿ. ದೇವಿ ಭಾಗವತ ಅಥವಾ ದೇವಿ ಪುರಾಣ ಪಿತೃ ಸಂಸ್ಕೃತಿಗೆ ಪರ್ಯಾಯವಾದ ಮಾತೃ ಸಂಸ್ಕೃತಿ ಎಂದರೂ, ಪುರುಷರ ಹಿಂಸೆಗೆ ಸಿಕ್ಕಿರುವ ಪುರುಷ ದೇಹದಲ್ಲಿ ಸ್ತ್ರೀತ್ವವಿರುವ ಮಾತನ್ನು ಮುಂದೊಡ್ಡುವವರು, ಪುರುಷರಿಗೆ ಜನ್ಮಕೊಡುವ ಸ್ತ್ರೀ ದೇಹದ ಮಹತ್ವ ಅರಿಯಬೇಕು. ಸ್ತ್ರೀ ಪ್ರಕೃತಿ, ಪರಿಸರ ಸಂರಕ್ಷಕಳು, ಕಲೆ ಅವಳ ಸಹಜ ಸ್ವತ್ತು.

ಸ್ತ್ರೀವಾದದಲ್ಲಿ ಪಾಶ್ಚಾತ್ಯರು ಅಧ್ಯಾತ್ಮ ಸ್ತ್ರೀ, ತೀವ್ರವಾದಿ ಸ್ತ್ರೀ ಮತ್ತು ಸಂಸ್ಕೃತಿವಾದಿ ಸ್ತ್ರೀ ಕುರಿತು ಚರ್ಚಿಸುತ್ತಾರೆ. ಅಧ್ಯಾತ್ಮಿಕ ಸ್ತ್ರೀವಾದ ಮಾತೃ ಸಂಸ್ಕೃತಿಗೆ ಸಂಬಂಧಿಸಿದುದು. ಅಧ್ಯಾತ್ಮಿಕ ಸ್ತ್ರೀವಾದ ಹೆಂಗಸಿನ ದೇಹದ ಪಾವಿತ್ರ್ಯವನ್ನು ಎತ್ತಿ ಹಿಡಿಯುತ್ತದೆ, ಅದರ ಜೈವಿಕ ಸಂತಾನೋತ್ಪತ್ತಿ ಸಾಮರ್ಥ್ಯವನ್ನು ಕೊಂಡಾಡುತ್ತದೆ. ಅದು ಪುರುಷ ದೇವತೆಗಳ ವಿರುದ್ಧ ಸ್ತ್ರೀ ದೇವತೆಗಳ ಪೂಜೆ ಮಾಡಿ, ಪುರುಷ ಪ್ರಧಾನತೆಯನ್ನು ಅಲ್ಲಗಳೆದು, ಪುರುಷರ ಧಾರ್ಮಿಕ ಯಜಮಾನಿಕೆಯನ್ನು ವಿರೋಧಿಸುತ್ತದೆ. ಅದು ಮಾರ್ಕ್ಸ್‌ವಾದವನ್ನು ಒಪ್ಪುವುದಿಲ್ಲ. ಆದರೂ ಅಧ್ಯಾತ್ಮಿಕ ಸ್ತ್ರೀವಾದ ಅಂತ್ಯದಲ್ಲಿ ಪುರುಷ ಸಂಸ್ಕೃತಿಯನ್ನೇ ಸಮರ್ಥಿಸುತ್ತದೆ. ಸಂಸ್ಕೃತಿವಾದಿ ಸ್ತ್ರೀವಾದ ಪುರುಷ ಸಂಸ್ಕೃತಿಗೆ ಪರ್ಯಾಯವಾಗಿ ಸ್ತ್ರೀ ಸಂಸ್ಕೃತಿಯನ್ನು, ಸ್ತ್ರೀ ಶೋಷಣೆಯ ವಿರುದ್ಧ ರೂಪಿಸುತ್ತದೆ. ಸ್ತ್ರೀ ಸಂಸ್ಕೃತಿಯನ್ನು ಕುರಿತು " An explosion of sensiblity accessiblility, complexity, exploration, philosophy, and arts.....it is unlocking the creative energy of more than half the human species, that part

which has been kept forcibly imprisoned for most of patriachal history.....”- Robin Morgan. ಸ್ತ್ರೀ ಸಂಸ್ಕೃತಿವಾದ ಸ್ತ್ರೀಯರನ್ನು ಪುರುಷರ ಬಂಧನದಿಂದ ಬಿಡುಗಡೆಗೊಳಿಸಲು ಹೋರಾಡುತ್ತದೆ. ಆದರೆ ಈ ಸ್ತ್ರೀ ಸಂಸ್ಕೃತಿ ಏಕಮುಖವಾದುದಲ್ಲ, ಏಕಸ್ವಾಮ್ಯದ್ದಲ್ಲ. ಸ್ತ್ರೀ ಸಂಸ್ಕೃತಿಯಲ್ಲಿ ಬಣ್ಣ, ವರ್ಗ ಮತ್ತು ಜನಾಂಗೀಯ ಸಮಸ್ಯೆಗಳಿವೆ. ಆದರೆ ಸ್ತ್ರೀ ಸಂಸ್ಕೃತಿ ಸ್ತ್ರೀಯರ ಬಹುಮುಖ ಸಂಸ್ಕೃತಿ ಮತ್ತು ಬಹುಮುಖ ಸಮಾಜಗಳನ್ನು ಒಪ್ಪುತ್ತದೆ. ಪರಸ್ಪರ ಸಂವಾದದಿಂದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತದೆ. ತೀವ್ರವಾದಿ ಸ್ತ್ರೀವಾದಗಳು ನವ್ಯ ಮಾರ್ಕ್ಸಿಸ್ಟ್ ತತ್ತ್ವ ಪ್ರೇರಿತ. ಗಂಡು-ಹೆಣ್ಣಿನ ನಡುವಣ ಎಲ್ಲಾ ಅಸಮಾನತೆಯನ್ನು ವಿರೋಧಿಸುತ್ತದೆ. ಅದು ಶೋಷಣೆ ವಿರುದ್ಧ ಮತ್ತು ವರ್ಗರಹಿತ ಸಮಾಜಕ್ಕೆ ಹೋರಾಡುತ್ತದೆ. ಮಾರ್ಕ್ಸ್‌ವಾದ ಬಂಡವಾಳಶಾಹಿ ವಿರುದ್ಧ ಸ್ತ್ರೀಯರನ್ನು ಹೋರಾಟಕ್ಕೆ ಸಿದ್ಧಪಡಿಸುತ್ತದೆಯೇ ಹೊರತು, ಸ್ತ್ರೀ ಸಮಸ್ಯೆಗಳ ಪರಿಹಾರಕ್ಕೆ ಅದು ತಲೆಕೆಡಿಸಿಕೊಳ್ಳುವುದಿಲ್ಲ. ಈಗ ತೀವ್ರವಾದಿ ಸ್ತ್ರೀವಾದ ಸಂಸ್ಕೃತಿ ಸ್ತ್ರೀವಾದವಾಗಿ ಬದಲಾಣೆಯಾಗುತ್ತಿದೆ. ಪಾಶ್ಚಾತ್ಯದ ಸ್ತ್ರೀವಾದದಲ್ಲಿ ಅಮೇರಿಕಾ, ಬ್ರಿಟನ್ ಸ್ತ್ರೀವಾದ ಹೆಚ್ಚು ಪ್ರಭಾವಕಾರಿಯಾದುದು. ಅದರಲ್ಲಿಯೂ ಫ್ರೆಂಚ್ ಸ್ತ್ರೀವಾದ ಹೆಚ್ಚು ಪ್ರಗತಿಶೀಲವಾದುದು. ಪಾಶ್ಚಾತ್ಯರಲ್ಲಿ ‘ಲೆಸ್ಬಿಯನ್’ ಸಂಸ್ಕೃತಿ (ಸಲಿಂಗ ಸಂಸ್ಕೃತಿ) ದಿನೇ ದಿನೇ ವ್ಯಾಪಕವಾಗಿ ಹಬ್ಬುತ್ತಿದೆ. ಇಂಥ ಪುರುಷರಿಂದ ಪ್ರತ್ಯೇಕತೆಯನ್ನು ಸ್ತ್ರೀಯರೇ ತೀವ್ರವಾಗಿ ವಿರೋಧಿಸಿದರೂ, ಪುರುಷ ಶೋಷಣೆಯ ಹಿಂಸೆಯಿಂದ ತಿರುಗಿ ಬಿದ್ದಿರುವ ಸ್ತ್ರೀ ಪ್ರವಾಹ ಶಕ್ತಿಯನ್ನು ತಡೆಯುವುದು ಅಸಾಧ್ಯವಾಗಿದೆ. ಅಲ್ಲದೆ ಸಲಿಂಗ ಸಂಸ್ಕೃತಿಯ ಸಂಘಟನೆ ಗಟ್ಟಿಗೊಳ್ಳುತ್ತಿದೆ, ಪುರುಷ ಸಮಾಜಕ್ಕೆ ಸವಾಲಾಗಿದೆ. ಭಾರತದ ಸ್ತ್ರೀವಾದ ಅಮೇರಿಕಾ ಮತ್ತು ಬ್ರಿಟನ್ನಿನ ಸ್ತ್ರೀವಾದದಿಂದ ಪ್ರೇರಿತವಾಗಿದೆ. ಪಾಶ್ಚಾತ್ಯ ಸ್ತ್ರೀತತ್ತ್ವಗಳು ಭಾರತೀಯ ಸ್ತ್ರೀವಾದಕ್ಕೆ ಸೂಕ್ತವಲ್ಲ. ಸ್ತ್ರೀಯರ ಅತ್ಯಾಚಾರ, ಸಲಿಂಗ ಕಾಮಗಳು ಬಹಿರಂಗವಾಗುವುದಿಲ್ಲ. ಸ್ತ್ರೀ ಭ್ರೂಣ ಹತ್ಯೆ ಸಲಿಂಗ ಸಂಸ್ಕೃತಿಗೆ ಕ್ರಮೇಣ ದಾರಿಯಾಗಬಹುದು. ಭಾರತದಲ್ಲಿ ಸ್ತ್ರೀ ವೇಶ್ಯೆ ಅಥವಾ ಮಾತೃವಾಗಿ ಸಾಹಿತ್ಯದಲ್ಲಿ ವೈಭವೀಕರಿಸಲ್ಪಟ್ಟಿದ್ದಾಳೆ. ಹೆಂಗಸು ಮಾತೃವಾಗಿ ಪೂಜೆಗೊಂಡರೂ ಪುರುಷರ ಕಬ್ಬಿಣದ ಸರಳುಗಳಿಂದ ಬಂಧಿತಳು. ಸ್ತ್ರೀ ಚಿಂತನೆಗಳೆಲ್ಲಾ ಮಧ್ಯಮವರ್ಗ ಮತ್ತು ಶ್ರೀಮಂತ ಮಹಿಳೆಯರ ಚಿಂತನೆಗಳು. ಶ್ರೀ ಸಾಮಾನ್ಯ ಮಹಿಳಾ ಲೋಕವೇ ಭಿನ್ನವಾದುದು. ಸ್ತ್ರೀವಾದ ಆರ್ಥಿಕವಾಗಿ ಗರಿಗಟ್ಟಿಕೊಂಡಿರುವ ಮೇಲ್ವರ್ಗದ ಸ್ತ್ರೀಯರ ಬೌದ್ಧಿಕ ಚಟುವಟಿಕೆಗಳು. ಶ್ರೀಸಾಮಾನ್ಯ ಮಹಿಳೆ ಬಡತನ, ಅಜ್ಞಾನ, ಅನಕ್ಷರತೆಯಿಂದ ಕುಗ್ಗಿ ಹೋಗಿದ್ದಾಳೆ. ಅದರಲ್ಲಿಯೂ ಅವಳ ನೋವು ಸಂಕಟಗಳಿಗೆ ನಾಲಿಗೆ ಇಲ್ಲದವಳು.

ಸ್ತ್ರೀ ಸಂಸ್ಕೃತಿ, ಸ್ತ್ರೀ ಸಾಹಿತ್ಯ ಮತ್ತು ಸ್ತ್ರೀ ವಿಮರ್ಶೆ ವಾಸ್ತವವಾದುದೇ ಹೊರತು, ಅದು ಭ್ರಮೆಯಲ್ಲ. ಕನ್ನಡ ಸಾಹಿತ್ಯದಲ್ಲಿಯೂ ಸಾಕಷ್ಟು ವಿಪುಲವಾಗಿ ಸೃಜನ ಮತ್ತು ಸೃಜನೇತರ ಕೃತಿಗಳು ಸ್ತ್ರೀಯರಿಂದ ರಚಿತವಾಗಿವೆ. ಸ್ತ್ರೀ ಬರಹಗಾರರು ಮತ್ತು ಸ್ತ್ರೀ ಕೃತಿಗಳು ಕಡಿಮೆ ಸಂಖ್ಯೆಯೇ. ಅವರ ಅಲಕ್ಷ್ಯಕ್ಕೂ, ಕೃತಿಗಳ ಅಸಡ್ಡೆಗೂ ಸಾಕ್ಷಿಯಾಗಿದೆ. ಅವಕಾಶ ಕಲ್ಪಿಸದೆ

ಸ್ತ್ರೀಯರು ಅಭಿವ್ಯಕ್ತಿಯ ಸಾಮರ್ಥ್ಯವನ್ನು ಗಳಿಸಲಾರರು. ಪ್ರಜ್ಞಾಪೂರ್ವಕವಾಗಿಯೇ ಸ್ತ್ರೀ ಸಂಸ್ಕೃತಿಯನ್ನು ಪುರುಷ ಸಂಸ್ಕೃತಿ ತುಳಿಯುತ್ತಿದ್ದಾಗ, ಮಹಿಳಾ ಬರಹಗಾರರು ತಲೆ ಎತ್ತುವುದಾದರೂ ಹೇಗೆ? ಅದಕ್ಕಾಗಿಯೇ ಸ್ತ್ರೀವಾದಿ ವಿಮರ್ಶೆ ಪುರುಷ ವಿಮರ್ಶೆಗೆ ಪರ್ಯಾಯವಾಗಿ ಸಂವಾದಿಸ ತೊಡಗಿದೆ. ಸ್ತ್ರೀ ವಿಮರ್ಶೆ ಪ್ರಧಾನವಾಗಿ ಸ್ತ್ರೀ ಸಂಸ್ಕೃತಿಗೆ ಸಂಬಂಧಿಸಿದುದು. ಸ್ತ್ರೀ ವಿಮರ್ಶೆ ಅಸಡ್ಡೆಗೆ ಒಳಗಾಗಿದ್ದ ಪ್ರಾಚೀನಕಾಲದ ಸ್ತ್ರೀ ಬರಹಗಾರ್ತಿಯರು ಮತ್ತು ಅವರ ಕೃತಿಗಳನ್ನು ಬೆಳಕಿಗೆ ತರುತ್ತದೆ. ಮತ್ತು ಕೃತಿಗಳನ್ನು ಮರುಮೌಲ್ಯ ಮಾಡುತ್ತದೆ; ಪುರುಷ ಮಾದರಿಯಲ್ಲಿ ಬರೆದಿದ್ದಾರೆಯೊ ಅಥವಾ ಸ್ತ್ರೀ ಮಾದರಿಯಲ್ಲಿ ಬರೆದಿದ್ದಾರೆಯೋ ಎಂಬುದನ್ನು ಒರೆಹಚ್ಚುತ್ತದೆ. ಪುರಾಣಗಳಲ್ಲಿ ಬಂದಿರುವ ಸ್ತ್ರೀ ಪಾತ್ರಗಳನ್ನು ಸ್ತ್ರೀ ಸಂಸ್ಕೃತಿಯ ಪರವಾಗಿ ಮರುವ್ಯಾಖ್ಯಾನಿಸುತ್ತದೆ. ಸ್ತ್ರೀ ಸಂವೇದನೆಯ ಅಸಲಿ ಅನುಭವ ಅಭಿವ್ಯಕ್ತಿಗೆ ಸೂಕ್ತ ವಾತಾವರಣವನ್ನು ಕಲ್ಪಿಸುತ್ತದೆ. ಸ್ತ್ರೀ ಸಾಹಿತ್ಯ ಪರಂಪರೆಯನ್ನು ಗುರುತಿಸಿಕೊಂಡು, ಸ್ತ್ರೀ ವಿಮರ್ಶೆಯ ಸೂತ್ರಗಳನ್ನು ರೂಪಿಸಿಕೊಳ್ಳುತ್ತದೆ. ಸ್ತ್ರೀ ವಿಮರ್ಶೆ ಪುರುಷ ವಿಮರ್ಶೆಯನ್ನು 'Phallic criticism' ಫ್ಯಾಲಿಕ್ ಕ್ರಿಟಿಸಿಸಂ ಎಂದು ಹೆಸರಿಸಿದೆ. "Phallic criticism or the criticism practiced by male academics and reviwers, extended this mode of thought by sexual analogy to criticism when it was faced with a women writer"- Marry Ellmann- ಫ್ಯಾಲಿಕ್ ಕ್ರಿಟಿಸಿಸಂ ಬಹಳ ಕೆಟ್ಟ ವಿಮರ್ಶೆ-ಸ್ತ್ರೀ ವಿಮರ್ಶೆಯನ್ನು 'ಗೈನೊಕ್ರಿಟಿಸಿಸಂ' (Gyno criticism) "This new criticism deconstructs patriarchal monolithism by introducing multiplicity in thought and expression. Such a theoretical construct excludes the purely "Metalanguage of patriarchal discourse" and opens up an assimilated reading. "A true" inter-textuality"- Jameela Begum and B. Hariharan - ಒಟ್ಟಿನಲ್ಲಿ ಸ್ತ್ರೀವಾದ ವಿಮರ್ಶೆ ಪಿತೃ ಸಂಸ್ಕೃತಿಯ ವಿರುದ್ಧ ಮತ್ತು ಪುರುಷ ವಿಮರ್ಶೆಯ ವಿರುದ್ಧ ತಿರುಗಿ ಬಿದ್ದು, ತಮ್ಮದೇ ಆದ ಸ್ತ್ರೀ ಸಂಸ್ಕೃತಿ ಮತ್ತು ಸ್ತ್ರೀ ವಿಮರ್ಶೆಯನ್ನು ಗಟ್ಟಿಗಳಿಸಿಕೊಳ್ಳುತ್ತಿದ್ದರೆ. ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆ ಸ್ತ್ರೀಯರನ್ನು ಅಸಡ್ಡೆ ಮಾಡಿದುದರ ಪರಿಣಾಮವೇ ಸ್ತ್ರೀ ಪ್ರಜ್ಞಾ ಜಾಗೃತಿಗೆ ಮೂಲ ಕಾರಣ.

ಕನ್ನಡ ಸಾಹಿತ್ಯ ವಿಮರ್ಶೆಯೂ ಸ್ತ್ರೀವಾದಿ ಸಾಹಿತ್ಯ ಮತ್ತು ವಿಮರ್ಶೆಗೆ ಸಾಮಾಜಿಕ ನ್ಯಾಯ ಒದಗಿಸಿಲ್ಲ. ಸ್ತ್ರೀಯರ ಪರವಾದ ಸಾಹಿತ್ಯ ವಿಮರ್ಶೆಯ ಸಿದ್ಧಾಂತಗಳನ್ನು ಸ್ವೀಕರಿಸಿಲ್ಲ. ಮಾರ್ಕ್ಸಿಸ್ಟ್ ವಿಮರ್ಶೆ, ಡೆರಿಡ ಅವರ 'ನಿರಚನ' (Deconstruction) ಪೋಸ್ಟ್ ಮಾಡ್ರನಿಸಂ-ವಿಮರ್ಶೆಯ ತತ್ತ್ವಗಳು ಸ್ತ್ರೀ ಸಾಹಿತ್ಯದ ಪರವಾದವು. ಅದರಲ್ಲಿಯೂ ಡೆರಿಡರ 'ನಿರಚನ' ಸಿದ್ಧಾಂತ ಪಾಶ್ಚಾತ್ಯರ ಅಧ್ಯಾತ್ಮವನ್ನು (Metaphysics)ಅನ್ನು ತಿರಸ್ಕರಿಸಿ ಕ್ರಾಂತಿಯನ್ನೇ ಮಾಡಿತು. ಮತ್ತು ವಿಮರ್ಶೆಯಲ್ಲಿ ಮುಕ್ತ ವಾತಾವರಣ ಸೃಷ್ಟಿಸಿತು. ಇಂಥ ಉದಾರವಾದಿ ವಿಮರ್ಶೆಯ ಸೂತ್ರಗಳನ್ನು ಕನ್ನಡ ವಿಮರ್ಶಕರು ಸರಿಯಾಗಿ ಬಳಸಿಕೊಳ್ಳಲೇ ಇಲ್ಲ. ಜಿ.ಎಸ್. ಆಮೂರರ "ಗುಂಪುಗಾರಿಕೆ, ಹಿತಾಸಕ್ತಿಗಳು, ಜಾತೀಯತೆ ಮೊದಲಾದ ಶಕ್ತಿಗಳು ಸಾಹಿತ್ಯಕ್ಕೆ

ಸವಾಲಾದಂತೆ, ವಿಮರ್ಶೆಗೂ ಸವಾಲಾಗಿವೆ" ಎಂಬ ಮಾತು ಸತ್ಯವಾದುದು. ಆಧುನಿಕ ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಯನ್ನು ಪ್ರತಿನಿಧಿಸುವ ಕುರ್ತುಕೋಟಿ ಅವರ ಯುಗಧರ್ಮ ಮತ್ತು ಸಾಹಿತ್ಯ ಕೃತಿಯೇ ಇದಕ್ಕೆ ಸಾಕ್ಷಿ.

ನವ್ಯರ ಅವಧಿಯಲ್ಲಿ ಕನ್ನಡ ವಿಮರ್ಶೆ ಗಟ್ಟಿ ನಿಲುವು ತಾಳಿತು ಎಂಬ ಅಭಿಪ್ರಾಯವಿದೆ. "ನವ್ಯ ಮುಖ್ಯವಾಗಿ ಗಂಡುಗಳ ಲೋಕ....ಅವರ ದೌರ್ಬಲ್ಯ ಮುಚ್ಚಿಕೊಳ್ಳುವುದಕ್ಕಾಗಿ ಹೆಣ್ಣು ಅವರ ಲೈಂಗಿಕ ಉಪಭೋಗದ ವಸ್ತುವಾದಳು. ಇಲ್ಲಿ ಅವರ ದುರ್ಬಲ ಗಳಿಗೆಯಲ್ಲಿ ಅವರಿಗೆ ಆಸರೆ ನೀಡುವ ಮಾತೆಯಾಗುತ್ತಾಳೆ" ಎಂಬ ಚಂದ್ರಶೇಖರ ಆಲೂರರ ಮಾತು ನವ್ಯ ಸಾಹಿತಿಗಳ ಬಗೆಗೆ ನುಡಿದಿರುವ ವ್ಯಂಗ್ಯವೇ ಸರಿ. ಮತ್ತೆ ಅವರು "ನವ್ಯ ಸಾಹಿತ್ಯದಲ್ಲಿ ನವ್ಯವನ್ನು ಕಳೆದ ಮೇಲೆಯೇ ಆಧುನಿಕತೆ ಮತ್ತು ಸ್ತ್ರೀ ಸ್ವಾತಂತ್ರ ತಮ್ಮ ನಿಜವಾದ ಅರ್ಥವನ್ನು ಕಂಡುಕೊಳ್ಳುವುದು ಎಂಬುದು ಕೇವಲ ಕುತೂಹಲದ ಸಂಗತಿಯಲ್ಲ, ಒಂದು ಸಾಹಿತ್ಯ ಚಳುವಳಿಯ ಮನೋ ಧರ್ಮಕ್ಕೆ ಸಂಬಂಧ ಪಟ್ಟ ಸಂಗತಿ" ಎನ್ನುತ್ತಾರೆ. ನವ್ಯ ಪರಂಪರೆಯನ್ನು ವಿರೋಧಿಸುತ್ತಲೇ ವೈದಿಕ ಪರಂಪರೆಯ ಮರುಹುಟ್ಟಿಗೆ ಪ್ರಯತ್ನಿಸಿದ್ದು ಗುಟ್ಟಿನ ವಿಷಯವಾಗಿ ಉಳಿಯಲಿಲ್ಲ.

ಅತ್ಯಾಧುನಿಕ ಚಿಂತನೆಗಳು, ಸಾಹಿತ್ಯ ಸಿದ್ಧಾಂತಗಳ ಬೆಳಕಿನಲ್ಲಿ ನಮ್ಮ ಸಾಹಿತ್ಯ ಚರಿತ್ರೆಗಳು ಮತ್ತು ವಿಮರ್ಶೆ ಪುನರ್ ರಚಿತವಾಗುವ ಅಗತ್ಯ ಅನಿರ್ವಾಯವಾಗಿದೆ ಮತ್ತು ತುರ್ತಾಗಿ ನಡೆಯ ಬೇಕಿದೆ. ಆಂಥ್ರಪಾಲಜಿಯ ಶಿಸ್ತು ಕನ್ನಡ ಸಾಹಿತ್ಯದಲ್ಲಿ ಇಂದಿಗೂ ಮೈಗೂಡಲು ಸಾಧ್ಯವಾಗಲೇ ಇಲ್ಲ ಸಾಹಿತ್ಯದಲ್ಲಿ. ವೇದ ಪೂರ್ವದ ಮುಕ್ತ ಲೈಂಗಿಕತೆ, ಪುರಾಣ ಕಾಲಕ್ಕೆ ಸಂಕೀರ್ಣಗೊಳ್ಳಲು ಕಾರಣವೇನು? ಎಲ್ಲಮ್ಮ, ಗ್ರಾಮದೇವತೆಗಳ ವಿವಾಹ, ಹರಿಹರರ ಲೈಂಗಿಕತೆಗಳು ಮತ್ತು ಮಹಿಷಾಸುರ ಮರ್ಧನದ ಪ್ರಂಸಗಗಳು ಮರು ಪರೀಶಿಲನೆಗೆ ಒಳಗಾಗುವ ಅಗತ್ಯವಿದೆ. ಜೊತೆಗೆ ಶಿಶ್ನ ಮತ್ತು ಯೋನಿ ಪೂಜೆಗಳ ಅಧ್ಯಯನ ಮತ್ತು ವಿಶ್ಲೇಷಣೆಯಾಗಬೇಕಿದೆ. ವೈದಿಕ ಸಂಪ್ರದಾಯದಲ್ಲಿ ಕ್ಷೇತ್ರ ಮುಖ್ಯವಾಗಲಿಲ್ಲ, ಬೀಜ ಮುಖ್ಯವಾಯಿತು. ಬೀಜ - ಕ್ಷೇತ್ರಗಳ ಸಿದ್ಧಾಂತವೇ ಮುಂದೆ ಬಂದ ಆಸ್ತಿಕ ಮತ್ತು ನಾಸ್ತಿಕ ಮತಗಳು ಸ್ವೀಕರಿಸಿದ ಮೂಲ ತತ್ತ್ವವಾಯಿತು. ಆದ್ದರಿಂದಲೇ ಸುಧಾರಿತ ತತ್ತ್ವಗಳು ವಿಫಲವಾದವು. ಪಾಶ್ಚಾತ್ಯರಲ್ಲಿ ಈವ್ ಮತ್ತು ಆಡಂ-ಪಾಪ-ಪುಣ್ಯಗಳ ಸಂಕೇತವಾಗಿ ಎಲ್ಲ ಚಿಂತನೆಗಳ ಮೂಲ ಸಿದ್ಧಾಂತವಾಯಿತು-ಬೀಜ ಮತ್ತು ಕ್ಷೇತ್ರ ಸಿದ್ಧಾಂತ, ಈವ್ ಮತ್ತು ಆಡಂ ಸಿದ್ಧಾಂತ-ಮನುಷ್ಯ ಚರಿತ್ರೆಯಾಗಲಿ ಅಥವಾ ಮಾನವೀಯತೆಯ ಚರಿತ್ರೆಯಾಗಲಿ, ಪಾಶ್ಚಾತ್ಯ ಮತ್ತು ಪೌರ್ವಾತ್ಯ, ಬಲ - ಎಡಪಂಥಗಳು, ನಾಸ್ತಿಕ - ಆಸ್ತಿಕ ಮತಗಳು, ವೈದಿಕ-ಅವೈದಿಕ ಮತಗಳು. ವೇದಾಂತ - ವಿಜ್ಞಾನ-ಯಾವುದೇ ಕ್ರಿಯೆ - ಪ್ರತಿಕ್ರಿಯೆಯ ಸಂಘರ್ಷಿಕ ಚಿಂತನೆಗಳು ಹೆಣ್ಣನ್ನು ನಂಬಿಸಿ ಮೋಸಗೊಳಿಸಿರುವ ಇತಿಹಾಸವೇ ಆಗಿದೆ. ಇಂಥ ಪ್ರಯತ್ನದಲ್ಲಿ ಹೆಣ್ಣು ಗಂಡಿನೊಂದಿಗೆ ಭಾಗಿಯಾಗಿರುವುದು ಒಂದು ದುರಂತ! ಸಾಹಿತಿಗಳು ಮತ್ತು ಸಾಹಿತ್ಯ ಕೃತಿಗಳು ಇಂಥ ಪುರುಷ ಪ್ರಧಾನ ಚಿಂತನೆಯಿಂದ ಬಿಡಿಸಿಕೊಳ್ಳುವುದು ಇಂದಿಗೂ ಸಾಧ್ಯವಾ ಗಲಿಲ್ಲ. ಎಡಪಂಥೀಯ ಬರಹಗಾರ್ತಿಯಾಗಲಿ ಅಥವಾ ಬಲಪಂಥೀಯ ಬರಹಗಾರ್ತಿ

ಯರಾಗಲಿ ಪರೋಕ್ಷವಾಗಿ ಪಿತೃ ಸಂಸ್ಕೃತಿಗೆ ತಮ್ಮ ಕೃತಿಗಳಿಗೆ ಪಟ್ಟ ಕಟ್ಟಿದ್ದಾರೆ. ಅವುಗಳಲ್ಲಿ ಕೆಲವು 'ರಿವರ್ಸಲ್' ಮಿಥ್‌ಗಳು ಬಂದಿರಬಹುದು ಅಷ್ಟೆ. ಸ್ತ್ರೀಯರು ಮುಖ್ಯವಾಹಿನಿ ಸಂಸ್ಕೃತಿಯನ್ನು ವಿರೋಧಿಸಿದರೂ ತಾವು ಬಯಸುತ್ತಿರುವುದು ಸ್ತ್ರೀ ಸಂಸ್ಕೃತಿಗೆ ಉಪ ಸಂಸ್ಕೃತಿಯ ಸ್ಥಾನ ಮಾನವನ್ನು ಮಾತ್ರ. ಮುಖವಾಹಿನಿ ಸಂಸ್ಕೃತಿ ಭಾರತದ್ದಾಗಲಿ ಅಥವಾ ಪಾಶ್ಚಾತ್ಯದ್ದಾಗಲಿ ಪುರುಷ ಪ್ರಧಾನ ಪಿತೃ ಸಂಸ್ಕೃತಿ ಎಂಬುದು ಸ್ಪಷ್ಟ. ಸ್ತ್ರೀಯರು ಗುರಿ ಸಾಧಿಸಲು ಹೋರಾಡುತ್ತಿರುವ ಉಪ ಸಂಸ್ಕತಿ, ಮಾತೃ ಸಂಸ್ಕೃತಿಗಳು ಸ್ತ್ರೀ ಕೇಂದ್ರಿತವಾದರೂ, ಪುರುಷ ಪ್ರಧಾನ ಸಂಸ್ಕೃತಿಗೆ ಅಧೀನವಾಗುವ ತತ್ತ್ವ ಅದರಲ್ಲಿ ಅಡಕವಾಗಿದೆ. ಸ್ತ್ರೀವಾದಿ ಚಿಂತನೆಗಳಲ್ಲಿಯೂ ಪ್ರಗತಿ ಮತ್ತು ಪ್ರತಿಗಾಮಿ ಚಿಂತನೆಗಳಿವೆ. ಪುರುಷ ಸಂಸ್ಕೃತಿಯಲ್ಲಿಯೂ ತೀವ್ರ ಉದಾರವಾದಿಗಳಿದ್ದಾರೆ. ಇಂಥ ವೈರುಧ್ಯ ಮತ್ತು ಸಂಘರ್ಷದ ಬದುಕಿನಲ್ಲಿಯೇ ಹೆಣ್ಣು-ಗಂಡು ಸಂವಾದದಿಂದ ಸಮಾನವಾಗಿ ನೆಮ್ಮದಿಯಿಂದ ಬಾಳುವ ಸೂತ್ರಗಳನ್ನು ಕಂಡುಕೊಳ್ಳಬೇಕಿದೆ.

ಆತ್ಮದ ಹಂತದಲ್ಲಿ ಹೆಣ್ಣು-ಗಂಡಿನ ಸಮಾನತೆ, ಲೌಕಿಕದಲ್ಲಿ ಅಸಮಾನತೆಯ ಧಾರ್ಮಿಕ ಸೂತ್ರ, ಆರ್ಥಿಕ ಕೇಂದ್ರಿತ ಯುಗದಲ್ಲಿ ಅಧಿಕೃತವಾಗುವುದಿಲ್ಲ. ಹೆಣ್ಣು ಪುರುಷನಿಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಸಮ ಸ್ಪರ್ಧಿಯಾಗಿದ್ದಾಳೆ ಮತ್ತು ಪುರುಷನಲ್ಲಿನ ಶಕ್ತಿಯೂ ಆಗಿದ್ದಾಳೆ. ಆಧ್ಯಾತ್ಮಿಕ ಮತ್ತು ಲೌಕಿಕದಲ್ಲಿ ಸರಿ ಸಮಾನತೆಯಿಂದ ಶಾಂತಿ ಮತ್ತು ಸಾಮರಸ್ಯದಿಂದ ಬದುಕುವ ದಾರಿಯನ್ನು ಕಂಡುಕೊಳ್ಳಬೇಕಿದೆ. ಸಿದ್ಧಾಂತಿಕ ಬೌದ್ಧಿಕ ಕಸರತ್ತು ಸಮಸ್ಯೆಗಳ ಪರಿಹಾರಕ್ಕೆ ಸೂತ್ರವಾಗಲಾರವು. ಹೆಣ್ಣು-ಗಂಡಿನ ಮೇಲುಕೀಳು ಎಂಬ ಭೇದದ ತೆರೆ ಸರಿದು, ಬದುಕು ಪಾರದರ್ಶಕವಾದಾಗ ಬೀಜ-ಕ್ಷೇತ್ರ ಮತ್ತು ಈವ್-ಆಡಂ ಭಿನ್ನವಾದ ಮಾನವನ ಮೂಲ ಚಿಂತನೆಗಳು ಕೊನೆಯಾಗುತ್ತವೆ. ಆಗ ಇಂಥ ಬೇದದ ಮೂಲ ಸೂತ್ರಕ್ಕೆ ಮುಖವಾಣಿಯಂತೆ ಸೃಷ್ಟಿಯಾದ ಫ್ಯಾಲಿಕ್ ಸಾಹಿತ್ಯ, ಫ್ಯಾಲಿಕ್ ಸಂಸ್ಕೃತಿ, ಫ್ಯಾಲಿಕ್ ವಿಮರ್ಶೆಯೂ ಕೊನೆಗೊಂಡು, ಸಮಗ್ರ ಬದುಕಿನ ನಿಜವಾದ ಮಾನವೀಯತೆಯ ಅಸಲಿ ಸಾಹಿತ್ಯ ಸೃಷ್ಟಿಯಾಗುತ್ತದೆ, ಆಗ ಪುರುಷ ಪ್ರಧಾನ ಮತ್ತು ಸ್ತ್ರೀ ಪ್ರಧಾನ ಹುಸಿ ಸೃಜನ ಮತ್ತು ಹುಸಿ ಸೃಜನೇತರ ಸಾಹಿತ್ಯ ಮುಂದುವರಿಯುವುದು ತಾನಾಗಿಯೇ ಮೂಲೆಗುಂಪಾಗುತ್ತದೆ. ಅಲ್ಲಿಯವರೆವಿಗೂ ಸ್ತ್ರೀವಾದ ಸಾಹಿತ್ಯದಲ್ಲಿ ಮುಂದುವರಿಯುತ್ತದೆ.

●

# ಸಾಹಿತ್ಯ ಚರಿತ್ರೆಯ ಪುನಾರಚನೆ - ಒಂದು ಟಿಪ್ಪಣಿ

ಎಚ್.ಎಸ್. ರಾಘವೇಂದ್ರರಾವ್

ಸಾಹಿತ್ಯ ಚರಿತ್ರೆಯ ಪುನಾರಚನೆಯು, ಮಾಡಬೇಕೋ ಬೇಡವೋ ಎಂದು ತೀರ್ಮಾನಿಸುವ ಸಂಗತಿಯೇ ಅಲ್ಲ. ಅದು ಶತಮಾನಗಳಿಂದ ನಡೆದುಬಂದಿರುವ ಪ್ರಕ್ರಿಯೆ. ಸಾಹಿತ್ಯದ ಅಧ್ಯಯನ ಮಾಡುವವರು, ಅಂತೆಯೇ ''ಸೃಜನಶೀಲ''ವೆಂದು ಕರೆಯಲಾಗುವ ಬರವಣಿಗೆಯನ್ನು ರಚಿಸುವವರು ಇಬ್ಬರೂ ಇಂಥ ಕೆಲಸದಲ್ಲಿ ತೊಡಗಿಯೇ ಇರುತ್ತಾರೆ. ಏಕಕಾಲದಲ್ಲಿ ಅನೇಕ ಬಗೆಯ ಪುನಾರಾಚನೆಗಳು ನಡೆದಿರುತ್ತವೆ. ಸದಾ ಸರ್ವದಾ, ಅಂಥ ಪುನರಾಚನೆಗಳು ಸಮಕಾಲೀನ ಅಗತ್ಯಗಳಿಂದಲೇ ಪ್ರೇರಿತವಾಗಿರುತ್ತವೆ; ಖಚಿತವಾದ ಹಿತಾಸಕ್ತಿಗಳಿಂದ ರೂಪಿತವಾಗಿರುತ್ತವೆ. ಇಂಥ ಪುನಾರಚನೆಗಳಲ್ಲಿ ಯಾವುದೋ ಒಂದು ''ಅಧಿಕೃತ''ವೆಂದು ಪರಿಗಣಿತವಾಗುವುದು ಸಾಂಸ್ಕೃತಿಕ ರಾಜಕಾರಣದ ಫಲಿತವೇ ವಿನಾ ಕಾಲ ದೇಶಗಳಿಂದ ಅಬಾಧಿತವಾದ ಸತ್ಯವೇನೂ ಅಲ್ಲ. ಸಮುದಾಯಗಳಲ್ಲಿ ರೂಪಿತವಾಗಿರುವ ಅಭಿರುಚಿ ವಲಯಗಳ ಆಯ್ಕೆಗೂ, ''ಅಧಿಕೃತ ಮಾಧ್ಯಮ''ಗಳ ಆಯ್ಕೆಗೂ ಅವಿನಾಸಂಬಂಧವು ಇರುವುದಿಲ್ಲ. ಇರಬೇಕಾಗಿಯೂ ಇಲ್ಲ. ಅದೂ ಅಲ್ಲದೆ ಹೀಗೆ ''ಗುರುತಿಸಿಕೊಳ್ಳುವ'' ಮತ್ತು ''ಗುರುತುಗಳನ್ನು ಕಳೆದುಕೊಂಡು ಅನಾಮಿಕವಾಗುವ ಕ್ರಿಯೆಯ ಕಾರಣಗಳು ಸಾಹಿತ್ಯ ರಚನೆಯಾಚೆಗಿನ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಅಡಗಿರುತ್ತವೆ. ಯಾವುದೇ ಪುನಾರಚನೆಯನ್ನು ಪ್ರೇರಿಸುವ ''ಶ್ರೇಷ್ಠ'' - ''ಕನಿಷ್ಠ''- ''ಪ್ರಸ್ತುತ'' -''ಅಪ್ರಸುತ್ತ'' ಮುಂತಾದ ಮಾನದಂಡಗಳೂ ಅಲ್ಪಾಯಷಿಗಳೇ.

ಇದುವರೆಗೆ ಹೇಳಿದ ಸಂಗತಿಗಳು ಸಾಹಿತ್ಯದ ಗಂಭೀರ ವಿದ್ಯಾರ್ಥಿಗಳಿಗೆ ಅಪರಿಚಿತವಲ್ಲ. ಆದರೆ ಸಾಹಿತ್ಯ ಜಗತ್ತಿನ ಅಂಚಿನಲ್ಲಿ ಉಳಿದುಕೊಂಡು ತಮ್ಮನ್ನು ತಾವು ಅಸರ್ಟ್ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಅಭಿವ್ಯಕ್ತಿ ಯುಗಗಳಿಗೆ ಇಂಥ ಪುನಾರಾಚನೆಯ ಹಾದಿಯು ಆತಂಕ, ಹಿಂಜರಿಕೆಗಳಿಂದ ತುಂಬಿರುತ್ತದೆ ಅಥವಾ ಆ ವಲಯಗಳ ಮೇಲೆ ಅಂತಹ ಒತ್ತಾಯಗಳಿರುತ್ತವೆ. ಆ ವಲಯಗಳಿಂದ ಮೂಡಿಬರುವ ಪುನರಾಚನೆಗಳನ್ನು ಅಲ್ಲಗಳೆಯುವ ಹುನ್ನಾರಗಳೂ ಸದಾ ನಡೆಯುತ್ತಿರುತ್ತವೆ. ಅಂಥ ಅಭಿವ್ಯಕ್ತಿ ವಲಯಗಳಲ್ಲಿ ಇರಬಹುದಾದ ವಿಭಿನ್ನ ವಿನ್ಯಾಸಗಳನ್ನು, ದೌರ್ಬಲ್ಯವೆಂದೋ ಪರಸ್ಪರ ವಿರೋಧವೆಂದೋ ಕಡೆಗಣಿಸುವ ಪ್ರಯತ್ನಗಳೂ

ಕಾಣಿಸಿಕೊಳ್ಳುತ್ತವೆ. ಮಹಿಳಾ ಸಾಹಿತ್ಯದ ನೆಲೆಯಿಂದ ಸಾಹಿತ್ಯ ಚರಿತ್ರೆಯ ಮರುರಚನೆ ಮಾಡ ಹೊರಟಾಗ ಎದುರಾಗುವ ಅಡಚಣೆಗಳೂ ಈ ಬಗೆಯವೇ.

ಕಳೆದ ಮೂವತ್ತು ವರ್ಷಗಳ ಸಾಂಸ್ಕೃತಿಕ ಆಗುಹೋಗುಗಳನ್ನು ಗಮನಿಸಿದಾಗ, ದಲಿತ-ಬಂಡಾಯ ಸಾಹಿತ್ಯಗಳು ಪಡೆದುಕೊಂಡ ಪ್ರತಿಸ್ಪಂದನಗಳಿಗೂ ಅವಕ್ಕೆ ಸಮಕಾಲೀನವಾದ ಮಹಿಳೆಯರ ಬರವಣಿಗೆಗೆ ಸಿಕ್ಕ ಸ್ವಾಗತಕ್ಕೂ ಇರುವ ಅಂತರವು ಕಣ್ಣಿಗೆ ಕಟ್ಟುತ್ತದೆ. ಇದು "ನವ್ಯ" ಅಥವಾ "ದಲಿತ-ಬಂಡಾಯ" ಸಾಹಿತ್ಯಗಳ ಬ್ಯಾಂಡ್ ವ್ಯಾಗನ್‌ಗಳಲ್ಲಿ ಕುಳಿತುಕೊಂಡು ಮನ್ನಣೆ ಪಡೆದ ಲೇಖಕಿಯರ ಮಾತಲ್ಲ. ಬದಲಾಗಿ, ಹಾಗೆ ಮಾಡದೆ ತಮ್ಮ ಪ್ರತ್ಯೇಕ ಸಮಸ್ಯೆಗಳನ್ನು ಮುನ್ನೆಲೆಗೆ ತರಬಯಸಿದ ಲೇಖಕಿಯರ ಮಾತು. ಹಾಗೆಂದು, ಮಹಿಳೆಯರ ಮೀಸಲಾತಿಯಂತೆ ಸ್ಥಾನಮಾನಗಳನ್ನು ದೊರಕಿಸಿಕೊಳ್ಳುವುದಕ್ಕೂ ಸಾಹಿತ್ಯಕವಾದ ಅಧಿಕೃತತೆಯನ್ನು ಪಡೆಯುವುದಕ್ಕೂ ಅಂತರವಿದೆ. ಹೊಸಗನ್ನಡ ಸಾಹಿತ್ಯಕ ಚಳುವಳಿಗಳ ಮುಂದಿನ ಹಂತವೆಂದು ದಲಿತ-ಬಂಡಾಯ ಸಾಹಿತ್ಯಗಳು ಪಡೆದುಕೊಂಡ ಮನ್ನಣೆಯು ಮಹಿಳೆಯರ ಬರವಣಿಗೆಗೆ ಕಟ್ಟಿದಷ್ಟು ಸುಲಭವಾಗಿ ದಲಿತರ ಅಥವಾ ಬಂಡಾಯದವರ ಬರವಣಿಗೆಗೆ ಕಟ್ಟಲಾಗಲಿಲ್ಲ. "ಮಹಿಳಾ ಸಾಹಿತ್ಯ"ವು ದ್ವೀಪಸಮವೆಂದು ಪರಿಗಣಿತವಾಗಲು ಕಾರಣಗಳನ್ನು ಹುಡುಕಲು ಬಹಳ ಕಷ್ಟಪಡಬೇಕಾಗಿಲ್ಲ.

ಇದೆಲ್ಲ ನಿಜವಾದರೂ, "ಸಾಹಿತ್ಯ ಚರಿತ್ರೆಯ ಪುನಾರಚನೆ"ಯನ್ನು ಯಾರು ಹೇಗೆ ಮಾಡಬೇಕು ಎನ್ನುವುದು ಸಂಕೀರ್ಣವಾದ ಸಂಗತಿ. ನಿಜವಾಗಿಯೂ ನಡೆಯಬೇಕಾದ್ದು ಮಹಿಳೆಯರು ರಚಿಸಿರುವ ಸಾಹಿತ್ಯದ ಚರಿತ್ರೆಯ ಪುನಾರಚನೆ ಮಾತ್ರವಲ್ಲ. ಲಿಂಗಾಧಾರಿತವೂ ಆದ ದೃಷ್ಟಿಕೋನದಿಂದ, ಒಟ್ಟು ಕನ್ನಡ ಸಾಹಿತ್ಯದ ಇತಿಹಾಸವನ್ನು ಪುನಾರಚಿಸಬೇಕಾದ ಅಗತ್ಯವಿದೆ. ಇಂಥ ಪುನಾರಚನೆಯಲ್ಲಿ ಮಹಿಳೆಯರು ಮಾತ್ರ ತೊಡಗಿಕೊಳ್ಳುವುದು ಅಗತ್ಯವೇ, ಅನಿವಾರ್ಯವೇ ಎನ್ನುವುದೂ ಕೇಳಿಕೊಳ್ಳಬೇಕಾದ ಪ್ರಶ್ನೆಯೇ. ಏಕೆಂದರೆ ಸ್ತ್ರೀವಾದವು ಕೇವಲ ಲಿಂಗಕೇಂದ್ರಿತ ಅಜೆಂಡಾ ಆಗಿ ಉಳಿಯದೆ, ಹತ್ತು ಹಲವು ಅನ್ಯ ಆಯಾಮಗಳನ್ನು ಜೋಡಿಸಿಕೊಂಡಿರುವುದರಿಂದ ವಿಭಿನ್ನವಾದ ಸಾಮಾಜಿಕ, ರಾಜಕೀಯ ಸಿದ್ಧಾಂತಗಳೊಂದಿಗೆ ಅನುಸಂಧಾನ ಮತ್ತು ಆಯ್ಕೆಗಳನ್ನು ಮಾಡುವುದು ಅನಿವಾರ್ಯವಾಗುತ್ತದೆ. ಕೊನೆಗೂ ಶುದ್ಧ ಸಾಹಿತ್ಯವೆನ್ನುವುದು ಹೇಗೆ ಒಂದು ಅವಾಸ್ತವ ರಚನೆಯೋ, ಅಂತೆಯೇ ಶುದ್ಧ ಸಾಹಿತ್ಯ ಚರಿತ್ರೆಯೂ ಒಂದು "ಕನ್‌ಸ್ಟ್ರಕ್ಟ್" ಮಾತ್ರ. ಅಂಥದೊಂದು ಪದಾರ್ಥವು ಜಗತ್ತಿನಲ್ಲಿ ಇಲ್ಲ. ತಾನು ಸ್ವಯಂಭೂ ಆಗಿ ಉಳಿಯಬೇಕು ಎನ್ನುವ ಈ ರೀತಿಯ ಅಪೇಕ್ಷೆಯೇ ದ್ವೀಪ ನಿರ್ಮಾಣಕ್ಕೆ ಕಾರಣವಾಗಬಹುದು.

ಪುನಾರಚಿತವಾಗಬಹುದಾದ ಸಾಹಿತ್ಯ ಚರಿತ್ರೆಗೆ ಎರಡು ನೆಲೆಗಳಿವೆ. ಮಹಿಳೆಯರಿಂದಲೇ ರಚಿತವಾಗಿ, ಸೂರ್ಯ ಸ್ಪಷ್ಟವಾದ ಕಾರಣಗಳಿಂದ ಅಂಚಿನಲ್ಲಿಯೇ ಉಳಿದಿರುವ ಸಾಹಿತ್ಯದ ಮರುಶೋಧನೆ ಹಾಗೂ ಅವುಗಳ ಪರಂಪರೆಯ ನಿರ್ಮಾಣಗಳು ಮೊದಲನೆಯ ಸಾಧ್ಯತೆ. ಅಕ್ಕಮಹಾದೇವಿ, ಕಂತಿ ಮತ್ತು ಮುಕ್ತಾಯಕ್ಕಂದಿರನ್ನು ಹೊರತುಪಡಿಸಿದರೆ ಬೇರೆ ಯಾವ

ಹೆಣ್ಣುಮಕ್ಕಳು ಯಾವುದೇ ಬಗೆಯ ಸ್ವಾಭಿವ್ಯಕ್ತಿಯಲ್ಲಿ ತೊಡಗಿಕೊಂಡರಲಿಲ್ಲವೇ ಎಂಬ ಪ್ರಶ್ನೆಯ ಫಲಿತವಾದ ಹುಡುಕಾಟವು ಈ ದಿಕ್ಕಿನಲ್ಲಿ ಸಾಗುತ್ತದೆ. ಎಲೈನ್ ಶೊವಾಲ್ಟರ್ ಅವರ "ಅ ಲಿಟ್ರೇಚರ್ ಆಫ್ ದೇರ್ ಓನ್" ಎನ್ನುವುದು ಇಂಥ ಪ್ರಯತ್ನ. ಹಾಗೆಯೇ ಪುರುಷ ನಿರ್ಮಿತವಾದ ಸಾಹಿತ್ಯವನ್ನು, ಅದರಲ್ಲಿಯೂ ಮಹಾಕೃತಿಗಳೆಂದು ಪರಿಗಣಿತವಾಗಿರುವ ಬರವಣಿಗೆಯನ್ನು ಪರಿಶೀಲನೆ ಮಾಡಿ ಒಟ್ಟು ಸಾಹಿತ್ಯದ ಚರಿತ್ರೆಯನ್ನು ಮತ್ತೆ ಕಟ್ಟುವುದು ಇನ್ನೊಂದು ವಿಧಾನ. ಇಲ್ಲಿ, ಚರಿತ್ರೆಯ ಮರುನಿರ್ಮಾಣವೆನ್ನುವುದು ಸಾಹಿತ್ಯ ಕೃತಿಗಳ ಮರು ವ್ಯಾಖ್ಯಾನವೇ ಆಗಿರುತ್ತದೆ. ಇಂಥ ಕಡೆ ಸಾಹಿತ್ಯ ವಿಮರ್ಶೆ ಹಾಗೂ ಚರಿತ್ರೆಯ ರಚನೆಗಳ ನಡುವಿನ ಗಡಿಗೆರೆಗಳು ಅಳಿಸಿಹೋಗುತ್ತವೆ. ಸಹಜವಾಗಿಯೇ "ವಸ್ತುನಿಷ್ಠ", "ನಿಷ್ಪಕ್ಷಪಾತ", "ಸಾಹಿತ್ಯಕ" ಮುಂತಾದ ಪರಿಕಲ್ಪನೆಗಳಿಗೆ ವಿದಾಯ ಹೇಳುವುದರ ಮೂಲಕವೇ ಸಂಸ್ಕೃತಿ ರಾಜಕಾರಣದ ನಿಜನೆಲೆಗಳನ್ನು ತೋರಿಸಿಕೊಡುವುದು ಅನಿವಾರ್ಯವಾಗುತ್ತದೆ.

ಹೆಣ್ಣುಮಕ್ಕಳ ಅಭಿವ್ಯಕ್ತಿ ಸಾಧ್ಯತೆಗಳ ಹುಡುಕಾಟವು ಅಕ್ಷರಲೋಕದ ಪರಿಧಿಯಾಚೆಗೆ ಚಲಿಸುವುದು ಅನಿವಾರ್ಯ. ಏಕೆಂದರೆ ಅವರಿಗೆ ಮೌಖಿಕ ಹಾಗೂ ಗಾಯನಮೂಲವಾದ ಅಭಿವ್ಯಕ್ತಿಯ ಅವಕಾಶಗಳು ಹೆಚ್ಚು ಮುಕ್ತವಾಗಿದ್ದವು. ಅಲ್ಲಿಯೂ ವಸ್ತು, ಧೋರಣೆ ಹಾಗೂ ನಿರೂಪಣೆಗಳ ಮೇಲೆ ಪುರುಷದಿಂದ ರೂಪಿತವೋ ನಿರ್ದೇಶಿತವೋ ಆದ ಸೆನ್ಸಾರ್‌ಗಳು ಅಗೋಚರವಾಗಿ ಅಡಗಿರುತ್ತವೆ. ಪರಿಣಾಮವಾಗಿ, ಹುಡುಕುವಿಕೆಯು ಹೆಚ್ಚು ಸೂಕ್ಷ್ಮವಾಗ ಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಹೆಂಗಸರಿಂದ ರಚಿತವಾದ "ಜಾನಪದ ಸಾಹಿತ್ಯ"ದ ಮರುಓದು ಹಾಗೂ ಪರಂಪರೆಗಳ ಪರಿಶೀಲನೆಯು ಮೌಲಿಕವಾಗಬಹುದು. ಅದರಲ್ಲಿಯೂ ಸ್ತ್ರೀಯರು ಮಾತ್ರವೇ ಇರುವ ಸನ್ನಿವೇಶಗಳಲ್ಲಿ ಬಳಕೆಯಾಗುವ, ರೂಪಿತ ವಾಗುವ ಅಲಿಖಿತ ದಾಖಲೆಗಳನ್ನು ಮರಳಿ ಪಡೆಯುವ ಪ್ರಯತ್ನಗಳು ಉಪಯುಕ್ತವಾಗುತ್ತವೆ. "ಹಾಡು-ಹಸೆ", "ಅಡುಗೂಲಜ್ಜಿ ಕತೆ" ಮುಂತಾದ ತಿರಸ್ಕಾರ ಸೂಚಕ ನಾಮಕರಣ ಗಳನ್ನು ಪಡೆದು, ಅಂಚಿನಲ್ಲಿಯೇ ಉಳಿದಿರುವ ಇಂಥ ದಾಖಲೆಗಳು ಸ್ಪಷ್ಟವಾಗಿ ಮತ್ತು ಪ್ರಚ್ಛನ್ನವಾಗಿ ಸ್ತ್ರೀಪರವಾದ ಸಂಗತಿಗಳನ್ನು ಹುದುಗಿಸಿಕೊಂಡಿರುತ್ತವೆ. ಉದಾಹರಣೆಗೆ ತುಳುನಾಡಿನ "ಸಿರಿ ಪಾಡ್ದನ"ವನ್ನು ಹೆಸರಿಸಬಹುದು. ಜೋಗತಿಯರ ಸಮುದಾಯವೂ ಇಂಥ ದಾಖಲೆಗಳನ್ನು ಹೊಂದಿರಲು ಸಾಧ್ಯ. ಇಪ್ಪತ್ತನೆಯ ಶತಮಾನಕ್ಕಿಂತ ಹಿಂದಿನ ಮಹಿಳಾ ಸಾಹಿತ್ಯದ ಪುನರಾಚನೆಯ ಸಹಜವಾಗಿಯೇ ಅಲಿಖಿತ-ಗಾಯನ ಸೀಮಿತ ಮೂಲಗಳಿಂದ ಮೂಡಿ ಬರಬೇಕಾಗಿದೆ.

ಪಶ್ಚಿಮದ ಸನ್ನಿವೇಶದಲ್ಲಿ, ಮಹಿಳೆಯರು ತಮ್ಮ ಅನುಭವಗಳನ್ನು ದಾಖಲೆ ಮಾಡಲು ಆರಿಸಿಕೊಂಡಿದ್ದು, ಪುರುಷ ರೂಪಿತವಾದ ಅಧಿಕೃತಧಾರೆಯು ಕಡೆಗಣಿಸಿದ ಪ್ರಕಾರಗಳನ್ನು. ದಿನಚರಿಗಳು, ಪತ್ರಗಳು, ಸೆಂಟಿಮೆಂಟಲ್ ಎಂಬ ಹಣೆಪಟ್ಟಿಯನ್ನು ಪಡೆದ ಕಾದಂಬರಿಗಳು ಇಂಥ ಪ್ರಕಾರಗಳಲ್ಲಿ ಕೆಲವು. ಕನ್ನಡದಲ್ಲಿಯೂ ಈ ಬಗೆಯ ರಚನೆಗಳು ಬಂದಿವೆ, ಇನ್ನೂ ಬರುತ್ತಿವೆ. ಇವು ನಿಯತಕಾಲಿಕೆಗಳಲ್ಲಿ ಹಳೆಯ ಸಂಚಿಕೆಗಳಲ್ಲಿ ಕಳೆದುಹೋಗಿರುವ ಸಾಧ್ಯತೆಯು

ಖಂಡಿತವಾಗಿಯೂ ಇದೆ. ಇಂಥ ಹುಡುಕಾಟಕ್ಕೆ, "ಸೃಜನಶೀಲ ಸಾಹಿತ್ಯ"ವೆಂದು ಕರೆಸಿಕೊಂಡ ಬರವಣಿಗೆಯ ಗಡಿಗೆರೆಗಳಾಚೆ ಹೋಗುವುದು ಅನಿವಾರ್ಯವಾಗುತ್ತದೆ. ಕನ್ನಡದ ಸಂದರ್ಭದಲ್ಲಿ ಹೇಳುವುದಾದರೆ, ಬರವಣಿಗೆ ಮಾತ್ರವಲ್ಲದೆ ಅದಕ್ಕೆ ಪರ್ಯಾಯವಾದ ಇತರ ಆಕರಗಳನ್ನು ಹುಡುಕಬೇಕಾಗುತ್ತದೆ. ಉದಾಹರಣೆಗೆ ಪ್ರೊಫೆಶನಲ್ ಆದ ಜೀವನ ನಡೆಸುವ ಅವಕಾಶ ಪಡೆದ ಅನೇಕ ರಂಗನಟಿಯರ ಆತ್ಮ ಕಥೆಗಳು ಅನ್ಯರಿಗೆ ನಿರೂಪಿತವಾದಂತೆ ಪ್ರಕಟವಾಗಿವೆ. "ಸ್ತ್ರೀ ನಾಟಕಮಂಡಲಿ"ಯೊಂದನ್ನು ಸ್ಥಾಪಿಸಿ, ನಡೆಸಿದ ನಾಗರತ್ನಮ್ಮನವರು, ಮಳವಳ್ಳಿ ಸುಂದರಮ್ಮನವರು ಮುಂತಾದವರನ್ನು ಇಲ್ಲಿ ಹೆಸರಿಬಹುದು. ಅಂತೆಯೇ ಕನ್ನಡ ವಿಶ್ವವಿದ್ಯಾಲ ಯದಲ್ಲಿಯೇ ಡಾ. ಶೈಲಜಾ ಹಿರೇಮಠ ಅವರು ಪಾತರದವರನ್ನು ಕುರಿತು ಬರೆದ ಪುಸ್ತಕವು ಇಂತಹುದೇ ಮಾಹಿತಿಗಳ ಮೂಲವಾಗಿದೆ. ಮುದ್ದುಪಳನಿ ಎಂಬ ತಮಿಳು ಲೇಖಕಿಯು ರಚಿಸಿದ "ರಾಧಿಕಾ ಸಾಂತ್ವನಂ" ಎಂಬ ಕೃತಿಯು, ಸ್ತ್ರೀ ಲೈಂಗಿಕತೆಯ ನೆಲೆಯಿಂದ ರೂಪಿತವೆನ್ನುವ ಕಾರಣಕ್ಕಾಗಿಯೇ ಬಹಿಷ್ಕೃತವಾದುದನ್ನು ನೆನಪು ಮಾಡಿಕೊಳ್ಳಬಹುದು. ಪ್ರಸಿದ್ಧ ನರ್ತಕಿಯಾದ ಬೆಂಗಳೂರು ನಾಗರತ್ನಮ್ಮನವರು ಈ ವಿಷಯದಲ್ಲಿ ತೋರಿಸಿದ ಆಸಕ್ತಿ ಮತ್ತು ಎದುರಿಸಿದ ವಾಗ್ವಾದಗಳು ದಾಖಲೆಯಾಗಿವೆ. ಹೆಣ್ಣುಮಕ್ಕಳೇ ರಚಿಸಿರುವ ಜಾವಳಿಗಳು ಆಸಕ್ತಿಕರವಾದ ಸಂಗತಿಗಳನ್ನು ಒಳಗೊಂಡಿರಬಹುದು. ರಚಕರು ಯಾರೇ ಇರಲಿ ಉತ್ತರ ಕರ್ನಾಟಕದ "ಸವಾಲು-ಜವಾಬು ಪದಗಳು "ಸ್ತ್ರೀತತ್ವ ಮತ್ತು ಪುರುಷತತ್ವಗಳನ್ನು ಮುಖಾಮುಖಿಯಾಗಿ ಸುತ್ತವೆ. ಸಾಹಿತ್ಯ ಚರಿತ್ರೆಯ ಪುನಾರಚನೆ ಮಾಡುವುದಕ್ಕೆ ಮೊದಲು ಅಥವಾ ಆ ಪ್ರಕ್ರಿಯೆ ಯಲ್ಲಿಯೆ, ಕೆಲವು ತಾತ್ವಿಕ ಬಿಕ್ಕಟ್ಟುಗಳನ್ನು ಬಿಡಿಸಿಕೊಳ್ಳಬೇಕಾಗುತ್ತದೆ. ಅವು ಸ್ತ್ರೀವಾದದ ಅಸಲು ಪರಿಕಲ್ಪನೆಗೆ ಸಂಬಂಧಪಟ್ಟವು. ಇಂದು ಅಸ್ತಿತ್ವದಲ್ಲಿರುವುದು ಸ್ತ್ರೀವಾದವಲ್ಲ, ಸ್ತ್ರೀವಾದಗಳು. ಇವುಗಳ ನಡುವಿನ ಅಂತರಗಳು ಸುಸ್ಪಷ್ಟವಾಗಿವೆ. "ಲಿಂಗ" (ಜಂಡರ್) ಎಂಬ ಪದದ ನಿರ್ವಚನದಲ್ಲಿಯೇ ಎರಡು ಪರಸ್ಪರ ವಿರೋಧಿಯಾದ ನೆಲೆಗಳನ್ನು ತಳೆಯಲಾಗಿದೆ. ಇವುಗಳನ್ನು ಅನುಕ್ರಮವಾಗಿ "ಕನ್‌ಸ್ಟ್ರಕ್ಷನಿಸ್ಟ್" ಮತ್ತು "ಎಸನ್ಷಿಯಲಿಸ್ಟ್" ಎಂದು ಕರೆಯಲಾಗಿದೆ. ಮೊದಲನೆಯದರ ಪ್ರಕಾರ ಲಿಂಗವೆನ್ನುವುದು ಸಂಪೂರ್ಣವಾಗಿ ಸಾಮಾಜಿಕ, ರಾಜಕೀಯ ಕಾರಣಗಳಿಂದ ರೂಪಿತವಾಗಿರುವ ಪರಿಕಲ್ಪನೆಯೇ ವಿನಾ, ಅದಕ್ಕೆ ದೇಹ ವಿಶಿಷ್ಟ ವಾದ, ಸಾರ್ವತ್ರಿಕವೂ ಸಾರ್ವಕಾಲಿಕವೂ ಆದ ಯಾವುದೇ ನೆಲೆಗಟ್ಟು ಇಲ್ಲ. ಸಮುದಾಯದ ಇತಿಹಾಸದ ಯಾವುದೋ ಹಂತದಲ್ಲಿ ಸಂಸ್ಕೃತಿಯು "ಲಿಂಗ"ವೆನ್ನುವ ಪರಿಕಲ್ಪನೆಯನ್ನು ನಾಟುತ್ತದೆ. ಪುರುಷನು ಉತ್ತಮವೆಂಬ ನಿಲುವೂ ಅದೇ ಕ್ಷಣದಲ್ಲಿ ಹುಟ್ಟಿಕೊಂಡಿತು. ಭಾಷೆಯು ಲೈಂಗಿಕ ಅಸಮಾನತೆಯನ್ನು ಪ್ರತಿಬಿಂಬಿಸುವ ತಟಸ್ಥ ಮಾಧ್ಯಮವಲ್ಲ. ಸ್ವತಃ ಭಾಷೆಯೇ ತನ್ನ ಇಂದಿನ ಸ್ವರೂಪದಲ್ಲಿ ಪುರುಷನ ಅಭಿವ್ಯಕ್ತಿಗೆಂದೇ ರೂಪಿತವಾಗಿರುವ ಸಂಗತಿ. ವೈಚಾರಿಕ ವಿನಿಮಯದ ಸೀಮೆಯನ್ನು ಪ್ರವೇಶಿಸುವುದೇ ತಡ, ಹೆಣ್ಣು ತನಗೆ "ಅನ್ಯ"ವಾದ ಭಾಷೆಯಲ್ಲಿ ವ್ಯವಹರಿಸಬೇಕಾಗುತ್ತದೆ. ಆದರೆ ಈ ಅನ್ಯತೆಯು ಅನುಲ್ಲಂಘನೀಯವಾದ ಜೈವಿಕ ವಿಧಿಯೇನೂ ಅಲ್ಲ. ಭಾಷೆಯೂ ಸೇರಿದಂತೆ ಎಲ್ಲ ನೆಲೆಗಳಲ್ಲಿಯೂ ಸಮಾನ ಅಭಿವ್ಯಕ್ತಿಯನ್ನು

ಸಾಧಿಸುವುದೇ ಮಹಿಳೆಯರ ಗುರಿಯಾಗಬಹುದು. ತಾಯಿತನದಂತಹ ಅನುಭವವು ದೈಹಿಕವೇ ಹಿನಾ ಅದಕ್ಕೆ ತನ್ನದೇ ಆದ ಭಾವನಾತ್ಮಕ ಅನನ್ಯತೆಯೇನೂ ಇಲ್ಲ. ಈ ದಿಕ್ಕಿನಿಂದ ಹೊರಟಾಗ ಅನನ್ಯತೆಯ ನಿರಾಕರಣೆ ಮತ್ತು ಪುರುಷ ಸೀಮಿತ ಎನ್ನಲಾಗುತ್ತಿದ್ದ ಸಂಗತಿಗಳ ಅನುಕರಣೆಯು ಸಹಜವಾಗುತ್ತದೆ. ಆದರೆ ತನಗೆ ಆಗಿರುವ ಅನ್ಯಾಯವನ್ನು ಸರಿಪಡಿಸಿಕೊಳ್ಳುವ ನೆಲೆಯಲ್ಲಿ ಆಕ್ರಮಣಶೀಲವಾದ ನಿಲುವುಗಳನ್ನು ತಳೆಯುವುದು ಅನಿವಾರ್ಯವಾಗುತ್ತದೆ.

ಎಸೆನ್ಷಿಯಲಿಸ್ಟ್ ನಿಲುವು ಅನನ್ಯತೆ ಹಾಗೂ ಭೂಮಿ ಸಾಮಿಪ್ಯಗಳ ನೆಲೆಯಿಂದ ಹೊರಡುತ್ತದೆ. ಅವರ ಪ್ರಕಾರ ಹೆಣ್ಣಿನ ಬದುಕು ಪ್ರಕೃತಿ, ವಸ್ತು ಮತ್ತು ದೇಹತತ್ವಗಳಿಗೆ ಸಮೀಪವಾಗಿರುತ್ತದೆ. ಅವಳ ದೇಹರಚನೆಯಲ್ಲಿಯೇ ಈ ಸಾಮೀಪ್ಯವು ಬರೆಯಲ್ಪಟ್ಟಿದೆ. ಪುರುಷನು ಇವೆಲ್ಲದರಿಂದ ದೂರ ಸರಿಯಲೆಂದೇ ಬಳಸುವ ಅಮೂರ್ತ ಪರಿಕಲ್ಪನೆಗಳೆಲ್ಲವೂ ಜೀವವಿರೋಧಿಯಾದವು. ಕೊಲೆ, ರಕ್ತಪಾತ ಮತ್ತು ಯುದ್ಧಗಳಿಗೆ ಎಡೆಮಾಡಿಕೊಡುವುದಾದರೆ ಅವುಗಳ ಘನತೆಯಾದರೂ ಏನು? ಆದ್ದರಿಂದಲೇ ಮನುಷ್ಯ ಸಂಬಂಧಗಳ ಮಾತು ಬಂದಾಗಲೂ ಪುರುಷನು ಹಕ್ಕು ಮತ್ತು ಅಧಿಕಾರಗಳ ಸಿಟ್ಟಿನಲ್ಲಿ ಚಿಂತಿಸಿದರೆ ಹೆಣ್ಣು ಹೊಂದಾಣಿಕೆ ಹಾಗೂ ಪೊರೆಯುವಿಕೆಗಳ ನೆಲೆಯಲ್ಲಿ ನಿಂತು ವಾದಿಸುತ್ತಾಳೆ. ಕುಟುಂಬವೆನ್ನುವ ಸಂಸ್ಥೆಯು ತನ್ನೆಲ್ಲಾ ಶೋಷಣೆಗಳ ನಡುವೆಯೂ ಹೆಚ್ಚು ಸ್ಟೇಬಲ್ ಆಗಿ ಇರಲು ಅದು ಸ್ತ್ರೀಪೋಷಿತವೂ ಸ್ತ್ರೀ ಕೇಂದ್ರಿತವೂ ಆಗಿರುವುದು ಕಾರಣ. ಭಾರತೀಯವೆನ್ನಲಾದ ಚಿಂತನೆಯಲ್ಲಿಯೂ ಪುರುಷತತ್ವ ಮತ್ತು ಪ್ರಕೃತಿತತ್ವಗಳು ಹೀಗೆಯೇ ರೂಪಿತವಾಗಿರುವುದನ್ನು ನೆನಪು ಮಾಡಿಕೊಳ್ಳಬಹುದು. ಇಲ್ಲಿ ಇಹವನ್ನು ಮಾಯೆಯೆಂದು ಕರೆಯುವ "ಸಾಹಿತ್ಯ" ಬಂದಿರುವಂತೆಯೇ "ನೀನು ಮಾಯೆಯೆ ಎಂದರಿಯದವರು" (ಕೆ.ಎಸ್. ನರಸಿಂಹಸ್ವಾಮಿ) ಎನ್ನುವ ಹೆಣ್ಣುಗರುಳಿನ ಕವಿತೆಯೂ ಬಂದಿದೆ. ಪುರುಷ ಕವಿಗಳು ಹೆಣ್ಣುಗರುಳಿನ ಕವಿತೆಯನ್ನು ಬರೆಯಬಹುದೇ ಬರೆದರೆ ಯಾವಾಗ ಎನ್ನುವುದು ಕುತೂಹಲಕಾರಿಯಾದ ಪ್ರಶ್ನೆ.

ಈ ಪ್ರಶ್ನೆಗೆ ಎಸೆನ್ಷಿಯಲಿಸ್ಟ್ ಸ್ತ್ರೀವಾದವು ಸೂಕ್ತವಾದ ಉತ್ತರವನ್ನು ನೀಡುತ್ತದೆ :

"What lies outside male reason is precisely everything such abhors-contradiction, nonidentity, fluidity, nonrationality, illogicality, mixing of genres etc. Domination through categorical analysis (the violent cut of distinction) is impossible in the realm of matter where things flow into one another and are unamenable to philosphical opposition. Woman names this nonidentity, and her language what the French feminists called "feminist Writing", is exercised in a heterogeneous style that deliberately undermines all hierachical orders of male rationalist philosophy by breaking from the ideal of coherent meaning and good rational style. (It should be noted that for writers like Cixous, feminine writing also characterizes the work of male writers like Joyce) ("ಪುರುಷನ ತರ್ಕನಿಷ್ಠ ವೈಚಾರಿಕತೆಯ ಗಡಿಗಳಾಚೆಗೆ ಇರುವುದೆಲ್ಲವೂ ಅಂಥ ತರ್ಕವು ದ್ವೇಷಿಸುವ ಸಂಗತಿಗಳೇ: ಪರಸ್ಪರ ವಿರೋಧ, ಅಸ್ಮಿತೆಯ ಅಭಾವ, ದ್ರವಗುಣ, ಅ-ವೈಚಾರಿಕತೆ, ತರ್ಕರಾಹಿತ್ಯ, ಪ್ರಕಾರ ಸಂಕರ ಇತ್ಯಾದಿ. "ವಸ್ತು"

ಲೋಕದಲ್ಲಿ ಎಲ್ಲವನ್ನೂ ಗೆರೆಕೊರೆದು ವಿಭಾಗಿಸಿ, ಅದಕ್ಕೆ ಅನ್ವಯವಾಗುವಂತೆ ವಿಶ್ಲೇಷಣೆ ಮಾಡುವ ಮತ್ತು ಹಾಗೆ ಮಾಡುವುದರ ಮೂಲಕವೇ ಮೇಲುಗೈ ಪಡೆಯುವ ಕ್ರಿಯೆಯು ಸಾಧ್ಯವಿಲ್ಲ. (ಅದು ವ್ಯತ್ಯಾಸ ಹಾಗೂ ಅನನ್ಯತೆಗಳನ್ನು ಆಧರಿಸಿದ ಹಿಂಸ್ರಕವಾದ ವಿಭಜನ ಕ್ರಮ) ಏಕೆಂದರೆ ಆ ಲೋಕದೊಳಗೆ ಒಂದು ಇನ್ನೊಂದರೊಳಗೆ ನಿರಂತರವಾಗಿ ಲೀನವಾಗುತ್ತದೆ. ಆ ಲೋಕವು ತಾತ್ವಿಕವಾದ ಪರ-ವಿರೋಧಗಳ ತೆಕ್ಕೆಗೆ ನಿಲುಕುವುದಿಲ್ಲ. ಹೆಣ್ಣು ಈ "ಅನಸ್ಮಿತೆ"ಯ ಸರ್ವಲೀನತೆಯ ಸ್ಥಿತಿಯನ್ನು ಹಿಡಿದಿಡಲು, ವಿವರಿಸಲು ಬಯಸುತ್ತಾಳೆ. ಅವಳ ಭಾಷೆಯನ್ನು ಫ್ರೆಂಚ್ ಸ್ತ್ರೀವಾದಿಗಳು "ಫೆಮಿನಿಸ್ಟ್ ರೈಟಿಂಗ್" ಎಂದೇ ಕರೆಯುತ್ತಾರೆ. ಆ ಭಾಷೆಯು ಬಹುರೂಪಿಯಾದ ಶೈಲಿಯ ಮೂಲಕ ಕೆಲಸ ಮಾಡುತ್ತದೆ. ಅದು ಪುರುಷರ ರ‍್ಯಾಶನಲಿಸ್ಟ್ ತಾತ್ವಿಕತೆಯು ರೂಪಿಸಿರುವ ಎಲ್ಲ ಶ್ರೇಣೀಕೃತ ಕ್ರಮಗಳನ್ನು ಬೇಕೆಂದೇ ಒಡೆದು ಹಾಕುತ್ತದೆ. ಅದು ಸುಸಂಘಟಿತವೂ ಅರ್ಥಭರಿತವೂ ಆದ ರಚನೆ ಹಾಗೂ ಒಳ್ಳೆಯ ವೈಚಾರಿಕ ಶೈಲಿಗಳೆಂಬ ಆದರ್ಶಗಳನ್ನು ನಿರಾಕರಿಸುತ್ತದೆ. (ಇಲ್ಲಿ ಇನ್ನೊಂದು ಸಂಗತಿಯನ್ನು ಗಮನಿಸ ಬೇಕು. ಸಿಕ್ಸೂ ಅಂತಹ ಲೇಖಕಿಯರ ಪ್ರಕಾರ 'ಫೆಮಿನಿಸ್ಟ್ ರೈಟಿಂಗ್" ಎನ್ನುವುದು ಜೇಮ್ಸ್ ಜಾಯ್ಸ್‌ರಂತಹ ಪುರುಷ ಸಾಹಿತಿಗಳ ಬರೆಹಗಳನ್ನೂ ಒಳಗೊಳ್ಳುತ್ತದೆ.) (ಲಿಟರರಿ ಥಿಯರಿ, ೨೦೦೨, ಸಂ. ಜೂಲಿ ರಿವ್ಕಿನ್ ಮತ್ತು ಮೈಕೆಲ್ ರಿಯಾನ್, ಪುಟ ೫೩೦).

ಈ ಮಾತುಗಳು ಹೆಣ್ಣು ಬರೆಹ ಮತ್ತು ಗಂಡು ಬರೆಹಗಳ ನಡುವಿನ ವ್ಯತ್ಯಾಸವನ್ನು ಹೇಳುವುದಷ್ಟೇ ಅಲ್ಲದೆ ಪುರುಷ ನಿರ್ಮಿತ ಕೃತಿಗಳಲ್ಲೂ ಸೂಕ್ತವಾದ ಆಯ್ಕೆಗಳನ್ನು ಸಾಧ್ಯವಾಗಿಸುತ್ತವೆ. ಅಲ್ಲಿ ನೀಡಲಾಗಿರುವ ಸ್ತ್ರೀತ್ವದ ಮಾದರಿ ಯಾವುದೇ ಇರಲಿ, ಕನ್ನಡದ ಬಹುಪಾಲು ಮುಖ್ಯ ಕಾದಂಬರಿಗಳು ಸ್ತ್ರೀಕೇಂದ್ರಿತವಾಗಿರುವುದು ಆಕಸ್ಮಿಕವಲ್ಲ. ವಿಭಿನ್ನ ಸಾಹಿತ್ಯಿಕ ಚಳುವಳಿಗಳು ಮಹಿಳೆಯರ ಪ್ರಶ್ನೆಗೆ ಕೊಟ್ಟ ಸ್ಥಾನವನ್ನು ಗಮನಿಸುವುದರ ಜೊತೆಗೆ ನಿರ್ದಿಷ್ಟ ಲೇಖಕರನ್ನು ವಿವರವಾಗಿ ಗಮನಿಸಿದಾಗ ಈ ಸಂಗತಿಯು ಇನ್ನಷ್ಟು ಸ್ಪಷ್ಟವಾಗುತ್ತದೆ. ಹಾಗೆಯೇ ಮುಂದುವರಿದು ಆಲೋಚಿಸಿದಾಗ ಪ್ರತಿಯೊಬ್ಬ ಲೇಖಕನಲ್ಲೂ ಇರಬಹುದಾದ ಸ್ತ್ರೀತತ್ವದ ಪರಿಚಯವೂ ಆಗುತ್ತದೆ. ಸಾಮಾಜಿಕವಾದ ಆದೇಶಗಳನ್ನು ಚಾಚು ತಪ್ಪದೆ ಪರಿಪಾಲಿಸುತ್ತಿರುವಾಗಲೂ ಅನ್ಯಲಿಂಗದ ಒಳಸುರಿತಗಳು ಕವಿಯಲ್ಲಿ ಇರಲು ಸಾಧ್ಯ. ಈಗ ಹೆಲೆನ್ ಸಿಕ್ಸೂ ಅವರ ಅಭಿಪ್ರಾಯಗಳನ್ನೇ ಗಮನಿಸಿ :

"There are some exceptions. There have always been those uncertain, poetic persons who have not let themselves be reduced to dummies programmed by the pitiless repression of the homo sexual element. Men or women, beings who are complex, mobile, open. Accepting the other sex as a component makes them richer, more various, stronger, and - to the extent that they are mobile-very fragile. It is only is this condition that we invent. Thinkers, artists, those who create new values, "Philosophers" in the mad Nietzschean manner, inventors and wreckers of concepts and forms, those who change life cannot help but be stirred by anamolies-

Complimentary or contradictory. That doesn't mean that you have to be homosexual to create. But it does mean that there is no invention possible, whether it be philosophical or poetic, without there being in the inventing subject an abundance of the other, of variety: separate-people, thought-/people, whole populations issuing from the unconscious, and in each suddenly animated desert, the springing up of selves one did'nt known-our women, our monsters, our jackels, our Arabs, our aliases, our frights. (ಹೌದು ಇದಕ್ಕೆ ಕೆಲವು ಅಪವಾದಗಳಿವೆ. ಅಂಥವರು ಎಂದಿನಿಂದಲೂ ಇದ್ದಾರೆ. ಕಟುಖಚಿತವಲ್ಲದ, ಕವಿ ಹೃದಯದ ವ್ಯಕ್ತಿಗಳು. ತಮ್ಮೊಳಗಿನ ಹೋಮೋಸೆಕ್ಸುಯಲ್ ಎಳೆಗಳನ್ನು ನಿರ್ದಯವಾಗಿ ದಮನ ಮಾಡುವ ಯೋಜನೆಗಳ ಫಲವಾಗಿ ನಿರ್ಜೀವ ಡಮ್ಮಿಗಳಾಗದೆ ಇರುವವರು. ಸ್ತ್ರೀಯರಿರಲಿ, ಪುರುಷರಿರಲಿ ಅವರು ಸಂಕೀರ್ಣವಾದ, ತೆರೆದ ಮನದ, ಬದಲಾವಣೆಗೆ ಮುಕ್ತವಾದ ವ್ಯಕ್ತಿಗಳು. "ಅನ್ಯ ಲಿಂಗ"ವನ್ನು ತಮ್ಮದೇ ಒಂದು ಭಾಗವೆಂದು ಸ್ವೀಕರಿಸುವುದರ ಮೂಲಕ ಅವರು ಇನ್ನಷ್ಟು ಶ್ರೀಮಂತರಾಗುತ್ತಾರೆ, ಶಕ್ತರಾಗುತ್ತಾರೆ, ಬಹುರೂಪಿಗಳಾಗುತ್ತಾರೆ. ಎಷ್ಟು ಚಲನಶೀಲರೋ ಅಷ್ಟೇ ಪ್ರಮಾಣದಲ್ಲಿ ಮುಟ್ಟಿದರೆ ಮುರಿಯುವಷ್ಟು ಮೃದುಕೋಮಲರೂ ಆಗಿ ಬಿಡುತ್ತಾರೆ. ಈ ಸ್ಥಿತಿಯಲ್ಲಿ ಮಾತ್ರ ನಾವು "ಹೊಸಹುಟ್ಟು"ಗಳನ್ನು ಇಳೆಗಿಳಿಸಲು ಸಾಧ್ಯ. ಚಿಂತಕರು, ಕಲಾವಿದರು, ಹೊಸ ಮೌಲ್ಯಗಳ ನಿರ್ಮಾಪಕರು, ನೀಷೆಯ "ಹುಚ್ಚು ಬಗೆ"ಯಲ್ಲಿ ಸೃಜನಶೀಲರಾದ ತತ್ವಶಾಸ್ತ್ರಜ್ಞರು, ಹೊಸ ಪರಿಕಲ್ಪನೆಗಳು ಮತ್ತು "ರೂಪ"ಗಳನ್ನು ಕಟ್ಟುವವರು, ಕೆಡವುವವರು, ಒಟ್ಟಿನಲ್ಲಿ ಬದುಕನ್ನು ಬದಲಿಸುವವರು. ಇಂಥ ಜನ ನಮ್ಮನ್ನು ಸುತ್ತವರಿದಿರುವ ಅನಾಮಲಿಗಳಿಂದ ಪ್ರಕ್ಷುಬ್ಧರಾಗದಿರಲು ಹೇಗೆ ತಾನೇ ಸಾಧ್ಯ. ಅವು ಪರಸ್ಪರ ಪೂರಕವಾದರೂ ಸರಿ. ವಿರೋಧಿಗಳಾದರೂ ಸರಿ. ಹಾಗೆಂದರೆ ಸೃಜನಶೀಲರಾಗಬೇಕಾದರೆ ಹೋಮೋಸೆಕ್ಸುಯಲ್ ಆಗಬೇಕೆಂದು ಅರ್ಥವಲ್ಲ. ಆದರೆ ಇಷ್ಟಂತೂ ನಿಜ: ಹೊಸ ಹುಟ್ಟಿಗೆ ಕಾರಣವಾಗುವ ವ್ಯಕ್ತಿಯಲ್ಲಿ ಅನ್ಯದ ಪ್ರಮಾಣವು ಸಮೃದ್ಧವಾಗಿ ಇರಬೇಕು. ಅಲ್ಲಿ ಅನೇಕ ಮುಖಿಯಾದ ಬಹುತ್ವ ಇರಬೇಕು. ಬೇರೆ - ಬೇರೆ ವ್ಯಕ್ತಿಗಳು, ಚಿಂತನ ಘಟಕಗಳು/ವ್ಯಕ್ತಿಗಳು ಸುಪ್ತಪ್ರಜ್ಞೆಯಲ್ಲಿ ಒಡ ಮೂಡಿ ಹೊಳೆಯಂತೆ ಹರಿದು ಬರುವ ಜನಸಮುದಾಯಗಳು, ಹೊಸದಾಗಿ ಜೀವಂತಿಕೆಯನ್ನು ಪಡೆದ ಪ್ರತಿಯೊಂದು ಮರುಭೂಮಿಯಲ್ಲಿಯೂ ತನ್ನದೇ ತಿಳಿಯದಿದ್ದ ಹೊಸ ಚೇತನಗಳ ಚಿಲುಮೆಗಳು: ನಮ್ಮ ಮಹಿಳೆಯರು, ನಮ್ಮ ರಾಕ್ಷಸರು, ನಮ್ಮ ನದಿಗಳು, ನಮ್ಮದೇ ಅಲಿಯಾಸ್ ಪ್ರತಿರೂಪಗಳು, ನಮ್ಮಲ್ಲಿ ಅಡಗಿರುವ ಅರಬರು! (ಅದೇ. ಹೆಲೆನ್ ಸಿಕ್ಸೂ, ಪುಟ ೫೮೧) ಅರ್ಧ ನಾರೀಶ್ವರನ ಪರಿಕಲ್ಪನೆಯನ್ನು ನೆನಪಿಗೆ ತರುವ ಈ ಮಾತುಗಳು ಅದಕ್ಕಿಂತ ವಿಶಾಲ ವ್ಯಾಪ್ತಿಯವು. ಇವು ಮನುಷ್ಯನ ಅಂತರಂಗದಲ್ಲಿ ಅಡಗಿರುವ ವಿಭಿನ್ನ ಸಾಧ್ಯತೆಗಳ ಮೇಲೆ ಮತ್ತು ಅವು ಸಾಹಿತ್ಯದಲ್ಲಿ ಅಭಿವ್ಯಕ್ತಿಯಾಗುವ ರೀತಿಯ ಮೇಲೆ ಬೆಳಕು ಚೆಲ್ಲುತ್ತವೆ. ಪುರುಷ ನಿರ್ಮಿತವಾದ ಸಾಹಿತ್ಯವನ್ನು ಅರ್ಥೈಸಲು ಅಗತ್ಯವಾದ ಮಾನದಂಡಗಳು ಇಲ್ಲಿ ದೊರೆಯಬಹುದು. ಆಗ ರಚಿತವಾಗುವ ಸಾಹಿತ್ಯಚರಿತ್ರೆಯು ಪುರುಷ ಪ್ರಧಾನವಾದ ಸಮಾಜದ ವಿಷಮತೆಗಳನ್ನು ಗಮನಿಸುತ್ತಲೇ

ಪಂಪ, ಬಸವ, ಕುಮಾರವ್ಯಾಸ, ರತ್ನಾಕರವರ್ಣಿ ಯರನ್ನು ವಿಮರ್ಶಾತ್ಮಕ ಎಚ್ಚರ ಅಂತೆಯೇ ಅನುಕಂಪಗಳೊಂದಿಗೆ ಪರಿಶೀಲಿಸುತ್ತದೆ.

ಸಾಹಿತ್ಯ ಚರಿತ್ರೆಯ ರಚನೆ ಅಥವಾ ಪುನಾರಚನೆಗಳ ಉದ್ದೇಶವಾದರೂ ಏನು ಎಂಬುದು ಮತ್ತೊಂದು ಮುಖ್ಯವಾದ ಪ್ರಶ್ನೆ. ಕೆ.ವಿ. ನಾರಾಯಣ ಅವರು ಬೇರೊಂದು ಸಂದರ್ಭದಲ್ಲಿ ಹೇಳಿರುವಂತೆ ನಮಗೆ ಬೇಕಾಗಿರುವುದು ಸಾಹಿತ್ಯದ ಚರಿತ್ರೆಯೋ ಅಥವಾ ಸಾಹಿತ್ಯದಲ್ಲಿರುವ ಚರಿತ್ರೆಯೋ ಎನ್ನುವುದನ್ನು ಮೊದಲು ನಿರ್ಧರಿಸಬೇಕು. ಸಾಹಿತ್ಯದ ಮೂಲಕವಾಗಿ ಮಾತ್ರವೇ ಪ್ರತೀತವಾಗುವ ಚರಿತ್ರೆಯೂ ಇರುತ್ತದೆ. ಎಷ್ಟೋ ಬಾರಿ ಅದು ಅಧಿಕೃತವೆನ್ನಲಾದ ಚರಿತ್ರೆಯ ಸಂಗಡ ಇರುವ ನಿರ್ಣಾಯಕವಾದ ಭಿನ್ನಾಭಿಪ್ರಾಯಗಳನ್ನು ತನ್ನೊಳಗೆ ಅಡಗಿಸಿಕೊಂಡಿರುತ್ತದೆ. ಸಹಜವಾಗಿಯೇ ಸಾಹಿತ್ಯೇತರ ಕ್ಷೇತ್ರಗಳ ಅಧ್ಯಯನಕಾರರು ಇಂಥ ಚರಿತ್ರೆಯ ಆಕರವಾಗಿಯೇ ಸಾಹಿತ್ಯವನ್ನು ನೋಡುತ್ತಾರೆ. ಕನ್ನಡದ ಸಂದರ್ಭದಲ್ಲಿ ಸಾಹಿತ್ಯಕ ವಲಯಗಳ ಆಚೆನಿಂದ ಬಂದ ಸ್ತ್ರೀವಾದಿಗಳು ವಿಪುಲವಾದ ಬರವಣಿಗೆಯಲ್ಲಿ ತೊಡಗಿಕೊಂಡಿಲ್ಲ. ಒಂದೊಮ್ಮೆ ಹಾಗೆ ಮಾಡಿದಾಗಲೂ ಅವರು ಸಾಹಿತ್ಯವನ್ನೇ ಕುರಿತು ಬರೆಯುತ್ತಾರೆ. ಪುರುಷ ಪ್ರಧಾನ ಸಂಸ್ಕೃತಿಯ ನಿಲುವುಗಳನ್ನು ಬಯಲಿಗೆಳಯಲೆಂದೋ ಅಥವಾ ಹಾಗಿಲ್ಲದ ಸಾಹಿತ್ಯ ಕೃತಿಗಳನ್ನು ಎತ್ತಿ ಹಿಡಿಯಲೆಂದೋ ನಡೆಸುವ ಸಾಹಿತ್ಯಾಧ್ಯಯನವು ನಿರ್ದಿಷ್ಟ ಬಗೆಯ ಸಾಹಿತ್ಯ ಚರಿತ್ರೆಯನ್ನು ಸೃಷ್ಟಿಸುತ್ತದೆ. ಅದಕ್ಕೆ ಅದರದೇ ಆದ ಪ್ರಯೋಜನಗಳೂ ಇರುತ್ತವೆ. ಆದರೆ ಮುಖ್ಯವಾದ ಪ್ರಶ್ನೆಯೆಂದರೆ, ಪುರುಷನೊಬ್ಬನು ಸಾಹಿತ್ಯವನ್ನು ಕುರಿತು ಬರೆಯುವಾಗ, ಎಲ್ಲ ಕ್ಷಣಗಳಲ್ಲಿಯೂ ಅವನ ಪುರುಷತನ ಹಾಗೂ ಅದರಿಂದ ಪ್ರೇರಿತವಾದ ನಿಲುವುಗಳೇ ಪ್ರವೃತ್ತವಾಗಿರುತ್ತವೆಯೇ ಎನ್ನುವುದು. ಒಬ್ಬ ಭೌತಶಾಸ್ತ್ರಜ್ಞನಿಗೋ ಅಥವಾ ವೈದ್ಯರಿಗೋ ಈ ಮಾತನ್ನು ಅನ್ವಯಿಸಿದಾಗ ನನ್ನ ವಿಚಾರವು ಸ್ಪಷ್ಟವಾಗುತ್ತದೆ. ಒಬ್ಬ ವಿಜ್ಞಾನಿಯ ಸಂಶೋಧನೆಗಳನ್ನು ಪುರುಷ ಪ್ರಧಾನ ಸಮಾಜವು ತನ್ನ ಅಗತ್ಯಗಳಿಗೆ ತಕ್ಕಂತೆ ಬಳಸಿಕೊಳ್ಳಬಹುದು. ಆದರೆ ಅವನ ಸಂಶೋಧನೆಯ ವಿಧಿ ವಿಧಾನಗಳೇ ಪುರುಷ ಅಥವಾ ಸ್ತ್ರೀ ಎನ್ನುವ ಆಯಾಮವನ್ನು ಪಡೆದಿರುತ್ತವೆಯೇ? ಹೌದಾದರೆ ಈ ಓಲುವೆಯನ್ನು ಯಾರು, ಹೇಗೆ ಸರಿಪಡಿಸುವುದು? ಮರಳಿ ಸಾಹಿತ್ಯ ಚರಿತ್ರೆಗೆ ಹಿಂದಿರುಗುವುದಾದರೆ ಹೆಣ್ಣು ಸಾಹಿತ್ಯವನ್ನು ಕುರಿತ ಯಾವುದೇ ಸಂಗತಿಯನ್ನು ಲಿಂಗತಟಸ್ಥವಾದ ಅಥವಾ ಆಯಾಮವನ್ನು ಬಯಸದ ನೆಲೆಯಲ್ಲಿ ನಿಂತು ಪರಿಶೀಲಿಸಲು ಸಾಧ್ಯವೇ ಇಲ್ಲವೇ? ಇಲ್ಲ ಎನ್ನುವುದಾದರೆ ಪುರುಷ ನಿರ್ಮಿತ ಮತ್ತು ಸ್ತ್ರೀ ನಿರ್ಮಿತ ಸಾಹಿತ್ಯ ಚರಿತ್ರೆಗಳು ಸದಾ ಪರಸ್ಪರ ವಿರೋಧದ ನೆಲೆಯಲ್ಲಿಯೇ ಉಳಿಯುವುದು ಅನಿವಾರ್ಯವಾಗುತ್ತದೆ. ಅದೂ ಅಲ್ಲದೆ ಸಾಹಿತ್ಯ ಚರಿತ್ರೆಯಲ್ಲಿ ಲಿಂಗಸಂಬಂಧಿ ಯಲ್ಲದ ವಿಚಾರಗಳು ಚರ್ಚಿತವಾಗುತ್ತಿರುವಾಗಲೂ ಈ ವಿರೋಧದ ಎಳೆ ಉಳಿದೇ ಇರುತ್ತದೆಯೇ? ಉಳಿದಿರಬೇಕೇ? ಲಿಂಗಾಧಾರಿತವಾದ ವಿಚಾರ ಗಳನ್ನು ಮಾತ್ರ ಪ್ರಸ್ತಾಪಿಸುವೆ ನೆಂಬ ಲೇಖಕಿಯರು ತಮಗೆ ತಾವೇ ಕಟ್ಟುಪಾಡುಗಳನ್ನು ಹಾಕಿಕೊಂಡಂತೆ ಆಗುವುದಿಲ್ಲವೇ? ಅದು ದಲಿತ ಸಾಹಿತಿಯೊಬ್ಬರು ದಲಿತರ ಬರವಣಿಗೆಯನ್ನು ಕುರಿತಂತೆ ಮಾತ್ರವೇ ಬರೆಯುವೆ ನೆಂದು ಹಟತೊಟ್ಟಂತೆ ಅಸಹಜವಾಗುವುದಿಲ್ಲವೇ. ಅಥವಾ

ಸಾಮಾಜಿಕ ಸಂಬಂಧಗಳ ಜಗತ್ತು ಒಂದನ್ನು ಬಿಟ್ಟು ಇನ್ನೊಂದು ಇರಲಾರದು ಎನ್ನುವಷ್ಟು ಜಟಿಲವಾಗಿ ಹೆಣೆದು ಕೊಂಡಿದೆಯೇ? ಈ ಪ್ರಶ್ನೆಗಳಿಗೆ ಇದಮಿತ್ಥಂ ಎಂಬ ಉತ್ತರವನ್ನು ಕೊಡಲು ನನಗೆ ಸಾಧ್ಯವೂ ಇಲ್ಲ, ಅಂಥ ಅಪೇಕ್ಷೆಯೂ ನನಗಿಲ್ಲ. ಆದರೆ ಸಾಹಿತ್ಯ ರಚನೆಯ ಪುನಾರಚನೆಗೆ ಏಕೆ ತೊಡಗಬೇಕು ಎನ್ನುವ ಪ್ರಶ್ನೆಗೆ ಕೊಟ್ಟುಕೊಳ್ಳುವ ಉತ್ತರ ತೀರ ಸೀಮಿತವಾದರೆ ಅದು ಸಾಮರ್ಥ್ಯಗಳ ನಿಜೀಕರಣಕ್ಕೆ ಅಡ್ಡಿಯಾಗುವುದೆಂದೇ ತೋರುತ್ತದೆ. ಉದಾಹರಣೆಗೆ ಸ್ತ್ರೀವಾದದ ಮಾತು ಇಷ್ಟು ಸ್ಪಷ್ಟವಾಗಿ ಕೇಳಿ ಬರದಿದ್ದ ದಿನಗಳಲ್ಲಿ ಮಹಿಳೆಯರು ಮಾಡಿದ ಕೆಲಸವು ತನ್ನದೇ ಆದ ಮೌಲಿಕತೆಯನ್ನು ಹೊಂದಿದೆಯೆಂದೇ ನನ್ನ ತಿಳುವಳಿಕೆ. ನಾಗಚಂದ್ರನನ್ನು ಕುರಿತಂತೆ ಡಾ. ವಿಜಯಾ ದಬ್ಬೆ, ಹಳಗನ್ನಡ ಸಾಹಿತ್ಯದ ಅಧ್ಯಯನವನ್ನು ಕುರಿತಂತೆ ಡಾ.ಎಚ್.ಎಸ್. ಶ್ರೀಮತಿ, ಆಧುನಿಕ ವಚನಕಾರ್ತಿಯರನ್ನು ಕುರಿತಂತೆ ಡಾ. ಪ್ರೀತಿ ಶುಭಚಂದ್ರ ಮುಂತಾದವರು ಮಾಡಿರುವ ಕೆಲಸವನ್ನು ನೆನಪು ಮಾಡಿಕೊಳ್ಳಬಹುದು. ಅಂಥ ಹಲವು ಲೇಖಕಿಯರು ತಮ್ಮ ಬರವಣಿಗೆಗೆ ಪರಿಧಿಗಳನ್ನು ಹಾಕಿಕೊಳ್ಳುವುದು ಎಷ್ಟರಮಟ್ಟಿಗೆ ಸರಿ? ಎಲ್ಲ ಬರವಣಿಗೆಯ ಹಿಂದೆಯೂ ಒಂದು ಖಚಿತವಾದ ದೃಷ್ಟಿಕೋನವಿರುವುದು ಸರಿ. ಆದರೆ ಅದು ಬರವಣಿಗೆಯ ವ್ಯಾಪ್ತಿಗೆ ಒಡ್ಡಿದ ಮಿತಿ ಆಗ ಬಾರದೇನೋ? ಆದ್ದರಿಂದ ಸಾಹಿತ್ಯ ಚರಿತ್ರೆಯ ಪುನಾರಚನೆಯೆನ್ನುವುದು ಕೇವಲ ಸ್ತ್ರೀವಾದದ ಅಜೆಂಡಾಗೆ ಮಾತ್ರ ಸೀಮಿತವಾಗಿರಬೇಕೆಂಬ ಕಟ್ಟುಪಾಡನ್ನು ಹಾಕಿಕೊಳ್ಳದೆ ಒಟ್ಟು ಸಾಹಿತ್ಯ - ಸಂಸ್ಕೃತಿಗಳ ಸಂದರ್ಭ ದಲ್ಲಿಯೇ ಕೆಲಸ ಮಾಡಲು ತೊಡಗುವುದು ಉಪಯುಕ್ತವಾಗಬಹುದೆಂದು ತೋರುತ್ತದೆ. ಅಂಥ ಬರವಣಿಗೆಯಲ್ಲಿಯೂ ಲೇಖಕಿಯರ ಮೂಲ ನಿಲುವುಗಳು ಪ್ರಸ್ತುತವಾಗಿಯೇ ಇರುವುದ ರಿಂದ ಪರಸ್ಪರ ವಿರೋಧವೇನೂ ಉಂಟಾಗುವುದಿಲ್ಲ.

ಸಾಹಿತ್ಯ ಚರಿತ್ರೆಯ ಪುನಾರಚನೆಯಲ್ಲಿ ತೊಡಗಿಕೊಂಡಾಗ ಯಾವ ವಿಷಯಗಳನ್ನು ಮರುಚಿಂತನೆಗೆ ಒಳಪಡಿಸಬೇಕು ಎನ್ನುವುದು ಮತ್ತೊಂದು ಕುತೂಹಲಕಾರಿಯಾದ ಪ್ರಶ್ನೆ. ಸಾಮಾನ್ಯವಾಗಿ ಕೃತಿಯ ಆಶಯ, ಕೃತಿಕಾರನ ನಿಲವು, ಅಂದಿನ ಸಾಂಸ್ಕೃತಿಕ ಸಂದರ್ಭ ಮುಂತಾದವು ಚರ್ಚೆಯ ವಿಷಯವಾಗುತ್ತವೆ. ಎಂದರೆ ಕೃತಿಯ ಘೋಷಿತ ಪಠ್ಯವು ಮುನ್ನೆಲೆಗೆ ಬಂದು ವಿಮರ್ಶಿತವಾಗುತ್ತದೆ. ಹೀಗೆ ಮಾಡುವಾಗ ಕೃತಿಯೊಳಗೆ ಹುದುಗಿರುವ ವಿಭಿನ್ನ ಧ್ವನಿಗಳು ಮರವೆಗೆ ಸಲ್ಲುತ್ತವೆ. ಯಾವುದೇ ಕೃತಿಯೊಳಗೆ ಅಡಗಿರುವ ಅಘೋಷಿತ ಪಠ್ಯಗಳು ಸ್ವತಃ ಲೇಖಕನಿಗೂ ಅಗೋಚರವಾಗಿರಬಹುದು. ಅದನ್ನು ಹೊರತೆಗೆದು ತೋರಿಸುವ ವ್ಯಾಖ್ಯಾನ ಕಾರರು ಕೃತಿಯ ಸಾಧ್ಯತೆಗಳನ್ನು ಸಮಕಾಲೀನ ಸಂದರ್ಭದಲ್ಲಿ ವಿಸ್ತರಿಸುತ್ತಿರುತ್ತಾರೆ. ಹಾಗೆ ಒಳದನಿಗಳನ್ನು ಹುಡುಕುವಾಗ ಪ್ರತಿಮಾವಿನ್ಯಾಸ, ರೂಪಕಗಳು, ಭಾಷಿಕ ಆಯಾಮಗಳು ಮುಂತಾದ ಸಂಗತಿಗಳು ಮುಖ್ಯವಾಗುತ್ತವೆ. ಇವುಗಳನ್ನು ಬಿಡಿ ಬಿಡಿಯಾಗಿ ಪರಿಶೀಲಿಸು ವುದಕ್ಕಿಂತ ಅವು ಕೃತಿಯೊಳಗೆ ಹರಡಿಕೊಂಡಿರುವ ಬಗೆಗೆ ಪರಿಶೀಲನೆಯು ಉಪಯುಕ್ತವಾಗುತ್ತದೆ. ಅಷ್ಟೇ ಅಲ್ಲ, ಅವು ತಮಗೆ ಸಮಕಾಲೀನವಾದ ಇತರ ಪಠ್ಯಗಳೊಂದಿಗೆ ಕಟ್ಟಿಕೊಳ್ಳುವ ಪೂರಕ ಹಾಗೂ ವಿರೋಧಾತ್ಮಕ ಸಂಬಂಧಗಳ ಪರಿಶೀಲನೆಯೂ ಪ್ರಯೋಜಕರವೇ. ಒಂದು ವಸ್ತುವು

ಕಾಲಕ್ರಮದಲ್ಲಿ ಪಡೆದುಕೊಳ್ಳುವ ಸ್ಥಿತ್ಯಂತರಗಳನ್ನು ಅರಿಯುವುದು ಮತ್ತೊಂದು ದಾರಿ. ಲೋಪ, ಆಗಮ, ಆದೇಶಗಳ ಹಿಂದಿನ ರಾಜಕಾರಣವು ತುಂಬಾ ಕುತೂಹಲಕಾರಿಯಾದುದು. ಹೀಗೆ ಮೂಡಿಬರುವ ಒಳನೋಟಗಳೇ ಸಾಹಿತ್ಯ ಚರಿತ್ರೆಯ ಪುನಾರಚನೆಗೆ ಅಗತ್ಯವಾದ ಪ್ರೇರಣೆಗಳನ್ನು ಒದಗಿಸಿಕೊಡುತ್ತದೆ. ಹಾಗೆ ನೋಡಿದರೆ ಪ್ರತಿಯೊಂದು ಕೃತಿಗೂ ಅದರದೇ ಆದ ಚರಿತ್ರೆ ಇರುತ್ತದೆ. ಅಂತಹ ಚರಿತ್ರೆಗಳ ಸಂಕಲನವೇ ಒಟ್ಟು ಸಾಹಿತ್ಯೇತಿಹಾಸದ ಪುಟಗಳಾಗುತ್ತವೆ.

ಈಗಾಗಲೇ ಸಾಕಷ್ಟು ಅಮಾರ್ಫಸ್ ಆಗಿರುವ ಸಾಹಿತ್ಯ ಚರಿತ್ರೆಯ ಅಂತಿಮ ಸ್ವರೂಪವು ಹೀಗೆಯೇ ಇರಬಹುದೆಂದು ಊಹಿಸುವ ಅಥವಾ ಹೀಗೆಯೇ ಇರಬೇಕೆಂದು ಆದೇಶಿಸುವ ಹುಂಬತನದಲ್ಲಿ ನಾನು ತೊಡಗುವುದಿಲ್ಲ. ಆದರೆ ಈ ಕೆಲಸವು ಆಗುವುದರಲ್ಲಿ ಅನುಮಾನವಿಲ್ಲ. ಇದು ಪ್ರಗತಿವಿರೋಧಿಯಾದ ಶಕ್ತಿಗಳು ಹಲವು ಮುಖವಾಡಗಳಲ್ಲಿ ಕಾಣಿಸಿಕೊಳ್ಳುತ್ತಿರುವ ಕಾಲ. ಮಹಿಳೆಯರಲ್ಲಿಯೂ ಇಂಥ ನಿಲುವುಗಳ ಮುಖವಾಣಿಗಳು ಖಂಡಿತವಾಗಿಯೂ ಇರುತ್ತವೆ. ನಾವೆಲ್ಲರೂ ಒಂದು. ನಾವು ಮಹಿಳೆಯರು ಎಂಬ ನಿಲುವು ಅಪಾಯಕಾರಿಯಾಗಬಹುದು. ಪುರುಷರೆಲ್ಲರೂ ನಮ್ಮ ಶತ್ರುಗಳು ಎಂಬ ವಾದಕ್ಕಿಂತ ಅಪಾಯಕಾರಿಯಾಗಬಹುದು. ಮೊದಲಮೊದಲು ಕಾಣಿಸಿಕೊಳ್ಳುವ ಭಿನ್ನಾಭಿಪ್ರಾಯಗಳು ಕೆಲವು ಬಾರಿ ಚರ್ಚೆಯಿಂದ, ಹಲವು ಬಾರಿ ಹೋರಾಟದಿಂದ ಪರಿಹಾರವಾಗುತ್ತವೆ. ಪುರುಷರು ರಚಿಸುತ್ತಿರುವ ಸಾಹಿತ್ಯ ಚರಿತ್ರೆಗಳು ಇಂತಹುದೇ ಬಿಕ್ಕಟ್ಟುಗಳನ್ನು, ವೈರುಧ್ಯಗಳನ್ನು ಒಳಗೊಂಡಿವೆಯಲ್ಲವೇ?



## ಟಿಪ್ಪಣಿಗಳು :

* ಸಂವಾದದ ಸಾಧ್ಯತೆಯನ್ನು ವಿಸ್ತರಿಸುವ ಕಾರಣಕ್ಕಾಗಿ ಈಗಾಗಲೇ ಪ್ರಕಟಗೊಂಡಿರುವ ಕೆಲವು ವಿದ್ವಾಂಸರ ರಚನೆಗಳ ಆಯ್ದ ಭಾಗಗಳನ್ನು ಈ ಅಂಕಣದಲ್ಲಿ ಸೇರಿಸಲಾಗಿದೆ.

# ೧. ಹೊಸಗನ್ನಡದ ಅರುಣೋದಯ

ಶ್ರೀನಿವಾಸ ಹಾವನೂರು

ವಚನಕಾರ್ತಿಯರ ಕಾಲ ಮುಗಿದ ಮೇಲೆ ಚಿಕ್ಕದೇವರಾಜನ ಆಸ್ಥಾನದಲ್ಲಿ ಹೊನ್ನಮ್ಮ, ಶೃಂಗಾರಮ್ಮ ಕಾಣಿಸಿಕೊಂಡರಷ್ಟೆ. ಸ್ತ್ರೀಯರು ದೇವರ ಹಾಡುಗಳನ್ನು ರಚಿಸಿದ ಸ್ಪಷ್ಟ ಪರಂಪರೆಯು ಹದಿನೆಂಟನೆಯ ಶತಮಾನದಿಂದ ಗೋಚರವಾಯಿತೆನ್ನಬಹುದು. ಪುರಂದರದಾಸರ ಮಗಳು, ಮತ್ತೆ ಒಬ್ಬಿಬ್ಬರು ಆಗಿ ಹೋದರೇನೋ ನಿಜ. ಆದರೆ ಆ ಪರಂಪರೆಗೆ ಮೂರ್ತ ಸ್ವರೂಪವನ್ನು ಕೊಟ್ಟವರು ಗಲಗಲಿ ಅವ್ವನವರು (೧೭ನೆಯ ಶತ) ಮತ್ತು ಹೆಳವನಕಟ್ಟೆ ಗಿರಿಯಮ್ಮ (೧೮ನೆಯ ಶತ) ಮುಂದೆ ೧೯ನೆಯ ಶತಮಾನದಲ್ಲಿ ಮಹಿಳಾ ಪದ್ಯ ರಚನೆಯ ವಿಸ್ತಾರವನ್ನು ಕಾಣುತ್ತೇವೆ. ಕವಿಚರಿತಕಾರರು ಅಂಥವರನ್ನು ಉಲ್ಲೇಖಿಸಿದ್ದಾರೆ. ಸರೋಜನಿ ಮಹಿಷಿಯವರು ಇನ್ನು ಕೆಲವು ಕವಯಿತ್ರಿಯರನ್ನು ವಿಶೇಷತಃ ಉತ್ತರ ಕನ್ನಡ ಜಿಲ್ಲೆಯವರನ್ನು ಬೆಳಕಿಗೆ ತಂದಿದ್ದಾರೆ.

ಹಾಡಿನ ರಂಗಮ್ಮ, ಮೇಲುಕೋಟೆ ರಾಜಮ್ಮ ಮತ್ತು ಎಣ್ಣೆಹೊಳೆಕೊಪ್ಪಲಿನ ವೆಂಕಟ ಲಕ್ಷ್ಮಮ್ಮ ಇವರು ಮೈಸೂರಿನ ಒಳಭಾಗದಲ್ಲಿದ್ದವರು. ಅನಂತಪದ್ಮನಾಭನ ಹಾಗೂ ಶ್ರೀಕೃಷ್ಣ ಪಾರಿಜಾತದ ಕಥೆಗಳನ್ನೂ ಅನೇಕ ದೇವರ ನಾಮಗಳನ್ನೂ ಅವರು ರಚಿಸಿದ್ದಾರೆ. ಉಡುಪಿಯ ಕಡೆಯವಳಾದ ವೆಂಕಟಸುಬ್ಬಮ್ಮ ಮತ್ತು ಹಲವರು ಅದೇ ರೀತಿಯಲ್ಲಿ ಹಾಡುಗಳನ್ನು ಹೇಳಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯು ನೀಡಿದ ಕವಯಿತ್ರಿಯರಲ್ಲಿ 'ಸಣ್ಣಭಡತಿ ಗಣಪಕ್ಕ'ನನ್ನು ಮೊದಲಿಗೆ ಹೆಸರಿಸಬೇಕು.[೧] ಭಜನಾದಿ ಕಾರ್ಯಗಳಲ್ಲಿ ತೊಡಗಿದ್ದ ಬಡ ತಂದೆಯ ಮನೆಯಲ್ಲಿ ಗಣಪಕ್ಕ ಬೆಳೆದಳು. ಗೋಕರ್ಣದಲ್ಲಿದ್ದ ಗಂಡನ ಮನೆಯೂ ಬಡತನದ್ದೇ. ಜೊತೆಗೆ ಒಂಭತ್ತು ಮಕ್ಕಳ ಸಂಸಾರವನ್ನು ತೂಗಿಸಿಕೊಂಡು ಆಕೆ ಪದ್ಯ ರಚನೆಗೆ ಮನಸ್ಸುಗೊಟ್ಟುದು ಅಚ್ಚರಿಯುಂಟು ಮಾಡುತ್ತದೆ. ಅವಳ ಕೃತಿಗಳಲ್ಲಿ ಮುಖ್ಯವಾದ 'ಗೋಕರ್ಣ ಮಹಾತ್ಮ್ಯೆ'ಯು ವಿವಿಧ ವೃತ್ತದ, ಹಾಡುಗಳ ಗುಚ್ಛವಾಗಿದೆ. ಇತ್ತ ತನ್ನ ಇಷ್ಟ ದೈವತವಾದ ಶ್ರೀಕೃಷ್ಣನನ್ನು ಕುರಿತು ಹಲವು ಪದಗಳನ್ನೂ ಒಂದು ಯಕ್ಷಗಾನ ಕೃತಿಯನ್ನೂ ರುಕ್ಮಿಣೀ ಪರಿಣಯವನ್ನೂ ಆಕೆ ರಚಿಸಿದ್ದಾಳೆ.

ಇವನ್ನುಳಿದು ಅನಂತನ ವ್ರತಕಥೆ, ಮದುವೆಯ ಕಾಲದ ಪದಗಳು, ತುಳಸಿ ಮಹಾತ್ಮ್ಯ ಇವನ್ನೂ ಕವನಿಸಿದ್ದಾಳೆ.

ಬಾಲವಿಧವೆಯಾಗಿದ್ದ ಪನ್ನಿ **ಲಕ್ಷ್ಮೀಬಾಯಿಯೂ** ಗೋಕರ್ಣದವಳೇ. ಅವಳದೂ ಬಡತನದ ಮನೆತನ. ಪಾರಮಾರ್ಥದ ಕಡೆಗೆ ಮನ ಒಲಿಯಿತಾದ್ದರಿಂದ, ಭಾವಪೂರ್ಣವಾದ ಹಾಡುಗಳನ್ನು ರಚಿಸಿದಳು. ಇವರಿಬ್ಬರ ಹಾಡುಗಳು ಗೋಕರ್ಣ ಮತ್ತು ಸುತ್ತಮುತ್ತಲಿನ ಊರುಗಳಲ್ಲಿ ಪ್ರಚಲಿತವಾಗಿವೆ.

ಭಟಕಳ ಊರಿನ **ನಾದಘರ ಶಾಂತಿಬಾಯಿಯು** ಯೌವನ ಕಾಲದಲ್ಲಿಯೇ ಪತಿ, ಮಗ, ಅಳಿಯ ಇವರನ್ನು ಕಳೆದುಕೊಂಡಳು. ಆಗ ಜೀವನವೇ ನಿಸ್ಸಾರವಾಗಿ ಕಂಡಿತು. ಪುಟ್ಟಯ್ಯನೆಂಬ ಸಾಧುವಿನ ಮೂಲಕ ಪರಮಾರ್ಥ ಸಾಧನೆಯಿಂದ 'ಜೀವನ್ಮುಕ್ತೆ'ಯಾದಳು. ತನ್ನ ಬದುಕಿನ ಕೊನೆಗಾಲದಲ್ಲಿ ದತ್ತಾತ್ರೇಯನ ಗುಡಿಯನ್ನು ಕಟ್ಟಿಸಿದಳು. ಕನ್ನಡ, ಮರಾಠಿ - ಇವೆರಡೂ ಭಾಷೆಗಳಲ್ಲಿ ಅವಳ ಭಕ್ತಿಪರ ಕೀರ್ತನೆಗಳಿವೆ.[೭] 'ಶಾಂತಿ ಪಾಲಿಪ ಗುರು' ಎಂಬುದು ಅವಳ ಅಂಕಿತ. ಪಾಂಡುರಂಗ ವಿಠ್ಠಲನು ಅವಳಿಗೆ ಇಷ್ಟದೈವತವಾಗಿದ್ದುದು ಹಲವು ಪದ್ಯಗಳಲ್ಲಿ ವ್ಯಕ್ತರೂಪವನ್ನು ತಾಳಿದೆ. ಶಾಂತಿಬಾಯಿಯ ಮರಣಾನಂತರ ಅವಳ ಮಗಳು ಈ ಹಾಡುಗಳನ್ನು ಪ್ರಕಟಿಸಿದ್ದಾಳೆ.

ಉತ್ತರ ಕನ್ನಡ ಜಿಲ್ಲೆಯ ಇನ್ನೊಬ್ಬ ಕವಯಿತ್ರಿ **ಕಿಬ್ಬಚ್ಚಲ ಮಂಜಮ್ಮನು** ಹವ್ಯಕ ಸಮಾಜದವಳು. ವೇದಾಂತಿನಿಯಾಗಿ ಆಕೆ ರಚಿಸಿದ ಪದಗಳನ್ನು ಒಂದೆಡೆ ಸಂಕಲಿಸಿ, **ಕರ್ಕಿ ವೆಂಕಟರಮಣ ಶಾಸ್ತ್ರಿಯು** ಮುಂಬಯಿಯಲ್ಲಿ ಪ್ರಕಟಿಸಿದನು (೧೮೮೬ : 'ವೇದಾಂತ ತತ್ವಸಾರ'). ಕಳೆದ ಶತಮಾನದಲ್ಲಿ ಮೊತ್ತಮೊದಲು ಮುದ್ರಣಗೊಂಡ ಮಹಿಳಾ ಸಾಹಿತ್ಯವಿದು. ಧಾರವಾಡ ಜಿಲ್ಲೆಯ ಹೆಬ್ಬಳ್ಳಿ ಊರಿನ ಸುಂದರಾಬಾಯಿ ಹೊರಗಿನವರ ದೃಷ್ಟಿಗೆ ಭಾಗ್ಯವಂತೆ: ತೌರುಮನೆ, ಗಂಡನ ಮನೆ ಎರಡೂ ಜಹಗೀರುದಾರ ಮನೆತನಗಳು. ಮಾವ ಉತ್ತರಾದಿ ಮಠದ ಶ್ರೀ ಸತ್ಯಪರಾಕ್ರಮರು. ಆದರೆ ಸುಂದರಾಬಾಯಿ ಬಾಲವಿಧವೆ. ಮನಸ್ಸು ಭಾಗವತ ಧರ್ಮದತ್ತ ಒಲಿಯಿತು. 'ಶ್ರೀ ವೆಂಕಟೇಶ' ಎಂಬ ಅಂಕಿತದಿಂದ 'ಶ್ರೀಕೃಷ್ಣಜನನ', 'ರುಕ್ಮಿಣೀ ಪರಿಣಯ', 'ರುಕ್ಮಾಂಗದ ಚರಿತ್ರೆ' ಹಾಗೂ 'ಸುಭದ್ರಾ ಕಲ್ಯಾಣ' ಮುಂತಾದ ಕೃತಿಗಳನ್ನು ರೂಪಿಸಿದಳು.[೮] ಅಲ್ಲದೆ ಶುಕ್ರವಾರ - ಶನಿವಾರದ ಹಾಡುಗಳನ್ನೂ ಮುಯ್ಯದ ಹಾಡುಗಳನ್ನೂ ಆಕೆ ರಚಿಸಿದ್ದು, ಅವನ್ನು ಧಾರವಾಡದ ಕಡೆಯ ಹೆಂಗಳೆಯರು ಇಂದಿಗೂ ಹಾಡುವದುಂಟು.

ಮೈಸೂರಿನ ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ಅಧ್ಯಾಪಕಿಯಾಗಿದ್ದ **ಚೆರುಕುಪಲ್ಲಿ ಚೆಲ್ಲಮ್ಮನ** ಕಾವ್ಯದೃಷ್ಟಿಯು ಪರಂಪರೆಯ ನಡೆಯಲ್ಲಿಯೆ ಇದ್ದಿತು. 'ರಾಜಕಳಾನಿಧಿ' ಎಂಬ ಉಪದೇಶದ ಕೃತಿ (೧೮೮೫)ಯೊಂದನ್ನು ಬಿಟ್ಟರೆ ಉಳಿದವುಗಳು ಕೃಷ್ಣ ಮಹಿಮೆಯನ್ನು ಹೇಳುವಂತಹವೇ ಆಗಿವೆ. ಅವಳ 'ರುಕ್ಮಿಣೀ ಪರಿಣಯ'ವು ವಿಸ್ತಾರವಾದ ಷಟ್ಪದೀ ಕಾವ್ಯವಾದರೆ 'ಪಾರಿಜಾತಾಪಹರಣ'ವು ಪದ್ಯ ನಾಟಕ ರೂಪದಲ್ಲಿದೆ. 'ಗೀತಿಕಾ ಲಹರಿ'ಯು ವಿವಿಧ ಹಾಡುಗಳ ಸಂಕಲನವಾಗಿದೆ.

ದೇವರ ವಿಷಯದಲ್ಲಿ ಭಕ್ತಿ, ಶ್ರದ್ಧೆಗಳಿರುವುದು ಸ್ತ್ರೀಯರ ಸಹಜ ಮನೋಧರ್ಮವಾಗಿದೆ. ಹಾಡುಗಾರಿಕೆಯೂ ಅಷ್ಟೇ. ಅವರ ಕೋಮಲ ಭಾವನೆಗಳೊಂದಿಗೆ ಸಂಸಾರ ತಾಪತ್ರಯವು ತಾಕಲಾಡಿತೆಂದರೆ ಅವರಲ್ಲಿ ದೈವಭಕ್ತಿಯು ಬೇಗ ಜಾಗೃತವಾಗುತ್ತದೆ. ವೈಧವ್ಯದಂಥ ಕುತ್ತು ಬಂದರಂತೂ ಸಂಸ್ಕಾರವಂತ ಮಹಿಳೆಯರು ಸಂಪೂರ್ಣವಾಗಿ ದೇವರನ್ನೇ ಮೊರೆಹೋಗುತ್ತಾರೆ. ಹಾಗೆ ಉಕ್ಕಿ ಬಂದ ಭಾವನೆಗಳಿಗೆ ಪದ್ಯ ರಚನೆಯೇ ವಾಹಕವಾಗುತ್ತದೆ.

ಇದುವೆ ಕನ್ನಡ ಕವಯಿತ್ರಿಯರ ಕವನ ರಚನೆಯ ಪ್ರೇರಣೆ. ಅವರು ಶಾಸ್ತ್ರ ವ್ಯಾಸಂಗ ಮಾಡಿದವರಲ್ಲ. ಪೂರ್ವ ಸಂಪ್ರದಾಯ, ಆಸ್ತಿಕ ವಾತಾವರಣ, ಕೀರ್ತನ ಪುರಾಣಗಳ ಶ್ರವಣ, ಮನೆಯಲ್ಲಿ ಗಂಡಸರ ಶಾಸ್ತ್ರಾರ್ಥ ವಿಚಾರ - ಇವೇ ಅವರ 'ಕಾವ್ಯವಿದ್ಯಾಪ್ರಚಯ ಪರಿಚಯ' ಗಳು. ನಿರೂಪಣೆಯ ಸರಳತೆ, ಗೇಯತೆ ಅವರ ಕವಿತೆಗಳ ಪ್ರಧಾನ ಲಕ್ಷಣವಾಗಿವೆ. ನೇರವಾಗಿ ಮನವನ್ನು ಸೆರೆಹಿಡಿಯುವ ಈ ಕವಿತ್ವವು ನಾಡಿನ ಜನಮನದಲ್ಲಿ ಹೂವಿನ ಪರಿಮಳದಂತೆ ಹರಡುತ್ತ ನಡೆಯಿತು. ವಿಶೇಷತಃ ನಾಡ ಮಹಿಳೆಯರ ಬದುಕನ್ನು ಹಸನಗೊಳಿಸಿತು. ಇಂಥ ಕವಯಿತ್ರಿಯರು ಅಜ್ಞಾತರಾಗಿ ಅದೆಷ್ಟು ಜನರಿದ್ದಾರೊ!

●

## ೨. ಅವಳ ಕತೆಗಳು (ಪ್ರಸ್ತಾವನೆ)

**ಜಿ.ಎಸ್. ಆಮೂರ (ಸಂ)**

೧

ಮಹಿಳೆ ಬರೆಯಬಲ್ಲಳೇ ಎಂಬ ಪ್ರಶ್ನೆ ಇಂದು ಹಾಸ್ಯಾಸ್ಪದವಾಗಿ ಕಾಣಬಹುದು. ಆದರ ಈ ಶತಮಾನದ ಪ್ರಾರಂಭದಲ್ಲಿ ಇಂಥ ಪ್ರಶ್ನೆಗಳನ್ನು ಕೂಡ ಅವಳು ಎದುರಿಸಬೇಕಾಯಿತು ಎನ್ನುವುದು ವಾಸ್ತವ ಸತ್ಯ. "ಸ್ತ್ರೀಯರು ಲೇಖನ ಕ್ರಿಯೆಗೆ ಅನರ್ಹರೆಂದೂ, ಸ್ತ್ರೀಯರಿಂದ ಇಂತಹ ಗ್ರಂಥಗಳು ಎಂದಿಗೂ ಬರೆಯಲ್ಪಡಲಾರವೆಂದೂ, ಆರೋ ಸುಶಿಕ್ಷಿತರಾದ ಪುರುಷರೇ ಇದನ್ನೂ ಹೀಗೆ ಸ್ತ್ರೀಕರ್ತೃತ್ವದಲ್ಲಿ ಹೊರಡುವಂತೆ ಗುಪ್ತವಾಗಿದ್ದು ಪ್ರಚರಿಸುತ್ತಿರುವರೆಂದೂ, ಇನ್ನೂ ಪಲವು ಸಂದೇಹಗಳಿಂದ ಹುಚ್ಚು ಹುರುಳಾಗಿ ಹೇಳುತ್ತಿದ್ದಾರೆ...ನಮ್ಮ ಸಮಾಧಾನವಿಷ್ಟೆ: ಸಂಶಯ ರೋಗಕ್ಕೆ ಚಿಕಿತ್ಸೆಯಿಲ್ಲ. ಪ್ರಯತ್ನ ಮತ್ತು ಅಭ್ಯಾಸಗಳಿಗೆ ಅಸಾಧ್ಯವಾದ ಕೆಲಸಗಳು ಪ್ರಾಯಶಃ ಇರಲಾರವು. ಪುರುಷನಿಗೆ ಇರುವಷ್ಟು ಮೇಧಾಶಕ್ತಿ ಪ್ರತಿಭಾ ಸಂಪನ್ನತೆಗಳು ಸ್ತ್ರೀಯರಲ್ಲಿಯೂ ಸ್ವಾಭಾವಿಕ ಗುಣಗಳಾಗಿದ್ದು, ಕೆಲವು ಸಂದರ್ಭಗಳಲ್ಲಿ ಅಧಿಕೃತವಾಗಿಯೇ ಕೌಶಲದಂತೆ ಹೊರಹೊಮ್ಮುವುದೂ ಉಂಟು" ಎಂದು ಹೇಳಿ ಮಹಿಳಾ ಸಾಹಿತ್ಯಕ್ಕೆ ನಾಂದಿ ಇಟ್ಟ ಶ್ರೀಮತಿ ತಿರುಮಲಾಂಬಾ ಸಮರ್ಥವಾಗಿಯೇ ಇಂಥ ಆಕ್ಷೇಪಗಳನ್ನು ತಳ್ಳಿ ಹಾಕಿದರು. ತಿರುಮಲಾಂಬಾ ಅವರ ಕಾದಂಬರಿಗಳನ್ನು ಆ ಕಾಲದಲ್ಲಿ ಮಾಸ್ತಿಯವರು ಸಾಕಷ್ಟು ಕಟು ವಾಗಿಯೇ ಟೀಕಿಸಿದರು. ಆದರೆ ಅವರು ಕೂಡ ಮಹಿಳಾ ಸಾಹಿತ್ಯದ ಸಂದರ್ಭದಲ್ಲಿ

ತಿರುಮಲಾಂಬಾ ಅವರ ವಿಚಾರಗಳನ್ನೇ ಎತ್ತಿ ಹಿಡಿದರು ಎನ್ನುವುದು ಮಹತ್ತ್ವದ್ದಾಗಿದೆ. ೧೯೩೭ರಲ್ಲಿ ದ.ಬಾ. ಕುಲಕರ್ಣಿಯವರು ಸಂಪಾದಿಸಿ ಪ್ರಕಟಿಸಿದ ಪ್ರಥಮ ಮಹಿಳಾ ಕಥಾಸಂಗ್ರಹ ರಂಗವಲ್ಲಿಗೆ ಬರೆದ 'ಮುನ್ನುಡಿ'ಯಲ್ಲಿ ಅವರು ಹೇಳಿದ ಮಾತುಗಳು ಇಂದಿಗೂ ಪ್ರಸ್ತುತವಾಗಿವೆ: "ಸಮಾಜದ ಒಂದರ್ಧವೇ ಹೆಣ್ಣು. ನಮ್ಮ ಸಮಾಜದಂಥ ಸ್ವಲ್ಪ ಹಳೆಯ ವ್ಯವಸ್ಥೆಯ ಸಮಾಜಕ್ಕಂತೂ ಈಗಿನ ಕಾಲದ ದೃಷ್ಟಿಯಿಂದ ಅನೇಕ ಪ್ರಶ್ನೆಗಳು ತಲೆದೋರುತ್ತವೆ.....ಸ್ತ್ರೀಯರ ಬಾಳನ್ನು ಕುರಿತು ಸಮಾಜವು ಇಂದು ಉತ್ತರ ಕೊಡಬೇಕಾಗಿರುವ ನೂರು ಪ್ರಶ್ನೆಗಳನ್ನು ಸುಲಭವಾಗಿ ಪ್ರತಿಪಾದಿಸಬಹುದು...ಹೆಣ್ಣಿನ ಬಾಳನ್ನು ಕುರಿತು...ಹೆಣ್ಣಿನ ಅನುಭವದಿಂದ ಮಾತ್ರ ಹೇಳಬಹುದಾದ ಅಭಿಪ್ರಾಯವಿರುತ್ತದೆ. ಹೆಣ್ಣಿನ ಆ ಅಭಿಪ್ರಾಯವನ್ನು ಸಮಾಜವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ." ಪುರುಷ ಸಂವೇದನೆಗಿಂತ ಭಿನ್ನವಾದ ಮಹಿಳಾ ಸಂವೇದನೆಯೆಂಬುದೊಂದು ಇದೆಯೇ ಎನ್ನುವ ವಿಷಯದಲ್ಲಿ ವಾದಗಳಿವೆ. "ಸ್ತ್ರೀಗೆ ಅವಳದೇ ಆದ ಅನುಭವ ಲೋಕವಿದೆ; ಅವಳಿಗೇ ವಿಶಿಷ್ಟವಾದ-ಪ್ರತ್ಯೇಕವಾದ-ಸಂವೇದನೆಯಿಲ್ಲ..." ಎಂಬ ಯಶವಂತ ಚಿತ್ತಾಲರ ಅಭಿಪ್ರಾಯವನ್ನು ಉದಾಹರಣೆಗೆಂದು ಗಮನಿಸಬಹುದು. ಇದೇನೇ ಇದ್ದರೂ ಮಹಿಳಾ ಸಾಹಿತ್ಯದ ಅನನ್ಯತೆ ಹಾಗೂ ಅನಿವಾರ್ಯತೆ ಗಳು ಪ್ರಶ್ನಾತೀತ ವಾಗಿವೆ. ಇಂದು ಹಲವಾರು ಪ್ರಕಾರಗಳಲ್ಲಿ-ಮುಖ್ಯವಾಗಿ ಕತೆ, ಕಾದಂಬರಿ, ಕಾವ್ಯ, ಹರಟೆಗಳಲ್ಲಿ-ಹರಡಿಕೊಂಡ ಮಹಿಳಾ ಸಾಹಿತ್ಯವನ್ನು ಅವಲೋಕಿಸಿದಾಗ ಈ ಮಾತು ತನ್ನಷ್ಟಕ್ಕೆ ತಾನೇ ಸ್ಪಷ್ಟವಾಗುತ್ತದೆ.

೨

ಮಹಿಳೆ ಹಾಗೂ ಕತೆ ಸಂಬಂಧ ಇಂದು ನಿನ್ನೆಯದಲ್ಲ. ಭಾರತೀಯ ಪರಂಪರೆಯಲ್ಲಿ ಕತೆಗೆ ನಾಟಕಕ್ಕಿದ್ದಂತೆ ದೇವೀ ನೆಲೆಯನ್ನು ಕಲ್ಪಿಸಲಾಗಿದೆ. ವಸುಭಾಗ ಹೇಳುವಂತೆ ಗುಣಾಢ್ಯನ ಬೃಹತ್ಕಥೆಯ ಮೂಲ ಶಿವನಿಂದ ಕತೆ ಕೇಳಬೇಕೆನ್ನುವ ಪಾರ್ವತಿಯ ಇಚ್ಛೆಯಲ್ಲಿದೆ: "ಅಂತಿರ್ದು ಪರಮೇಶ್ವರಂಗೆ ಗಿರಿರಾಜತನುಜೆ ಕರಕಮಲಂಗಳಂ ಮುಗಿದು-ದೇವಾ ನೀವೆನಗಪೂರ್ವಮಪ್ಪ ಕಥೆಯುಂ ಪೇಳಲೇಳ್ಪುದೆನೆ: ಹರಂ ದರಹಸಿತವದನಾರವಿಂದನಾಗಿ ಪಾರ್ವತಿಗಪೂರ್ವಮಪ್ಪ ಕಥೆಗಳಂ ಪೇಳುತ್ತಿರಲು" ಆ ಕಥೆಗಳನ್ನು ಕೇಳಿದ ಗಣಪ್ರಧಾನ ಪುಷ್ಪದಂತನೆಂಬುವನು ಗುಣಾಢ್ಯ ನಾಗಿ ಮಾನವಲೋಕದಲ್ಲಿ ಹುಟ್ಟಿ ಬೃಹತ್ಕಥೆಗಳನ್ನು ಮಾಡಿದನಂತೆ. ಕತೆ ಹೇಳುವುದರಲ್ಲಿಯೂ ಮಹಿಳೆಯದೇ ಮೇಲುಗೈಯಾಗಿತ್ತೆನ್ನುವುದಕ್ಕೆ ಪಂಚತಂತ್ರದ 'ದೇವದತ್ತನೂ ಕುಂಟಣಿಯೂ' ಕತೆಯಲ್ಲಿ ಬರುವ 'ಡಾವರ ಡಾಕಿನಿ' ಸಾಕ್ಷಿಯಾಗಿದ್ದಾಳೆ. 'ನಾನಾ ರೀತಿಯ ಕತೆಗಳನ್ನು ಅತಿಶಯ ವಾಗಿ ಹೇಳುವ ವಿದ್ಯೆ' ಹೊಂದಿದ ಇವಳು ಕತೆ ಹೇಳುವುದಕ್ಕೆ ಒಂದು ಸಾವಿರ ಗದ್ಯಾಣದ ದಕ್ಷಿಣೆ ಕೇಳುತ್ತಿದ್ದಳಂತೆ! ಇಂದಿನ ವಿನಿಮಯ ದರದಲ್ಲಿ ಇದು ಯಾವ ಕತೆಗಾರ್ತಿಯೂ ಹೆಮ್ಮೆ ಪಡಬಹುದಾದ ಮೊತ್ತವಾಗಿದೆ!

ಹೀಗಿದ್ದರೂ ಒಂದು ಗಂಭೀರ ಸಾಹಿತ್ಯಪ್ರಕಾರವೆಂದು ಕತೆ ಕನ್ನಡದಲ್ಲಿ ನೆಲೆಗೊಂಡಿದ್ದು ಇಪ್ಪತ್ತನೆಯ ಶತಮಾನದಲ್ಲಿಯೇ ಎನ್ನುವುದು ನಿರ್ವಿವಾದ. ತಿರುಮಲಾಂಬಾ ಅವರ

ಕಾದಂಬರಿಗಳು ಸಾಮಾಜಿಕವಾಗಿದ್ದರೆ ಕತೆಗಳೆಲ್ಲ ಪೌರಾಣಿಕವಾದವುಗಳು. ೧೯೨೭ರಲ್ಲಿ ಪ್ರಕಟವಾದ ಅವರ ಸಚ್ಚರಿತ ಸುಧಾರ್ಣವದಲ್ಲಿ ರಾಮ, ಪರಶುರಾಮ, ಭೀಷ್ಮ, ಪುರು, ಸುಕನ್ಯೆ, ಶರ್ಮಿಷ್ಠೆ ಹಾಗೂ ಲೋಪಾಮುದ್ರೆಯರನ್ನು ಕುರಿತ ಏಳು ಕತೆಗಳಿವೆ. ಪೌರಾಣಿಕ ವಸ್ತುವೂ ಸಣ್ಣಕತೆಯ ವಸ್ತುವಾಗಬಲ್ಲದೆನ್ನುವುದನ್ನು ಮಾಸ್ತಿಯವರನ್ನು ತೋರಿಸಿಕೊಟ್ಟಿದ್ದಾರೆ. ಆದರೆ ತಿರುಮಲಾಂಬಾ ಅವರ ಕತೆಗಳು ಈ ಪ್ರಕಾರಕ್ಕೆ ಸೇರುವುದಿಲ್ಲ. ಮಾಸ್ತಿಯವರನ್ನು ಸಣ್ಣಕತೆಯ ಜನಕ ಎಂದು ಕರೆದಂತೆ ಅವರನ್ನು ಸಣ್ಣಕತೆಯ ಜನನಿ ಎಂದು ಕರೆಯಲಾಗುವುದಿಲ್ಲ. ಮಹಿಳೆಯರಿಗೆ ಸೀಮಿತವಾಗಿ ಹೇಳುವುದಾದರೆ ಸಣ್ಣಕತೆಯ ಪ್ರಾರಂಭವಾದುದು ಈ ಶತಮಾನದ ಮೂರನೆಯ ದಶಕದಲ್ಲಿ. ಉತ್ತರ ಕರ್ನಾಟಕದಲ್ಲಿ ಶ್ಯಾಮಲಾದೇವಿ ಬೆಳಗಾಂವಕರ, ಕೊಡಗಿನ ಗೌರಮ್ಮ (ಶ್ರೀಮತಿ ಬಿ.ಟಿ.ಜಿ. ಕೃಷ್ಣ) ಹಾಗೂ ದಕ್ಷಿಣ ಕನ್ನಡದ ಸರಸ್ವತೀಬಾಯಿ ರಾಜವಾಡೆ-ಇವರನ್ನು ಈ ಪ್ರಕಾರದ ಆದ್ಯೆಯರು ಎಂದು ಗುರುತಿಸಬೇಕಾಗುತ್ತದೆ. ಮಾಸ್ತಿಯವರಿಗಿಂತ ಮೊದಲು ಸಣ್ಣಕತೆಗಳನ್ನು ಬರೆದವರಿದ್ದಂತೆ ಇವರಿಗಿಂತ ಮೊದಲು ಸಣ್ಣಕತೆಗಳನ್ನು ಬರೆದ ಮಹಿಳೆಯರಿದ್ದಾರೆ. ಆದರೆ ಇವರಲ್ಲಿ ಯಾರೂ ಈ ಮೂವರಷ್ಟು ಮಹತ್ತ್ವದ ಪ್ರಯೋಗಗಳನ್ನು ಮಾಡಲಿಲ್ಲ.

ಕಳೆದ ಆರು ದಶಕಗಳಲ್ಲಿ ಮಹಿಳಾಕಥಾಸಾಹಿತ್ಯಕ್ಕೂ ಒಂದು ಪರಂಪರೆ ನಿರ್ಮಿತವಾಗಿದೆ. ಈ ಪರಂಪರೆಯ ನಾಲ್ಕು ಪೀಳಿಗೆಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಶ್ಯಾಮಲಾ ಬೆಳಗಾಂವಕರ ಮೊದಲಾದ ಮೊದಲನೆಯ ಪೀಳಿಗೆಯ ಲೇಖಕಿಯರು ಎದುರಿಸಿದ ಮುಖ್ಯ ಪ್ರಶ್ನೆಯ ಸ್ವರೂಪ ಸಾಮಾಜಿಕವಾದದ್ದು. ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀ ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಡದೆ ಪತ್ನಿ, ವಿಧವೆ, ವೇಶ್ಯೆ-ಹೀಗೆ ಪುರುಷನ ಸಂಬಂಧದಲ್ಲಿಯೇ ಗುರುತಿಸಲ್ಪಟ್ಟಿದ್ದರಿಂದ ಅವಳಿಗೆ ಸ್ವತಂತ್ರವಾದ ಅಸ್ತಿತ್ವವಾಗಲಿ, ಅದರ ಕಲ್ಪನೆಯಾಗಲಿ ಇರಲಿಲ್ಲ. ಮೊದಲನೆಯ ಪೀಳಿಗೆಯ ಲೇಖಕಿಯರ ಕತೆಗಳಲ್ಲಿ ಬರುವ ಸ್ತ್ರೀಪ್ರತಿಮೆಗಳೆಲ್ಲ ಈ ಅವಸ್ಥೆಯ ಸಂಕೇತಗಳಾಗಿಯೇ ಬರುತ್ತವೆ. ಈ ಸಂಕೇತಗಳನ್ನು ಭಾಷೆಯಲ್ಲಿ ಸೃಷ್ಟಿಸುವ ಕೃತಿಯ ಸ್ವರೂಪವೇ ಮೂಲತಃ ಪ್ರತಿಭಟನಾತ್ಮಕವಾದದ್ದು. ತಾವು ಸಮಾಜದಲ್ಲಿ ಕಂಡು, ಅನುಭವಿಸಿದ ಚಿತ್ರಗಳನ್ನೇ ಈ ಲೇಖಕಿಯರು ಕೊಡುತ್ತಿದ್ದುದರಿಂದ ವಾಸ್ತವಮಾರ್ಗದ ಅನುಸರಣೆ ಅವರಿಗೆ ಅವಶ್ಯವೆನಿಸಿತು. ಮಾಧ್ಯಮದ ಸಾಧ್ಯತೆಗಳ ಬಗ್ಗೆ ಅವರು ವಿಶೇಷ ಲಕ್ಷ್ಯ ಕೊಡದೇ ಹೋದುದರಿಂದ ಅವರ ಕೃತಿಗಳಲ್ಲಿ ಕತೆಗಳು 'ಸಣ್ಣಕತೆಯ' ಸಾಹಿತ್ಯ ಪ್ರಕಾರದ ವೈಶಿಷ್ಟ್ಯ ಸಾಧಿಸಿದ ಉದಾಹರಣೆಗಳು ಕಡಿಮೆ. ಎರಡನೆಯ ಪೀಳಿಗೆಯ ಲೇಖಕಿಯರು ಕಂಡ ಮಹಿಳೆಯರಲ್ಲಿಯೂ ಕೂಡ ಕ್ರಾಂತಿಕಾರಕ ಬದಲಾವಣೆಗಳು ಇರದೇ ಹೋದರೂ ಅವರಲ್ಲಿ ತಮ್ಮ ಅಸ್ಮಿತೆಯ ಅರಿವು ಜಾಗೃತವಾಗಿದ್ದುದರಿಂದ ವ್ಯವಸ್ಥೆಯ ವಿರುದ್ಧ ದನಿ ಎತ್ತುವುದು, ಪ್ರತಿಭಟನೆಯನ್ನು ಕೃತಿಗಿಳಿಸುವುದು ಅವಶ್ಯವೆನಿಸಿತು. ಈ ಪೀಳಿಗೆಯ ಪ್ರಮುಖ ಲೇಖಕಿಯರಾದ ಅನುಪಮಾ ನಿರಂಜನ ಹಾಗೂ ತ್ರಿವೇಣಿಯವರಂಥ ಕತೆಗಾರ್ತಿಯರಲ್ಲಿ ಈ ಬೆಳವಣಿಗೆಯನ್ನು ಕಾಣಬಹುದು. ವೈಜ್ಞಾನಿಕ ತಿಳಿವು ಹಾಗೂ ಮನೋವೈಜ್ಞಾನಿಕ ಒಳನೋಟಗಳನ್ನು ಹೊಂದಿದ

ಈ ಲೇಖಕಿಯರು ಸಣ್ಣಕತೆಯ ಮಾಧ್ಯಮಕ್ಕೆ ಹೊಸ ಆಳ, ವಿಸ್ತಾರಗಳನ್ನು ಒದಗಿಸಿದರು. ಸ್ತ್ರೀಯನ್ನು ಕೇವಲ ಬಲಿಪಶುವನ್ನಾಗಿ ಕಾಣದೆ ಅವಳಲ್ಲಿ ಕರ್ತೃತ್ವ ಶಕ್ತಿಯನ್ನೂ ಗುರುತಿಸುವ ಮೂಲಕ ಅವಳ ಹೊಸ ಪ್ರತಿಮೆಗಳನ್ನು ಸೃಷ್ಟಿಸುವಲ್ಲಿಯೂ ಅವರು ಶಕ್ತರಾದರು. ಅವರ ಕತೆಗಳಲ್ಲಿ ಆಶಾವಾದವೂ ಸೀಮಿತವಾಗಿ ಕಾಣಿಸಿಕೊಂಡಿತು. ಸ್ವಾತಂತ್ರ್ಯೋತ್ತರದ ಕಾಲಖಂಡದಲ್ಲಿ ಬರೆಯ ತೊಡಗಿದ ಲೇಖಕಿಯರು ಬಲವಾದ ತಾತ್ವಿಕ ಆಸ್ಥೆಗಳನ್ನು ಬೆಳೆಸಿಕೊಂಡುದರಿಂದ ಅವರು ಬದುಕಿನ ಸಂಕೀರ್ಣತೆಯನ್ನು ತಮ್ಮ ಕತೆಗಳಲ್ಲಿ ಮೂಡಿಸುವಲ್ಲಿ ಆಸಕ್ತಿ ತೋರಿಸಿದರು. ಈ ತಲೆಮಾರಿನ ಲೇಖಕಿಯರಲ್ಲಿ ಪ್ರಮುಖರಾದ ರಾಜಲಕ್ಷ್ಮೀ, ಎನ್. ರಾವ್ ಹಾಗೂ ವೀಣಾರ ಕತೆಗಳಲ್ಲಿ ನಾವು ನೋಡುವ ಅಂತಮುರ್ಖತೆ ಆತ್ಮಪ್ರಜ್ಞೆ, ದ್ವಂದ್ವಗಳ ಅರಿವು ನವ್ಯ ಮನೋಧರ್ಮದ ಆವಿಷ್ಕಾರಗಳು. ಕತೆಯನ್ನು ಕೇವಲ ಮನೋರಂಜನೆಗಾಗಲಿ, ಸಾಮಾಜಿಕ ಜಾಗೃತಿಗಾಗಲಿ ಬಳಸದೆ ಇವರು ಅದನ್ನು ಸತ್ಯದ ಶೋಧದಂಥ ಗಂಭೀರ ಪ್ರಯತ್ನ ಗಳಲ್ಲಿ ತೊಡಗಿಸಿದರು ಹಾಗೂ ಅದನ್ನು ಒಂದು ಪ್ರಬುದ್ಧ ಸಾಹಿತ್ಯ ಮಾಧ್ಯಮವನ್ನಾಗಿ ಬಳಸಿಕೊಂಡರು. ೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಒಂದಿಲ್ಲೊಂದು ರೀತಿಯಿಂದ ಜಾಗತಿಕ ಸ್ವರೂಪದ ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾದವರು. ಇವರು ಬರೆಯುತ್ತಿರುವ ವೇಳೆಗೆ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಮಹಿಳೆಗೆ ಇಂದು ಎಲ್ಲ ಕಾರ್ಯ ಕ್ಷೇತ್ರಗಳೂ ಮುಕ್ತವಾಗಿವೆಯಲ್ಲದೆ ಶಿಕ್ಷಣದ ಎಲ್ಲ ಪ್ರಕಾರಗಳೂ ಲಭ್ಯವಿದೆ. ಹೀಗಾಗಿ ಅವಳ ಅನುಭವ ಹಿಂದೆ ಎಂದೂ ಇಲ್ಲದ ವ್ಯಾಪ್ತಿ, ವೈವಿಧ್ಯಗಳನ್ನು ಹೊಂದಿದೆ. ಅದರ ಜೊತೆಗೆ ಸಮಾನತೆ, ಸ್ವಾತಂತ್ರ್ಯಗಳು ಹೊಸ ಸಮಸ್ಯೆಗಳಿಗೆ ಹುಟ್ಟು ಹಾಕಿವೆ. ಗಂಡು - ಹೆಣ್ಣಿನ ಸಂಬಂಧಗಳಲ್ಲಿಯೂ ಬಿಕ್ಕಟ್ಟು ತಲೆದೋರಿವೆ. ಪುರುಷ ಕೇಂದ್ರಿತ ವ್ಯವಸ್ಥೆಯ ಅಂಗಗಳಾದ ಅವಿಭಕ್ತ ಕುಟುಂಬ ಹಾಗೂ ವಿವಾಹಗಳಂಥ ಸಂಸ್ಥೆಗಳು ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ. ಆದರೆ, ಸಾಮಾಜಿಕ ಧೋರಣೆಗಳಲ್ಲಿ ಬದಲಾವಣೆಯಾಗಿದ್ದರೂ ಮನೋಧರ್ಮಗಳಲ್ಲಿ ಸಾಂಪ್ರದಾಯಿಕ ಜಾಡ್ಯ ಇನ್ನೂ ಉಳಿದುಕೊಂಡಿರುವುದರಿಂದ ಘರ್ಷಣೆಗಳು ನಡೆಯುತ್ತಲೇ ಇವೆ. ವೈದೇಹಿ, ಸಾರಾ ಅಬೂಬಕ್ಕರ್, ನೇಮಿಚಂದ್ರರಂಥ ಹೊಸ ತಲೆಮಾರಿನ ಲೇಖಕಿಯರಿಗೆ ತಮ್ಮ ಪರಿಸರದ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಸ್ವರೂಪದ ಅರಿವಿರುವುದರಿಂದ ಅವರು ಬರೆಯುತ್ತಿರುವ ಕತೆಗಳು ಮೊದಲಿನವರ ಕತೆಗಳಿಗಿಂತ ಭಿನ್ನವಾಗಿವೆ. ಸಮಾಜದ ಎಲ್ಲ ಸ್ತರಗಳಿಂದಲೂ ಲೇಖಕಿಯರು ಎದ್ದು ಬರುತ್ತಿರುವದರಿಂದ ಸಂಸ್ಕೃತಿಯ ಬೇರೆ ಬೇರೆ ಮುಖಗಳು ಭಾಷೆಯಲ್ಲಿ ಒಡಮೂಡುತ್ತಿವೆ. ಕನ್ನಡದ ಸಣ್ಣಕತೆಯ ಭವಿಷ್ಯದ ದೃಷ್ಟಿಯಿಂದ ಇವೆಲ್ಲ ಒಳ್ಳೆಯ ಚಿಹ್ನೆಗಳು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

ಪೋಷಕ ವಿಮರ್ಶೆಯ ಅಭಾವ ಮಹಿಳಾಸಾಹಿತ್ಯದ ಆರೋಗ್ಯಕರ ಬೆಳವಣಿಗೆಗೆ ಮಾರಕ ವಾಗಿದೆ ಎಂಬ ಮಾತೊಂದಿದೆ. ಮಹಿಳೆಯರು ಬರೆದ ಕತೆಗಳು ಗಂಭೀರವಾದ ವಿಮರ್ಶೆಗೆ ಒಳಗಾಗಿಲ್ಲ ಎನ್ನುವುದನ್ನು ಒಪ್ಪಿಕೊಳ್ಳಲೇಬೇಕು. ಆದರೆ ಮೊದಲಿನಿಂದಲೂ ಉದಯೋನ್ಮುಖ ಕತೆಗಾರ್ತಿಯರಿಗೆ ಹಿರಿಯ ಸಾಹಿತಿಗಳಿಂದ ಪ್ರೋತ್ಸಾಹ ಹಾಗೂ ತಕ್ಕಮಟ್ಟಿನ ಮಾರ್ಗದರ್ಶನ

ದೊರೆಯುತ್ತಲೇ ಬಂದಿವೆ ಎನ್ನುವ ಮಾತೂ ಅಷ್ಟೇ ನಿಜವಾದದ್ದು. ಒಂದೆರಡು ಉದಾಹರಣೆಗಳಿಂದ ಈ ಮಾತನ್ನು ಸ್ಪಷ್ಟಪಡಿಸಬಹುದು. ಮೊಟ್ಟಮೊದಲ ಮಹಿಳಾ ಕಥಾಸಂಗ್ರಹ ರಂಗವಲ್ಲಿಗೆ(ಇದರ ಮೊದಲ ಕಥೆಯೇ ಗೌರಮ್ಮನದಾಗಿತ್ತು) ಬಂದ ಪ್ರತಿಕ್ರಿಯೆ (ಅಥವಾ ಅದರ ಅಭಾವ) ಗೌರಮ್ಮ ಅವರ ನಿರಾಶೆಗೆ ಕಾರಣವಾಗಿತ್ತು: "ಇದು ಹೆಣ್ಣು ಮಕ್ಕಳ ಕೃತಿ - ಎಂಬ ಪೊಳ್ಳು ಸಹಾನುಭೂತಿಯ ಹೊರೆಯನ್ನು ನಾವೆಷ್ಟು ದಿನ ಹೊತ್ತಿರಬೇಕು? ಇದರಿಂದ ಗಂಡಸರು ನಮ್ಮ ಸಾಹಿತ್ಯವನ್ನು ತೃಪ್ತಿದಾಯಕವಾಗಿ ಒಪ್ಪಿದಂತಾಯಿತೇ? ಅವರು ನಮ್ಮ ಸಾಹಿತ್ಯವನ್ನು ಗಂಡಸರು ಬರೆಯುವ ಸಾಹಿತ್ಯವನ್ನು ನೋಡುವ ದೃಷ್ಟಿಯಲ್ಲೊಮ್ಮೆ ನೋಡಲಿ - ಇಲ್ಲ ನೋಡಲಾರರು. ಎಂತಲೇ ನಿರ್ಭಾಗ್ಯ ರಂಗವಲ್ಲಿಯ ಅದೃಷ್ಟಕ್ಕೆ ಒಂದು ಸರಿಯಾದ ವಿಮರ್ಶೆ ಬರೆಯುವ ಪುಣ್ಯಾತ್ಮರೂ ಇಲ್ಲ." ದುರ್ದೈವದಿಂದ ಅವರ ಪ್ರಥಮ ಕಥಾಸಂಕಲನ ಕಂಬನಿ ಹೊರಬರುವ ಮೊದಲೇ ಅವರು ತೀರಿಹೋದುದರಿಂದ ಈ ಪುಸ್ತಕಕ್ಕೆ ದ.ರಾ. ಬೇಂದ್ರೆಯವರು ಬರೆದ ಉತ್ಕೃಷ್ಟ 'ಮುನ್ನುಡಿ'ಯನ್ನು ನೋಡುವ ಸಂತೋಷದಿಂದ ಅವರು ವಂಚಿತರಾದರು. ಕೆಲವೇ ವಾಕ್ಯಗಳಲ್ಲಿ ಬೇಂದ್ರೆಯವರು ಈ 'ಕಟುಮಧುರ' ಕತೆಗಾರ್ತಿಯ ವೈಶಿಷ್ಟ್ಯವನ್ನು ನಿಖರವಾಗಿ ಗುರುತಿಸಿಬಿಟ್ಟರು: "ಕತೆಗಳಲ್ಲಿ ಕಟುತ್ವವಿದ್ದರೂ ರೊಚ್ಚಿಲ್ಲ; ಸೋದ್ದೇಶಲೇಖನದ ಸೂಚನೆಯಿದ್ದರೂ ಅವಾಸ್ತವ ಆರ್ಭಟೆಯಿಲ್ಲ; ಕಲೆಯ ನೈಜವನ್ನು ಮರೆಮಾಚಿಲ್ಲ - ಎಲ್ಲೊಲ್ಲೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾಗುಚ್ಛವು 'ಶ್ರೀನಿವಾಸ' 'ಆನಂದ'ರ ಕಥೆಗಳನ್ನು ಓದಿದ ವಾಚಕರಿಗೆ ಮನೋವಿಶ್ಲೇಷಣಾತ್ಮಕ ಕತೆಗಳ ಮಾದರಿಯಾಗಿ ಹೃದಯಂಗಮವಾಗುವುದೆಂದು ನಾನು ನಂಬಿದ್ದೇನೆ." ಗೌರಮ್ಮ ಹಾಗೂ ಶ್ಯಾಮಲಾದೇವಿಯವರ ನಂತರದ ಪೀಳಿಗೆಯ ಮುಂಚೂಣಿಯಲ್ಲಿದ್ದ ಅನುಪಮಾ ಅವರಿಗೂ ಇದೇ ರೀತಿಯ ವಿಮರ್ಶಾತ್ಮಕ ಪ್ರೋತ್ಸಾಹ ಚದುರಂಗರಿಂದ ದೊರೆಯಿತು. ಅನುಪಮಾ ತಮ್ಮ ಹಿಂದಿನ ಲೇಖಕಿಯರಿಗಿಂತ ಯಾವ ರೀತಿಯಲ್ಲಿ ಭಿನ್ನರಾಗಿದ್ದಾರೆ ಎನ್ನುವುದರ ಮಾರ್ಮಿಕ ವಿವರಣೆ ಅವರು ಅನುಪಮಾ ಅವರ ಪ್ರಥಮ ಸಂಕಲನ ಕಣ್ಮಣಿಗಾಗಿ ಬರೆದ 'ಮುನ್ನುಡಿ' ಯಲ್ಲಿದೆ: "ಹಿಂದಿನ ಲೇಖಕಿಯರು ಈ ಪುರುಷ ಸಮಾಜದಲ್ಲಿ ಹೆಣ್ಣಿಗೆ ನಡೆಯುವ ಅಪಚಾರ, ಅನ್ಯಾಯಗಳನ್ನು ಚಿತ್ರಿಸಿದರೂ ಹೆಣ್ಣಿನ ದುರಂತದ ನೈಜ ಕಾರಣವನ್ನು ಅರಿಯಲಾರದೆ ಹೋದರು. ಹೆಣ್ಣಿನ ಬಾಳು ಕಣ್ಣೀರು ಎಂಬ ಅರಿವೇನೋ ಅವರಿಗಿದೆ. ಆದರೆ ಆ ಕಣ್ಣೀರಿಗೆ ಕಾರಣ ನಿಜವಾಗಿಯೂ ಎಲ್ಲಿದೆ, ಅದಕ್ಕೆ ಪರಿಹಾರವೇನು? ಎಂದರೆ, ಇವರ ಕತೆಗಳಲ್ಲಿ ಉತ್ತರವಿಲ್ಲ. ಅನುಪಮಾದೇವಿ ಈ ಸಮಸ್ಯೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ನಮ್ಮ ಸಮಾಜದ ಆರ್ಥಿಕ ವಿಷಮತೆಯ ಗರ್ಭದಲ್ಲಿ ಹುದುಗಿ ಹೋದ ಇದರ ಎಳೆಗಳನ್ನು ಸೂಕ್ಷ್ಮವಾಗಿ ಶೋಧಿಸಿ ನೋಡಿದ್ದಾರೆ. ಇದು ಪಾಳೆಯಗಾರ ಪದ್ಧತಿಯ ಶೃಂಖಲೆಗಳಲ್ಲಿ ಸಿಕ್ಕು ತೊಳಲುತ್ತಿರುವ ಸಮಾಜ; ಈ ಪದ್ಧತಿಯನ್ನು ನಾಶಪಡಿಸಿದ ಹೊರತು ಹೆಣ್ಣಿಗೆ ಮುಕ್ತಿಯಿಲ್ಲ; ಅವಳ ಬಾಳು ಸಹಜವಾಗಿ ಅರಳಿ ತನ್ನ ಪರಿಮಳವನ್ನು ನಾಲ್ಕು ಕಡೆಗೆ ನವುರಾಗಿ ಬೀರುವುದಿಲ್ಲ - ಎಂದು ಮನಗಂಡಿದ್ದಾರೆ." ಇಲ್ಲಿ ಚದುರಂಗರು ಅನುಪಮಾ ಅವರ ಕತೆಗಳ

ವೈಶಿಷ್ಟ್ಯವನ್ನು ಗುರುತಿಸುವುದರ ಜೊತೆಗೆಯೇ ಅವುಗಳನ್ನು ವ್ಯಾಖ್ಯಾನಿಸುವುದಕ್ಕೆ ಹೊಸ ತಾತ್ವಿಕ ಚೌಕಟ್ಟನ್ನೂ ಒದಗಿಸಿದ್ದಾರೆ. ಮಹಿಳೆಯರ ಕತೆಗಳಿಗೆ ಇನ್ನೊಂದು ಮಹತ್ವದ ತಿರುವು ದೊರಕಿದ್ದು ವೀಣಾ ಅವರ ಕೃತಿಗಳಲ್ಲಿ. ಅವರ ಪ್ರಪ್ರಥಮ ಕಥಾಸಂಕಲನ ಮುಳ್ಳುಗಳು ಪುಸ್ತಕಕ್ಕೆ ಬರೆದ ಟಿಪ್ಪಣಿಯಲ್ಲಿ ಶಾಂತಿನಾಥ ದೇಸಾಯಿಯವರು ಈ ತಿರುವಿನ ಲಕ್ಷಣಗಳನ್ನು ಅತ್ಯಂತ ಸಮರ್ಪಕವಾಗಿ ಗುರುತಿಸಿದರು. "ಈ ಕತೆಗಳಲ್ಲಿ ವಿಮರ್ಶಕನ ಕುತೂಹಲವನ್ನೂ, ಕಾಳಜಿಯನ್ನೂ ಕೆರಳಿಸುವ ವಿಷಯವೆಂದರೆ ಅವುಗಳಲ್ಲಿಯ ಕಥನಕಲೆಯ ಸ್ವರೂಪ ಮತ್ತು ಅಭಿವ್ಯಕ್ತಿಯ ರೀತಿ." ವೀಣಾ ಅವರ ಕತೆಗಳಲ್ಲಿ ಕಾಣಿಸಿಕೊಂಡ ನವ್ಯತೆ, ಒಂದು ಕೇಂದ್ರ ಪ್ರತಿಮೆಯ ಸುತ್ತ ಕತೆ ಹೆಣೆಯುವ ಕಲೆ, ಅನುಭವವನ್ನು ಎದುರಿಸುವ ದಿಟ್ಟತನ, ತೀಕ್ಷ್ಣ ಕಲಾಪ್ರಜ್ಞೆ ಭಾಷೆಯ ಮೇಲಿನ ಸಹಜ ಪ್ರಭುತ್ವ ಇವುಗಳತ್ತ ಓದುಗರ ಲಕ್ಷ್ಯ ಎಳೆಯುವ ಮೂಲಕ ದೇಸಾಯಿಯವರು ಓದಿಗೆ ಅನುಕೂಲತೆಗಳನ್ನೊದಗಿಸಿದರು. ವೀಣಾ ಅವರ ಹೆಸರನ್ನು ರಾಜಲಕ್ಷ್ಮೀ ಎನ್.ರಾವ್ ಅವರ ಹೆಸರಿಗೆ ಜೋಡಿಸಿದ್ದೂ ಅರ್ಥಪೂರ್ಣವಾಗಿತ್ತು. ನಾವು ಕೊಡಬಯಸುವ ಕೊನೆಯ ಉದಾಹರಣೆ ಬರಗೂರು ರಾಮಚಂದ್ರಪ್ಪನವರು ಲಲಿತಾ ನಾಯಕ್ ಅವರ ಹಬ್ಬ ಮತ್ತು ಬಲಿಗೆ ಬರೆದ 'ಮುನ್ನುಡಿ'. ಈ 'ಮುನ್ನುಡಿ' ಲಲಿತಾರ ಕತೆಗಳ ಸಾಮಾಜಿಕ ಸಂಗತಿಗಳೇ ಇಲ್ಲಿ ಪ್ರಮುಖವಾಗುತ್ತವೆ. ಕತೆಯ ಒಡಲಲ್ಲಿ ತೀರಾ ಅನಿವಾರ್ಯವಾದಾಗ ಮಾತ್ರ ಸಾಂಸ್ಕೃತಿಕ ವಿವರಗಳು ಹಾಸುಹೊಕ್ಕಾಗಿ ಬರುತ್ತವೆ. ಲಲಿತಾ ನಾಯಕರ ಕತೆಗಳ ಈ ವಿನ್ಯಾಸಕ್ಕೆ ಕಾರಣವಿದೆ. ಅವರಿಗೆ ಲಂಬಾಣಿ ಸಂಸ್ಕೃತಿಯೆಂಬುದು ವೈಭವೀಕರಣದ ವಸ್ತುವಲ್ಲ. ಜೊತೆಗೆ ಅವರ ಸಾಮಾಜಿಕ ಪ್ರಜ್ಞೆ ಈ ಸಂಸ್ಕೃತಿಯಲ್ಲಿ ಅಂತರ್ಗತವಾದ, ಇಡೀ ಸಮಾಜವಲ್ಲಿ ಕಾಣಿಸಿಗುವಂಥ ವಸ್ತುಸಂಗತಿಗಳನ್ನು ಹುಡುಕುತ್ತದೆ." ಲಲಿತಾ ನಾಯಕರ ಹಾಗೂ ಅವರ ಸಮಕಾಲೀನರ ಕತೆಗಳ ವೈಶಿಷ್ಟ್ಯಗಳಾದ ಖಚಿತ ಹಾಗೂ ಬಹಳಷ್ಟು ಮಟ್ಟಿಗೆ ಅಪರಿಚಿತ ಸಾಮಾಜಿಕ ಹಿನ್ನೆಲೆ ಹಾಗೂ ಅನುಭವದ ಸಾಮಾನ್ಯೀಕರಣಗಳನ್ನು ಗುರುತಿಸುವ ಮೂಲಕ ಸಾಂಸ್ಕೃತಿಕ ವಿಮರ್ಶೆ ನಡೆಯಬೇಕಾದ ದಾರಿಯನ್ನು ಬರಗೂರರು ಸೂಕ್ಷ್ಮವಾಗಿ ಸೂಚಿಸಿದ್ದಾರೆ.

ಈ ಸಂದರ್ಭದಲ್ಲಿ ನಾವು ಅವಶ್ಯವಾಗಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ ಕಾಲಕಾಲಕ್ಕೆ ಸಂಪಾದಕ-ಪ್ರಕಾಶಕರು ಹೊರತಂದ ಪ್ರಾತಿನಿಧಿಕ ಕಥಾಸಂಕಲನಗಳಿಂದ ಮಹಿಳಾ ಕಥಾಸಾಹಿತ್ಯಕ್ಕೆ ದೊರೆತ ಚಾಲನೆ. ಈ ದಿಕ್ಕಿನಲ್ಲಿ ಧಾರವಾಡದ ಮನೋಹರ ಗ್ರಂಥ ಭಂಡಾರದವರು ೧೯೩೭ರಲ್ಲಿ ಪ್ರಕಟಿಸಿದ ರಂಗವಲ್ಲಿಗೆ ಐತಿಹಾಸಿಕ ಮಹತ್ವವಿದೆ. "ಈ ಸಂಗ್ರಹ ಕಾರ್ಯದ ಅನುಭವದಿಂದ ಹೆಣ್ಣು ಮಕ್ಕಳ ಸಾಹಿತ್ಯಕ್ಕೆ ಸಹಾನುಭೂತಿಯ ಪ್ರೋತ್ಸಾಹವು ದೊರೆತರೆ ಕನ್ನಡ ಸರಸ್ವತಿಯ ಅಲಂಕಾರಗಳು ಇಮ್ಮಡಿಯಾಗಬಹುದೆಂದು ನಮ್ಮ ಅನಿಸಿಕೆ" ಎಂಬ ಸಂಪಾದಕರ ಹೇಳಿಕೆಯಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಈ ಸಂಗ್ರಹ ಬೆಳಕಿಗೆ ತಂದ ಕತೆಗಾರ್ತಿಯರಲ್ಲಿ ಕೊಡಗಿನ ಗೌರಮ್ಮ, ಶ್ಯಾಮಲಾದೇವಿ ಬೆಳಗಾಂವಕರ್, ವಾಸಂತಿ ಬಾಯಿ ಪಡುಕೋಣೆ ಪ್ರಮುಖರಾಗಿದ್ದಾರೆ. ಮೆಚ್ಚಲೇಬೇಕಾದ ಒಂದು ಅಂಶವೆಂದರೆ ಇಲ್ಲಿ ಸಂಪಾದಕರು ಕತೆಗಾರರ ಬಗ್ಗೆ ಹೇಳಿದ ಮಾತುಗಳಲ್ಲಿ ಕಂಡುಬರುವ ಪ್ರಖರ ವಸ್ತುನಿಷ್ಠತೆ.

ಜಯಲಕ್ಷ್ಮಿ ಅವರ ಕತೆಗಳಲ್ಲಿ 'ಕಾದಂಬರಿಯಲ್ಲಿಯಂತೆ ವರ್ಣನೆಗಳು ಹೆಚ್ಚು', ವಾಸಂತಿ ಬಾಯಿ ಪಡುಕೋಣೆಯವರು 'ವಿಚಾರಗಳನ್ನು ಮಂಡಿಸುವುದು ಹಟವೆಂದು ತಿಳಿದಿದ್ದಾರೆ', ಅಥವಾ ಗೌರಮ್ಮನವರ ಕತೆಗಳಲ್ಲಿ ವ್ಯಂಗ್ಯ, ವಿನೋದ, ಸ್ವಭಾವ ವೈಶಿಷ್ಟ್ಯ ಹಾಗೂ ಉಚ್ಚ ವಿಚಾರಗಳಿಲ್ಲ' - ಇಂಥ ಹೇಳಿಕೆಗಳಲ್ಲಿ ಈ ವಸ್ತುನಿಷ್ಠತೆ ಎದ್ದು ಕಾಣುತ್ತದೆ. ಸ್ವತಃ ಒಳ್ಳೆಯ ಕತೆಗಾರರಾಗಿದ್ದ ದ.ಬಾ. ಕುಲಕರ್ಣಿಯವರ ಸಂಪಾದನಾಕಾರ್ಯ ಉತ್ತಮ ಮಟ್ಟದ್ದು. ರಂಗವಲ್ಲಿ ಉತ್ತರ ಕರ್ನಾಟಕದ ಸಾಹಸವಾದರೆ, ೧೯೫೦-೫೧ರ ಸುಮಾರಿಗೆ ಹೊರಬಂದ **ಹೆಂಗಸರು ಕತೆಗಳು** ದಕ್ಷಿಣ ಕನ್ನಡದ ಕೊಡುಗೆಯಾಗಿದೆ. ಈ ಸಂಗ್ರಹದ ಎಲ್ಲ ಕತೆಗಳು ಮೊದಲೇ 'ಅಂತರಂಗ' ಪತ್ರಿಕೆಯಲ್ಲಿ ಪ್ರಕಟವಾದವುಗಳು. ಇವುಗಳಲ್ಲಿ ಬಹುಪಾಲು ವಾಸಂತಿಬಾಯಿ ಪಡುಕೋಣೆಯವರು ಬರೆದವುಗಳು. ರಂಗವಲ್ಲಿಗೆ ಹೋಲಿಸಿದರೆ ಇಲ್ಲಿಯ ಕತೆಗಳು ಅಷ್ಟು ಆಕರ್ಷಕವಲ್ಲ. ಈ ಮಾತಿಗೆ ಕೆ. ದೇವಕಿಯವರ 'ಜಾತೀಭೂತಕ್ಕೆ ಬಲಿ'ಯೊಂದೇ ಅಪವಾದವಾಗಿದೆ. ಈ ಕತೆಯಲ್ಲಿ ಮೂಡಿ ಬಂದ ಕತೆಗಾರಿಕೆಯ ಪುರೋಗಾಮಿ ದೃಷ್ಟಿ ಬೆರಗು ಗೊಳಿಸುವಂಥದು. ಈ ಸಂಗ್ರಹದಲ್ಲಿ ಸಂಪಾದಕರು ಅದೃಶ್ಯವಾಗಿಯೇ ಕಾರ್ಯನಿರ್ವಹಿಸಿದ್ದಾರೆ. ಈ ಯಾವ ಸಂಗ್ರಹಗಳಿಗಿಲ್ಲದ ಮಹತ್ವಾಕಾಂಕ್ಷೆ ಸೂರ್ಯನಾರಾಯಣ ಚಡಗರು ಸಂಪಾದಿಸಿದ ಕಾಮಧೇನು (೧೯೬೯) ವಾಗಿದೆ. ಕನ್ನಡ ಲೇಖಕಿಯರ ನೂರೈದು ಪ್ರಾತಿನಿಧಿಕ ಕಥೆಗಳ ಈ ಬೃಹತ್ ಸಂಕಲನ ವಿಶ್ವದಲ್ಲಿಯೇ ಪ್ರಥಮ ಪ್ರಯತ್ನವೆಂದು ಚಡಗರು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಈ ಸಂಕಲನದ ವೈಶಿಷ್ಟವೆಂದರೆ ಕೆಲವೊಂದು ಅಪವಾದಗಳನ್ನು ಬಿಟ್ಟರೆ ಎಲ್ಲ ಕತೆಗಳೂ ಈ ಸಂಕಲನಕ್ಕಾಗಿಯೇ ಬರೆದವುಗಳು. "'ಕಥೆ' ಎನಿಸಿಕೊಳ್ಳುವ ಅರ್ಹ ಲಕ್ಷಣಗಳಿರುವ ಕಥೆಗಳನ್ನು ಆಯ್ಕೆ ಮಾಡಲಾಗಿದೆ" ಎಂಬ ಚಡಗರ ಹೇಳಿಕೆಯ ಹಿಂದಿನ ಎಚ್ಚರ ಮೆಚ್ಚುವಂಥದಾದರೂ ಅವರು ಸಂಗ್ರಹಿದ ಬಹಳಷ್ಟು ಕತೆಗಳ ಮಟ್ಟಿಗೆ ಉದಾರಿ ಗಳಾಗಿದ್ದಾರೆ ಎಂದೇ ಹೇಳಬೇಕು. ಗೌರಮ್ಮನಿಂದ ವೈದೇಹಿಯವರೆಗೆ ಈ ಸಂಗ್ರಹದ ಹರವಿದೆ. ಒಂದು ಖಾಸಗೀ ಪ್ರಕಾಶನ ಸಂಸ್ಥೆಯ ಸಾಹಸವೆಂದು ಕಾಮಧೇನುವಿಗೆ ವಿಶೇಷವಾದ ಸ್ಥಾನವಿದೆ. ಕಾಮಧೇನು ಪ್ರಕಟವಾಗಿ ಹದಿನೈದು ವರ್ಷಗಳ ನಂತರ ಕರ್ನಾಟಕ ಸರಕಾರಕ್ಕಾಗಿ ಡಾ.ವೀಣಾ ಶಾಂತೇಶ್ವರ ಅವರು ಸಂಪಾದಿಸಿದ **ಲೇಖಕಿಯರ ಕಥಾ ಸಂಕಲನ** ಹೊರಬಂದಿತು. ಇದರಲ್ಲಿ ಒಟ್ಟು ಎಪ್ಪತ್ತೊಮ್ಮರು ಕತೆಗಳಿವೆ. ವೀಣಾರ ಮೇಲಿನ ಒತ್ತಡಗಳೇನಿದ್ದವೊ ತಿಳಿಯುವಂತಿಲ್ಲ. ಆದರೆ ಒಂದು ರೀತಿಯ ನಿರ್ಲಿಪ್ತತೆಯಿಂದಲೇ ಅವರು ತಮ್ಮ ಹೊಣೆಯನ್ನು ನಿರ್ವಹಿಸಿದ್ದಾರೆ. ಈ ಸಂಕಲನದ ಆಕರ್ಷಕ ಭಾಗ ವೀಣಾರ 'ಮುನ್ನುಡಿ'ಯೇ ಆಗಿದೆ. ಕತೆಗಾರ್ತಿಯರ ಸಾಧನೆ ಗಳನ್ನು ಅವರು ಅತ್ಯಂತ ನಿಷ್ಠುರವಾಗಿ ಅಳೆದಿದ್ದಾರೆ. ಲೇಖಕಿಯರು ಸ್ವವಿಮರ್ಶೆಯ ಕಲೆಯನ್ನು ಬೆಳೆಸಿಕೊಳ್ಳಬೇಕು ಎಂದು ಅವರು ಹೇಳಿರುವುದು ಎಷ್ಟು ಸೂಕ್ತವಾಗಿದೆಯೆನ್ನುವುದನ್ನು ಇಲ್ಲಿರುವ ಕತೆಗಳೇ ಸಮರ್ಥಿಸುತ್ತವೆ. ವಸ್ತುವಿನ ದೃಷ್ಟಿಯಿಂದ ಕತೆಗಳನ್ನು ವಿಂಗಡಿಸಿರುವುದರ ಸಮರ್ಪ ಕತೆಯೂ ಪ್ರಶ್ನಾತೀತವಲ್ಲ. ಲೇಖಕಿಯರ ಸಂಘ ೧೯೮೩ರಲ್ಲಿ ಪ್ರಕಟಿಸಿದ ಕಥಾಸೌರಭ ಹಾಗೂ ಜ್ಯೋತಿನಿವಾಸ ಕಾಲೇಜಿನವರು ೧೯೯೦ರಲ್ಲಿ ಹೊರತಂದ ಬೆಳ್ಳಿಬಾಗಿನ ಸಂಕಲನಗಳನ್ನೂ

ಇದೇ ಸಂದರ್ಭದಲ್ಲಿ ಗಮನಿಸಬಹುದು. ಕಥಾ ಸೌರಭದಲ್ಲಿ ಪ್ರಸಿದ್ಧ ಹಾಗೂ ಜನಪ್ರಿಯ ಲೇಖಕಿಯರ ಕತೆಗಳ ಜೊತೆಗೆ ಮೂವರು ಉದಯೋನ್ಮುಖ ಕತೆಗಾರ್ತಿಯರ ಕತೆಗಳಿರುವುದು ಒಂದು ವೈಶಿಷ್ಟ್ಯವಾಗಿದೆ. ಡಾ. ಕಮಲಮ್ಮ ಸಂಪಾದಿಸಿದ **ಬೆಳ್ಳಿ ಬಾಗಿನ** ಒಂದು ಒಳ್ಳೆಯ ಸಂಕಲನ. ಇದರಲ್ಲಿ ಒಟ್ಟು ಹನ್ನೆರಡು ಕತೆಗಳಿವೆ. "ಶತಮಾನಗಳಿಂದ ಮಹಿಳೆಯರು ಅನುಭವಿಸಿದ ಯಾತನೆಯ ಎಳೆಗಳನ್ನು ಇಲ್ಲಿಯ ಕಥೆಗಳು ಧ್ವನಿಸುತ್ತವೆ" ಎಂದು ಹೇಳಿ ಕಮಲಮ್ಮ ತಮ್ಮ ಆಯ್ಕೆಯ ಹಿಂದಿನ ಸೂತ್ರವನ್ನು ಸೂಚಿಸಿದ್ದಾರೆ.

●

ಗ್ರಹಿಕೆ

## ಶಾಸ್ತ್ರ ಅವರಿಗಿರಲಿ, ಕಲೆ ನಮಗಿರಲಿ.....

ಎಂ. ಉಷಾ

**ಸಾ**ಹಿತ್ಯದ ವಿಭಜನಾಕ್ರಮವು ಸಾಹಿತ್ಯೇತರ ನೆಲೆಯಿಂದ ಹೊರಟದ್ದಾಗಿರಬಹುದೇ ಎಂಬ ಚರ್ಚೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇಂದು ನೆನ್ನೆಯದೇನಲ್ಲ. ಈ ಚರ್ಚೆ ಆರಂಭ ಗೊಂಡದ್ದು ಸಾಹಿತ್ಯ ಚರಿತ್ರೆಗಳ ನಿರ್ಮಾಣದ ಹಂತದಲ್ಲಿ. ಸಾವಿರ ವರ್ಷದ ಹರವಿನಲ್ಲಿ ಹರಡಿದ ಸಾವಿರಕ್ಕೂ ಮಿಕ್ಕ ಕೃತಿಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಹೇಗೆ ಓರಣಗೊಳಿಸ ಬೇಕೆಂಬ ಮಹತ್ವಾಕಾಂಕ್ಷೆಯಲ್ಲಿ. ಇದನ್ನನುಸರಿಸಿ ಧರ್ಮಾಧಾರಿತ, ಪ್ರಕಾರಾಧಾರಿತ, ಪ್ರಧಾನ ಕವಿ ಆಧಾರಿತ ಹೀಗೆ ನಾಲ್ಕಾರು ವಿಭಜನಾಕ್ರಮಗಳು ಚರ್ಚೆಯ ಕಣಕ್ಕೆ ಬಂದಿವೆ. ಇದು ಮೇಲುನೋಟಕ್ಕೆ ಕಂಡು ಬರುವ ಅಂಶ. ವಾಸ್ತವದಲ್ಲಿಯಾದರೆ ಸಾಹಿತ್ಯದ ವಿಭಜನಾಕ್ರಮವೆನ್ನು ವುದು ಕೇವಲ ವರ್ಗೀಕರಣವೋ, ಅಧ್ಯಯನದ ಅನುಕೂಲತೆಯನ್ನು ಮಾತ್ರ ಈಡೇರಿಸುವುದೋ ಆಗಿರದೆ, ಅದು ತನ್ನದೇ ಆದ ಗ್ರಹಿಕೆಯ ಕ್ರಮವನ್ನು ರೂಪಿಸುವ, ಪ್ರಭಾವಿಸುವ. ಒತ್ತಾಯಿ ಸುವ ಕೆಲಸವನ್ನು ಮಾಡುವುದಾಗಿರುತ್ತದೆ. ಆದ್ದರಿಂದಲೇ ಇವು ಸಾಹಿತ್ಯ ಸಂದರ್ಭದಲ್ಲಿ ವಾಗ್ವಾದಗಳನ್ನೂ ಹುಟ್ಟು ಹಾಕಿ ಬಿಡುತ್ತವೆ. ಕನ್ನಡದಲ್ಲಿ ಇದಕ್ಕೊಂದು ಅತ್ಯುತ್ತಮ ಉದಾಹರಣೆ ಧರ್ಮಾಧಾರಿತ ವಿಭಜನಾಕ್ರಮ ಕುರಿತದ್ದು. ಸಮಕಾಲೀನ ಸಂದರ್ಭದಲ್ಲಿ ಅಂತಹ ವಾಗ್ವಾದವೊಂದನ್ನು ರೂಪಿಸುತ್ತಿರುವ ಅಂಶ ಲಿಂಗಾಧಾರಿತ ವಿಭಜನಾಕ್ರಮ.

ಮಹಿಳಾ ಸಾಹಿತ್ಯ ಎಂಬ ಪರಿಕಲ್ಪನೆಯನ್ನು ಆಧಾರವಾಗಿಟ್ಟುಕೊಂಡು ರೂಪುಗೊಂಡಿರುವ ಲಿಂಗಾಧಾರಿತ ವಿಭಜನಾ ಕ್ರಮವು ತನ್ನದೇ ಆದ ಗ್ರಹಿಕೆಯ ಕ್ರಮವನ್ನು ರೂಪಿಸುವ, ಪ್ರಭಾವಿಸುವ, ಒತ್ತಾಯಿಸುವ ಕೆಲಸವನ್ನು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ತರುವು[illegible] ಮಹಿಳಾ ರಾಜಕಾರಣವನ್ನು ಬೆನ್ನಿಗಿಟ್ಟುಕೊಂಡು ಚರ್ಚೆಯ ಕಣಕ್ಕೆ ಬಂದಿರುವ [illegible] ವರ್ಗೀಕರಣದ ಕುರಿತ ಬೇಕು ಬೇಡದ ಚರ್ಚೆಗಳು ಇಂದು ನೆನ್ನೆಯದಲ್ಲ. ಅಧು[illegible] ಸಾಹಿತ್ಯಾರಂಭ [illegible] ವಾಗಿ ಕಂಡು ಬರುವ. ಪ್ರಮುಖ ಸಾಹಿತ್ಯಿಕ ಚರ್ಚೆಗ[illegible] ಒಂದಾಗಿರುವ ಈ ಅಂಶವನ್ನು ಈ ಅಂಕಣದಲ್ಲಿ ಪ್ರಸ್ತಾಪಿಸುವ ಮೂಲಕ ಸಮಕಾಲೀನ ಚರ್ಚೆಗೆ ಪೂರಕವಾದ ಒಂದಿಷ್ಟು ಮಾಹಿತಿಯನ್ನು ಇತಿಹಾಸದಿಂದ ಹೆಕ್ಕಿ ಮುನ್ನೆಲೆಗೆ ತರುವುದು ಈ ಲೇಖನದ ಉದ್ದೇಶವಾಗಿದೆ.

ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಬಿರುಸಿನಿಂದ ನಡೆದ ಮಹಿಳಾ ಸಾಹಿತ್ಯ ಪರಿಕಲ್ಪನೆಯ ಚರ್ಚೆ ವಾಸ್ತವವಾಗಿ ಆರಂಭಿಕ ದಶಕಗಳಲ್ಲೇ ಹುಟ್ಟಿಕೊಂಡದ್ದಾಗಿದೆ. ಆಧುನಿಕ ಚಿಂತನೆಗಳ ಒತ್ತಾಸೆಯೊಂದಿಗೆ ದೊರೆತ ಸ್ತ್ರೀ ಶಿಕ್ಷಣದ ಪರಿಣಾಮವಾಗಿ ಶತಮಾನಾರಂಭದ ಹೊತ್ತಿಗೆ ಮಹಿಳೆಯರು ಆಧುನಿಕ ಸಾಹಿತ್ಯ ರಚನೆಯಲ್ಲಿ ಕಣ್‌ಗಾಣುವ ಮಟ್ಟಿಗೆ ತೊಡಗಿಸಿ ಕೊಂಡರು ಎಂಬುದೀಗ ನಿರೂಪಿತ ಸತ್ಯ. ತಿರುಮಲಾಂಬ, ಶ್ಯಾಮಲಾದೇವಿ, ಸರಸ್ವತಿಬಾಯಿ ರಾಜವಾಡೆ, ಕೊಡಗಿನ ಗೌರಮ್ಮ ಇತ್ಯಾದಿ ಲೇಖಕಿಯರ ಸಾಹಿತ್ಯಿಕ ಸಾಧನೆ ಇದಕ್ಕೆ ಸಾಕ್ಷಿ. ಈ ಸತ್ಯದೊಂದಿಗೆ ಗಮನಿಸಿಕೊಳ್ಳಬೇಕಾದ ಇನ್ನೊಂದು ಪ್ರಮುಖ ಅಂಶ ತಮ್ಮ ಸಾಹಿತ್ಯ ಅಂದರೆ ಮಹಿಳಾ ಸಾಹಿತ್ಯ ಕುರಿತ ತಾತ್ವಿಕ ಚರ್ಚೆಯನ್ನು ಸಮರ್ಥನೀಯ ನೆಲೆಯಲ್ಲಿ ಅಂದಿನ ಲೇಖಕಿಯರು ಮಾಡಿದರು ಎಂಬುದು. ಪ್ರಸ್ತುತದಲ್ಲಿ ಜನಪ್ರಿಯ ಸಾಹಿತ್ಯ, ಅಡಿಗೆ ಮನೆ ಸಾಹಿತ್ಯ ಇತ್ಯಾದಿ ಶ್ಲೇಷಾರ್ಥಗಳನ್ನು ಪಡೆದುಕೊಂಡಿರುವ ಮಹಿಳಾ ಸಾಹಿತ್ಯ ಪರಿಕಲ್ಪನೆಯು ಆರಂಭಿಕ ದಿನಗಳಲ್ಲಿ ಅತ್ಯಂತ ಗಂಭೀರವಾದ ಚರ್ಚೆಯನ್ನು ಆಹ್ವಾನಿಸುತ್ತ ವ್ಯವಸ್ಥಿತವಾಗಿ ಕಟ್ಟಿದುದಾಗಿತ್ತು. ಅಂದಿನ ಸಾಂದರ್ಭಿಕ ಚರ್ಚೆಗಳಾದ ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯ ಮೀಮಾಂಸೆಗಳೆರಡರಿಂದಲೂ ತನ್ನನ್ನು ಸಮರ್ಥನೀಯವಾಗಿ ರೂಪಿಸಿಕೊಂಡಿತ್ತು. ಭಾರತೀಯ ಕಾವ್ಯಮೀಮಾಂಸೆ ಹಾಗೂ ದೇಸಿ ಕಾವ್ಯ ಕಲ್ಪನೆಗಳೆರಡರ ನೆಲೆಯಿಂದಲೂ ತನ್ನನ್ನು 'ಕಸಿ'ಗೊಳಿಸಿ ಕೊಳ್ಳಲು ಯತ್ನಿಸಿತ್ತು.

ಹಳಗನ್ನಡ ಸಾಹಿತ್ಯ ಸಂಪಾದನೆ ಹಾಗೂ ಹೊಸಗನ್ನಡ ಸಾಹಿತ್ಯ ರಚನೆಗಳೆರಡರ ಜೊತೆಗೆ ೧೯೨೦ರ ಆಸುಪಾಸಿನಲ್ಲಿ ದೇಸಿ ವಿದ್ವಾಂಸರಿಂದ ಮುಂದುವರಿದ ಜನಪದ ಸಾಹಿತ್ಯ ಸಂಗ್ರಹಣಾ ಕಾರ್ಯದ ಸಾಂದರ್ಭಿಕ ಮಾತುಗಳು `ಮಹಿಳಾ ಸಾಹಿತ್ಯ`ದ ಸೈದ್ಧಾಂತಿಕತೆಯನ್ನು ರೂಪಿಸಲು ಸಹಕಾರಿಯಾಯಿತು. ಜನಪದ ಸಾಹಿತ್ಯವನ್ನು 'ಗರತಿಯ ಹಾಡು' ಎಂದು ಗುರುತಿಸುವ ಮೂಲಕ ಮೊದಲ ಬಾರಿಗೆ ಆ ಸಾಹಿತ್ಯದ ಕರ್ತೃತ್ವವನ್ನು ಸಾಮುದಾಯಿಕ ನೆಲೆಯಲ್ಲಿ ಮಹಿಳೆಯರಿಗೆ ದೊರಕಿಸಲಾಯಿತು. ಅದರೊಂದಿಗೇ ಜನಪದ ಸಾಹಿತ್ಯವನ್ನು ಎಲ್ಲ ಸಾಹಿತ್ಯಗಳ ಮೂಲವೆಂದು ವಿಶ್ಲೇಷಿಸುವ ಮೂಲಕ ಸಾಹಿತ್ಯ ರಚನೆ ಹೆಣ್ಣು ಮಕ್ಕಳ ಜನ್ಮಜಾತ ಕಲೆ, ಸ್ವಭಾವ ಸಿದ್ಧಗುಣ ಎಂಬ ಅಭಿಪ್ರಾಯಕ್ಕೂ ಎಡೆ ಮಾಡಿಕೊಡಲಾಯಿತು. ಕವಿರಾಜಮಾರ್ಗಕಾರನ ಕುರಿತೋದ ದೆಯುಂ ಕಾವ್ಯ ಪ್ರಯೋಗ ಪರಿಣತಿ ಮತಿಗಳಲ್ಲಿ ಮಹಿಳೆಗೆ ಸ್ಥಾನ ಕಲ್ಪಿಸಲಾಯಿತು. ಇಲ್ಲಿನ ಗರತಿ ಎನ್ನುವ ಪದವು ಖಚಿತ ವ್ಯಾಪ್ತಿಯನ್ನು ಒಳಗೊಂಡದ್ದಾಗಿದ್ದು ಅದು 'ಮಹಿಳೆ' ಎಂಬ ವ್ಯಾಪಕತೆಯನ್ನು ಒಳಗೊಳ್ಳಲಾರದ್ದಾದರೂ ಮೊದಲ ಬಾರಿಗೆ ಅದು ಮಹಿಳಾ ಸಮುದಾಯದ ಕಲ್ಪನೆಯೊಂದನ್ನು ವ್ಯಕ್ತಿಗತ ನೆಲೆಯ ಆಚೆಗೆ ಗುರುತಿಸಿತ್ತು. ಆದರೆ `ಗರತಿ' ಎನ್ನುವ ಮೂಲಕ ಕುಟುಂಬ ಕೇಂದ್ರಿತ ಸಾಂಪ್ರದಾಯಿಕ ಸಂವೇದನೆಯೊಂದನ್ನು ಉಳಿಸಿ ಕೊಂಡಿತ್ತು. ಈ ನಿರ್ವಚನವು ವಸಾಹತು ಕಾಲಘಟ್ಟದ ಸುಧಾರಣವಾದಿ ಧೋರಣೆಯ ನಿಲವುಗಳನ್ನು ನೇರವಾಗಿ ಸೇರುವುದಾಗಿದೆ. ಮಹಿಳೆಯ ಆಧುನಿಕ ಸಂವೇದನೆ ಎಂಬುದು ಸಾಹಿತ್ಯ ಸಂದರ್ಭದಲ್ಲಿ ಕೂಡ ಗೃಹಕೇಂದ್ರಿತವಾಗಿಯೇ ಆವಿಷ್ಕಾರಗೊಳ್ಳುತ್ತದೆಂಬ ನಿಲವು ಇವರದೂ ಆಗಿದೆ.

'ಜೀವನವೇ ದೇವತೆಯಾದ, ತ್ರಿಪದಿ ಛಂದದಲ್ಲಿ ಹೊರಹೊಮ್ಮಿದ 'ಗರತಿಯ ಹಾಡಿನ ಋಷಿಗಳು ಹೆಣ್ಣುಮಕ್ಕಳು. ನಮ್ಮ ತಾಯಿ ತಂಗಿಯರು. ಅಮ್ಮ ಅಕ್ಕಂದಿರು, ಮಡದಿ ಮಕ್ಕಳು. ಹಾಗೆ ವಿಚಾರಿಸಿ ನೋಡಿದರೆ ಅವರದೇ ನಿಜವಾದ ಕಾವ್ಯ. ಉಳಿದುದು ಕಾವ್ಯದ ಛಾಯೆ. ಕಾವ್ಯವು ಕಾಂತಾ ಸಂಮಿತಿಯೆಂದು ಹೇಳುವರಷ್ಟೆ. ಕಾಂತೆಯ ಮಾತಿನಂತಿರುವುದೇ ಕಾವ್ಯವಾದರೆ ಕಾಂತೆಯರ ಮಾತೆ ಕಾವ್ಯದ ಮಾತೆಯಲ್ಲವೇ? ನಾವು ಕಾವ್ಯ ಎಂದು ಕರೆಯುವುದು ಅದರೊಂದು ಸಂತಾನ. ಕಾಂತೆಯ ಮಾತೆ ಕಾವ್ಯಮಾತೆ! ವೇದಕ್ಕೆ ಮಣಿಯದವರು, ಶಾಸ್ತ್ರಕ್ಕೆ ಒಗ್ಗದವರು, ಕಾಂತೆಯರ ಮಾತಿಗೆ ಮೆತ್ತಗೆ ಹಣ್ಣಾಗುವುದನ್ನು ಕಂಡೇ ವೇದಶಾಸ್ತ್ರದ ತಿರುಳು ಕಾವ್ಯ ಮೋಹಿನಿಯ ಅವತಾರವನ್ನು ತಳೆದಿತು. ಇಲ್ಲಿ ಕಾಂತೆಯೆಂಬ ಮಾತನ್ನು 'ಹೆಂಡತಿ' ಎಂಬ ಸಂಕುಚಿತಾರ್ಥದಲ್ಲಿ ತಿಳಿದುಕೊಳ್ಳದೆ ಸ್ತ್ರೀ ಜಾತಿ ಸಾಮಾನ್ಯವೆಂದೇ ತಿಳಿಯಬೇಕು.'

೧೯೩೦ರ ಸುಮಾರಿನಲ್ಲಿ ಹಲಸಂಗಿ ಗೆಳೆಯರಿಂದ ಸಂಗ್ರಹಿತವಾದ ಗರತಿಯಹಾಡು ಕೃತಿಯ ಪ್ರಸ್ತಾವಿಕ ಮಾತುಗಳಲ್ಲಿ ಬೇಂದ್ರೆ ಬರೆದ ಈ ಮಾತುಗಳು 'ಗರತಿ', 'ಕಾಂತಾ' ಎಂಬ ಪದಗಳನ್ನೆ ವಿಭಿನ್ನಾರ್ಥಕ್ಕೆ ಒಗ್ಗಿಸುವ ಪ್ರಯತ್ನವನ್ನು ಮಾಡುತ್ತದೆ ಸಹ. ಆದರೆ ಸೂಕ್ಷ್ಮವಾಗಿ ನೋಡಿದರೆ ಈ ಒಗ್ಗಿಸುವಿಕೆ ಸಂಬಂಧವಾಚಕ ಸ್ವರೂಪದಲ್ಲೇ ಇದೆ. ಅಂದರೆ ತಾಯಿ, ತಂಗಿ, ಅಮ್ಮ, ಅಕ್ಕ, ಮಡದಿ ಇತ್ಯಾದಿ. ಉಳಿದಂತೆ ಇದು ಸಮಾಜ - ಸಾಹಿತ್ಯ ಹಾಗೂ ಮಹಿಳೆ ಎಂಬುದನ್ನು ನೇರವಾಗಿ ಜೋಡಿಸುವುದಿಲ್ಲ. ಸ್ತ್ರೀ ಜಾತಿ ಎಂಬುದನ್ನು 'ಹೆಂಡತಿ' (ಗರತಿ) ಎಂಬ ಸಂಕುಚಿತಾರ್ಥದಿಂದ ಬಿಡಿಸಲೆತ್ನಿಸಿದರೂ ಸ್ವತಂತ್ರ ಸಾಮಾಜಿಕಾಭಿವ್ಯಕ್ತಿಯನ್ನು ಇಲ್ಲಿ ನೀಡಲಾಗಿಲ್ಲ. 'ಕಾವ್ಯದ ಮಾತೆ' ಎನ್ನುವಾಗಲೂ ಅದು ಸಂಬಂಧ ಸೂಚಕವೆ. 'ಕಾವ್ಯ ಮೋಹಿನಿ' ಎಂಬ ಪರಿಕಲ್ಪನೆ ಕೂಡ 'ಮಾತೆ' ಎಂಬುದಕ್ಕೆ ಎದುರು ಪರಿಕಲ್ಪನೆಯಾಗಿ ಅಂದು ರೂಪುಗೊಂಡಿದ್ದೆ. ಈ ಅರ್ಥದಲ್ಲಿ ವಸಾಹತುಶಾಹಿ ಕಾಲಘಟ್ಟದ ಸ್ವೋಪಜ್ಞತೆ, ನವೀನತೆ ಎಲ್ಲವೂ ನಿರ್ದಿಷ್ಟ ಸಾಮಾಜಿಕತೆಯ ಒಳಗಿಂದಲೇ ಹುಟ್ಟಿದ್ದೆಂಬುದು ಮತ್ತೊಮ್ಮೆ ಮನವರಿಕೆ ಗೊಳ್ಳುತ್ತದೆ.

ಬೇಂದ್ರೆಯವರ ಮೇಲಿನ ಪ್ರಾಸಂಗಿಕ ಮಾತುಗಳು ಆ ಹೊತ್ತಿನ ಲೇಖಕಿಯರ ಮೇಲೆ ಎಷ್ಟು ಪ್ರಭಾವ ಬೀರಿತ್ತೆಂಬುದಕ್ಕೆ ಅಂದಿನ ಪ್ರಮುಖ ಲೇಖಕಿ ಹಾಗೂ ಮಹಿಳಾ ಚಟುವಟಿಕೆಗಳ ಪ್ರಮುಖ ವ್ಯಕ್ತಿಯಾಗಿದ್ದ ಶ್ಯಾಮಲಾದೇವಿಯವರ ಕೆಳಗಿನ ಮಾತುಗಳನ್ನು ಉದಾಹರಣೆಯಾಗಿ ಗಮನಿಸಬಹುದು.

'ವಿದ್ಯೆಗೆ ಅಧಿಪತಿ ಸಿದ್ಧಿ ವಿನಾಯಕ (ಪುರುಷ)ನಾದರೆ, ಹೃದಯಂಗಮ ಸಾಹಿತ್ಯವಾದ ಕಾವ್ಯಕ್ಕೆ ಸರಸ್ವತಿ (ನಾರಿ)ಯು ಅಧಿಪತಿಯಾದಳು. ಸ್ತ್ರೀ ನುಡಿದುದೇ ಕಾವ್ಯ. ಏಕೆಂದರೆ ಸ್ತ್ರೀವಾಣಿಗೆ ಹೃದಯವನ್ನರಳಿಸಿ ಜೀವನವನ್ನು ಸಂಸ್ಕರಿಸುವ ಶಕ್ತಿ ಇರುವುದು. ಕಾವ್ಯವು ಆ ವಾಣಿಯನ್ನು ಅಳವಡಿಸಿಕೊಳ್ಳಬೇಕು. ಕಾವ್ಯದ ಸ್ವರೂಪದ ಕಲ್ಪನೆಯನ್ನು ಕೊಡುವುದಕ್ಕಾಗಿ 'ಕಾಂತಾ ಸಂಮಿತ' ಎಂಬ ಸೂತ್ರದಲ್ಲಿ ಹೇಳಿದುದಾದರೂ ಈ ಮಾತನ್ನೇ ಬಲಪಡಿಸುವುದು; ಸ್ಪಷ್ಟಪಡಿಸುವುದು. ಕಾವ್ಯವು ಕಾಂತಾ ವಚನದಂತೆ ಮಂಜುಲವೂ, ಮಧುರವೂ, ಸುಂದರವೂ ಆಗಿದೆ ಎಂದೇ

ಇದರ ಅರ್ಥ. ಕಾಂತಾ ಎಂದರೆ ಪ್ರಿಯೆ ಅಥವಾ ಹೆಂಡತಿ ಎಂಬ ಅರ್ಥದಲ್ಲಲ್ಲ. ಇದು ಸ್ತ್ರೀ ಜಾತಿ ಎಂಬ ವ್ಯಾಪಕಾರ್ಥದಲ್ಲಿರುವುದು. ಇನ್ನೀ ಪ್ರೌಢ ಕಾವ್ಯಲೋಕದಿಂದ ಇನ್ನೊಂದು ವಿಶಾಲ ಪ್ರಪಂಚಕ್ಕೆ ಹೋಗೋಣ. ಅಲ್ಲಿ ನಮ್ಮ ಹಳ್ಳಿಯ ಹೆಣ್ಣುಮಕ್ಕಳು ದೊಡ್ಡದೊಂದು ತೋಟವನ್ನೇ ಕೃಷಿ ಮಾಡಿದ್ದಾರೆ...... ಆ ತೋಟವೆಂದರೆ ಜೀವನ ಸಂಗೀತಗಳದು, ಗರತಿಯ ಹಾಡುಗಳದು ಎಂದು ನೀವು ಈಗಾಗಲೇ ಗ್ರಹಿಸಿರಬಹುದೆಂದು ನಾನು ತಿಳಿದಿದ್ದೇನೆ... ಅವು ಗಳಲ್ಲಿ ನಮಗಿಂದು ನಾದರಸ ಸೌಂದರ್ಯಗಳ ದರ್ಶನವಾಗತೊಡಗಿದೆ. ಅವುಗಳಿಂದ ಆನಂದದ ಅನುಭವವಾಗುತ್ತಿದೆ. ಇವು ನಿಜವಾಗಿಯೂ ಕಾವ್ಯಗಳು. ಸಾಹಿತ್ಯವು ಜನ ಜೀವನದ ಪ್ರತಿಬಿಂಬ ವಾದುದರಿಂದ ಹಳ್ಳಿಯ ಹಾಡುಗಳೆಂದರೆ ಶ್ರೇಷ್ಠ ಸಾಹಿತ್ಯವೇ ಸರಿ. ಈಗ ಈ ಸಾಹಿತ್ಯಕ್ಕಿದ್ದ ಅಸ್ಪೃಶ್ಯತೆಯು ಕಳೆದು ಹೋಗಿದೆ. ಇಂದು ಪಂಡಿತರು ಸಾಹಿತ್ಯಮಂದಿರದಲ್ಲಿ ಮಾನ್ಯವಾದ ಸ್ಥಾನವನ್ನು ಇದಕ್ಕೆ ಕೊಡುತ್ತಿದ್ದಾರೆ. ಈ ಗರತಿಯ ಹಾಡುಗಳೆಲ್ಲ ಹೆಣ್ಣುಮಕ್ಕಳ ಕೃತಿಗಳು.

೧೯೩೯ರಲ್ಲಿ ಜಯ ಕರ್ನಾಟಕದಲ್ಲಿ ಪ್ರಕಟಗೊಂಡ 'ಸಾಹಿತ್ಯದಲ್ಲಿ ನಾರಿಯ ಸ್ಥಾನ' ಎಂಬ ಈ ಬರಹವನ್ನು ಗಮನಿಸುವುದಾದರೆ ಬೇಂದ್ರೆಯವರ ಗರತಿಯ ಹಾಡಿನ ಮಾತಿನ ಜಾಡಿನೊಂದಿಗೆ ಇರುವ ಇದರ ಸಂಬಂಧ ಸ್ಪಷ್ಟಗೊಳ್ಳುತ್ತದೆ. ಸ್ತ್ರೀ ನುಡಿದುದೇ ಕಾವ್ಯ.... ಕಾಂತಾ ಎಂದರೆ ಪ್ರಿಯೆ ಅಥವಾ ಹೆಂಡತಿ ಎಂಬ ಅರ್ಥದಲ್ಲಲ್ಲ. ಇದು ಸ್ತ್ರೀ ಜಾತಿ ಎಂಬ ವ್ಯಾಪಕಾರ್ಥದಲ್ಲಿರುವುದು ಇತ್ಯಾದಿ ವಾಕ್ಯಗಳು ಬೇಂದ್ರೆ ವಾಕ್ಯಗಳ ಪ್ರತಿಧ್ವನಿಯಾಗಿಯೇ ಕಾಣುತ್ತದೆ ಕೂಡ. ಆದರೆ ಆ ಮಾತುಗಳನ್ನು ಉಳಿದ ವಾಕ್ಯಗಳ ಜೊತೆ ಸೇರಿಸಿ ಗ್ರಹಿಸುವುದಾದರೆ ಆ ಲೇಖನದ ಇನ್ನೊಂದು ಮಜಲು ತೆರೆದುಕೊಳ್ಳುತ್ತವೆ. ಅಲ್ಲಿ ಶ್ಯಾಮಲಾದೇವಿ ತಮ್ಮ ಮಂಡನಾ ಕ್ರಮದಲ್ಲಿಯೇ ಭಿನ್ನ ಸೈದ್ಧಾಂತಿಕತೆಯೊಂದನ್ನು ರೂಪಿಸಲು ಯತ್ನಿಸುತ್ತಾರೆ. ಸಾಹಿತ್ಯ ಚರ್ಚೆಯ ಪ್ರಾಸಂಗಿಕ ಮಾತುಗಳನ್ನು ತಾತ್ವಿಕ ಚರ್ಚೆಯಾಗಿ ಬೆಳೆಸಬಹುದಾದ ದಾರಿಯೊಂದರ ಆವಿಷ್ಕಾರಕ್ಕೆ ತೊಡಗುತ್ತಾರೆ.

ಆ ಕ್ರಮದಲ್ಲಿ ಮೊದಲಿಗೆ ಜಾನಪದ ಸಾಹಿತ್ಯ ಮೀಮಾಂಸೆಗೆ ಸಮಾನಾಂತರವಾಗಿ ಮಾರ್ಗ ಅಥವಾ ಶಿಷ್ಟ ಪರಂಪರೆಯನ್ನು ಸ್ತ್ರೀ ಕರ್ತೃತ್ವದ ತರ್ಕಕ್ಕೆ ಮಣಿಸುವ ಪ್ರಯತ್ನ ಮಾಡುತ್ತಾರೆ. ವಿನಾಯಕ-ಸರಸ್ವತಿಯರನ್ನು ಪುರುಷ - ನಾರಿ ಎಂದು ಸಂಭೋದಿಸುವ ಮೂಲಕ ಶಿಷ್ಟ ಕಲ್ಪನೆ ಯಲ್ಲೂ ಸಾಹಿತ್ಯಕ್ಕೆ ಮೂಲ ಸ್ತ್ರೀ ಎಂದು ತರ್ಕಿಸುತ್ತಾರೆ. ಆ ನಂತರ ದೇಸಿ ಕಾವ್ಯದ ವಿಚಾರವನ್ನು ಪುನರುಕ್ತಿಗೊಳಿಸಿ ಅವುಗಳಿಗೆ ಪರಸ್ಪರದಲ್ಲಿ ಅಧಿಕೃತತೆಯನ್ನು ತರುತ್ತಾರೆ. ಕೊನೆಯಲ್ಲಿ ಸಾಹಿತ್ಯ ಚರ್ಚೆ ಎಂಬುದು ಸಾಹಿತ್ಯ ರಾಜಕಾರಣವೇ ಎಂಬುದನ್ನು ಸಾಹಿತ್ಯಾ ಸ್ಪೃಶ್ಯತೆಯ ನೆಲೆಯಲ್ಲಿ ಸೂಚಿಸುತ್ತಾರಲ್ಲದೆ ದೇಸಿ ಸಾಹಿತ್ಯಕ್ಕಿದ್ದ ಅಸ್ಪೃಶ್ಯತೆಯು ಕಳೆಯಿತೆನ್ನುವ ವಿಚಾರವನ್ನು ಗರತಿಯ ಹಾಡಿನ ಮೂಲಕ ಹೆಣ್ಣುಮಕ್ಕಳ ಸಾಹಿತ್ಯಾಸ್ಪೃಶ್ಯತೆಯನ್ನು ಹೋಗಲಾಡಿಸುವ ನೆಲೆಗೆ ಜೋಡಿಸುತ್ತಾರೆ. ಬೇಂದ್ರೆಯವರು ಭಾವುಕ ನೆಲೆಯಲ್ಲಿ, ಪ್ರೋತ್ಸಾಹ ದಾಯಕ ಸ್ವರೂಪದಲ್ಲಿ ಆಡಿದ್ದ ಮಾತನ್ನು ಹಿಡಿದು ಅದನ್ನೇ ಸೈದ್ಧಾಂತಿಕ ನೆಲೆಗೆ ಬೆಳೆಸುತ್ತಾರೆ. ಜನಪದ ಸಾಹಿತ್ಯದ ಬೆನ್ನುತಟ್ಟಿ ಹೊರಟ ಮಾತುಗಳನ್ನು ಮಹಿಳಾ ಸಾಹಿತ್ಯದ ಸೈದ್ಧಾಂತಿಕತೆಯ ಬೆನ್ನೆಲುಬಾಗಿ

ಪರಿವರ್ತನೆಕೊಳ್ಳಲೆತ್ನಿಸುತ್ತಾರೆ. ಸಾಹಿತ್ಯವೊಂದರ ರಾಜಕೀಯಾರ್ಥದ ಓದು ಹಾಗೂ ತಾರ್ಕಿಕ ನೆಲೆಯ ಮೂಲಕ ಸಾಹಿತ್ಯದಲ್ಲಿ ನಾರಿಯ ಸ್ಥಾನವೇನೆಂಬುದನ್ನು ಸೈದ್ಧಾಂತಿಕವಾಗಿ ಮಂಡಿಸುತ್ತಾರೆ.

ಶ್ಯಾಮಲಾದೇವಿ ಸಮಕಾಲೀನ ಸಂದರ್ಭದಲ್ಲಿ ನಡೆಯುತ್ತಿದ್ದ ಭಾರತೀಯ ಕಾವ್ಯ ವಿಮರ್ಶೆಯ ದಾರಿಯನ್ನು ಹಿಡಿದು ಸಾಹಿತ್ಯ ಮತ್ತು ಸ್ತ್ರೀಯ ನಂಟನ್ನು ಆದಿಮಗೊಳಿಸಲು ಯತ್ನಿಸಿದರೆ, ಆ ಕಾಲದ ಇನ್ನೊಬ್ಬ ಪ್ರಮುಖ ಲೇಖಕಿ ಸರಸ್ವತಿ ಬಾಯಿ ರಾಜವಾಡೆ ಆಧುನಿಕ ಚಿಂತನಾಕ್ರಮದ ದಾರಿಯನ್ನು ಹಿಡಿದು ಸಾಹಿತ್ಯಕ್ಕಿರುವ ಸ್ತ್ರೀಯಾತ್ಮಕತೆಯನ್ನು ಪ್ರತಿಪಾದಿಸಲು ಯತ್ನಿಸುತ್ತಾರೆ.

'ಕೇವಲ ಪುರುಷ ರಚಿತ ಸಾಹಿತ್ಯದಿಂದ ಸಮಾಜದ ಆತ್ಮದರ್ಶನವಾಗುವುದಿಲ್ಲ. ಮಹಿಳೆಯರೂ ಆ ಕ್ಷೇತ್ರದಲ್ಲಿ ಪರಿಶ್ರಮಿಸಬೇಕು. ಅವರ ಹೃದಯದ ಆಸೆ ಆಕಾಂಕ್ಷೆಗಳನ್ನು, ಒಲವು ನಲಿವುಗಳನ್ನು, ಬೇಕು ಬೇಡಗಳನ್ನು ಅವರೇ ಯಥಾರ್ಥವಾಗಿ ಚಿತ್ರಸಬಲ್ಲರು' ಎಂದು ಸುಪ್ರಭಾತ ಪತ್ರಿಕೆಯ ಸಂಚಿಕೆಯೊಂದರ ಸಂಪಾದಕೀಯದಲ್ಲಿ ಬರೆಯುತ್ತಾರೆ. ಆ ಮೂಲಕ ಸ್ತ್ರೀ ಸಂವೇದನೆಯ ಸಾಹಿತ್ಯಿಕ ಅಸ್ತಿತ್ವ, ಅದನ್ನು ಹೊಂದದ ಪ್ರಧಾನ ಸಾಹಿತ್ಯದ ಕೊರತೆ, ಆ ಕೊರತೆಯನ್ನು ಸ್ತ್ರೀಯರು ಮಾತ್ರವೇ ಸಮರ್ಥವಾಗಿ ತುಂಬಬಲ್ಲರು ಎಂಬ ಮಾತುಗಳಲ್ಲಿ ಮಹಿಳಾ ಸಾಹಿತ್ಯದ ಅಗತ್ಯವನ್ನು ಮಂಡಿಸುತ್ತಾರೆ.

ಹೀಗೆ ಆಧುನಿಕ ವಿಮರ್ಶೆಯ ಆರಂಭಿಕ ಹಂತದಲ್ಲಿಯೇ ಕನ್ನಡ ಲೇಖಕಿಯರು ಸಾಹಿತ್ಯ ಮತ್ತು ಮಹಿಳೆಯ ಸಂಬಂಧ ಸ್ವರೂಪವನ್ನು ರಾಜಕೀಯಾರ್ಥದಲ್ಲಿ ಗ್ರಹಿಸುವ ಮೂಲಕ ಸಿದ್ಧಾಂತವೊಂದನ್ನು ಮಂಡಿಸಲು ಯತ್ನಿಸುವುದು ಕಂಡು ಬರುತ್ತದೆ. ಆ ಮಂಡನೆಯನ್ನು ಕಾವ್ಯ ಪರಂಪರೆಯ ಸಂದರ್ಭದಲ್ಲಾಗಲಿ, ಸಾಮಾಜಿಕ ಜೀವನದ ಸಂದರ್ಭದಲ್ಲಾಗಲಿ ಅನೂರ್ಜಿತಗೊಳಿಸಲಾರದ ಕನ್ನಡ ಸಾಹಿತ್ಯ ಸಂದರ್ಭ 'ಮಹಿಳಾ ಸಾಹಿತ್ಯ'ದ ಅಸ್ತಿತ್ವವನ್ನು ಸ್ವೀಕರಿಸಿತು ಸಹ. ಇದೆಲ್ಲದರ ಪರಿಣಾಮವಾಗಿ ಕನ್ನಡ ಸಾಹಿತ್ಯ ಸಮ್ಮೇಳನದಂತಹ ಪ್ರತಿಷ್ಠಿತ ವೇದಿಕೆಯಲ್ಲಿ 'ಮಹಿಳಾ ಗೋಷ್ಠಿ'ಯೊಂದು ಆರಂಭಗೊಂಡು ಮಹಿಳಾ ಸಾಹಿತ್ಯವೆಂಬ ಪರಿಕಲ್ಪನೆ ಅಧಿಕೃತ ಧಾರೆಯಾಗಿ ಮಾನ್ಯಗೊಂಡಿತು.

- ೨ -

ಸಾಹಿತ್ಯ ಸಮ್ಮೇಳನದಲ್ಲಿನ ಮಹಿಳಾ ಗೋಷ್ಠಿಯ ಆರಂಭವೆನ್ನುವುದನ್ನು ಸ್ವಲ್ಪ ಬದಲಿಸಿ ಮಹಿಳಾ ಗೋಷ್ಠಿಯೆಂಬುದೊಂದು ಪ್ರತ್ಯೇಕ ಗೋಷ್ಠಿ ಎಂಬ ನೆಲೆಯಲ್ಲಿ ಗ್ರಹಿಸಿದರೆ ಅದು ಮಹಿಳಾ ಸಾಹಿತ್ಯ ಚರ್ಚೆಯ ಇನ್ನೊಂದು ಮಗ್ಗುಲಿಗೆ ನಮ್ಮನ್ನು ಕೊಂಡೊಯ್ಯುತ್ತದೆ. ಈ ಚರ್ಚೆಗೆ ಪೂರ್ವಭಾವಿಯಾಗಿ ಮಹಿಳಾ ಗೋಷ್ಠಿಯ ಅಧ್ಯಕ್ಷ ಭಾಷಣವೊಂದನ್ನು ಗಮನಿಸಿ ಮುಂದುವರಿಯಬಹುದಾಗಿದೆ.

'ಸಾಹಿತ್ಯವು ಜೀವನವನ್ನು ಪ್ರತಿಬಿಂಬಿಸುವುದಲ್ಲದೆ ಅದಕ್ಕೆ ಸರಿಯಾದ ಹಾದಿ ತೋರಿಸುವುದೂ ಒಂದು ಅದರ ಕೆಲಸ. ಸಾಹಿತ್ಯದ ಈ ದ್ವಿವಿಧ ಉದ್ದೇಶವು ಮಹಿಳೆಯರ

ಸಹಕಾರವಿಲ್ಲದೆ ಪೂರ್ಣವಾಗದು. ಸ್ತ್ರೀಯು ಸಮಾಜದ ಅರ್ಧಾಂಗ. ಅವಳು ಜೀವನವನ್ನು ಯಾವ ವಿಧದಲ್ಲಿ ನೋಡುವಳು? ಅವಳ ಆಸೆ-ಆಕಾಂಕ್ಷೆಗಳೇನು? ಜೀವನವನ್ನು ಹೇಗೆ ಕಟ್ಟಬೇಕು - ಮಾರ್ಪಡಿಸಬೇಕೆಂದು ಅವಳು ಬಯಸುವಳು? ಇದಕ್ಕೆಲ್ಲ ಉತ್ತರ ಬೇಕಿದ್ದರೆ ಸಾಹಿತ್ಯ ನಿರ್ಮಾಣಕ್ಕೆ ಸ್ತ್ರೀಯು ಕೈಗೊಡಲೇಬೇಕು. ಪುರುಷರು ಸ್ತ್ರೀ ದೃಷ್ಟಿಯಿಂದ ಸಮಾಜವನ್ನು ನೋಡುವುದು ಸಾಧ್ಯವೇ ಇಲ್ಲ. ಅಂತೆಯೇ ಸ್ತ್ರೀಯರಿಗೆ ಬೇಕಾದ ಪಾಕಶಾಸ್ತ್ರ, ಗೃಹ ವೈದ್ಯ, ಶಿಶು ಶಿಕ್ಷಣ, ಸಂಗೀತ, ಉಪವನ ರಚನೆ, ಗೃಹ ಮಂಡನ ಮೊದಲಾದ ವಿಷಯಗಳನ್ನು ಚರ್ಚಿಸುವ ಸಾಹಿತ್ಯ ನಮ್ಮಲ್ಲಿ ಹುಟ್ಟಲೇ ಇಲ್ಲ. ಈ ಕೊರತೆಯನ್ನು ನಾವೇ ತುಂಬಬೇಕು. (ಧಾರವಾಡದಲ್ಲಿ ನಡೆದ ೨೫ನೇ ಸಾಹಿತ್ಯ ಸಮ್ಮೇಳದ ಮಹಿಳಾ ಗೋಷ್ಠಿ ಅಧ್ಯಕ್ಷರಾಗಿದ್ದ ಸಾವಿತ್ರಿಬಾಯಿ ನಾಗನಗೌಡರ ಭಾಷಣ)

ಮೇಲಿನ ಅಧ್ಯಕ್ಷ ಭಾಷಣದ ಮೊದಲ ವಾಕ್ಯಗಳು ಅತ್ಯಂತ ಪ್ರಭಾವಶಾಲಿಯಾಗಿ ಮಹಿಳಾ ಸಾಹಿತ್ಯ ಬೆಳೆಯಬೇಕಾದ ಅಗತ್ಯವನ್ನು ಪ್ರತಿಪಾದಿಸುತ್ತದೆ. ಸಮಾಜದ, ಜೀವನದ, ಸಾಹಿತ್ಯದ ಪರಿಪೂರ್ಣತೆಯ ಮಾತು, ಅದರಲ್ಲಿನ ಸ್ತ್ರೀಯ ಸಹಕಾರದ ಉದ್ದೇಶ, ಅವರಿಗೆ ದೊರಕಬೇಕಾದ ಸಮಪಾಲು ಇತ್ಯಾದಿಗಳನ್ನು.....ಪುರುಷರು ಸ್ತ್ರೀ ದೃಷ್ಟಿಯಿಂದ ಸಮಾಜವನ್ನು ನೋಡುವುದು ಸಾಧ್ಯವೇ ಇಲ್ಲ ಎಂಬ ಖಚಿತ ನಿಲುವಿನಲ್ಲಿ ಪ್ರಸ್ತಾಪಿಸುತ್ತದೆ. ಆದರೆ ಕೊನೆಗೆ ಬರುವ ಹೊತ್ತಿಗೆ ಸ್ತ್ರೀಯ ಜೀವನದ ಆಸೆ - ಆಕಾಂಕ್ಷೆಗಳೇನು? ಸಮಾಜವನ್ನು ಕುರಿತ ಅವಳ ನಿರೀಕ್ಷೆ ಗಳೇನು ಇತ್ಯಾದಿ ದೊಡ್ಡ ದೊಡ್ಡ ಪ್ರಶ್ನೆಗಳೆಲ್ಲವೂ ಪಾಕಶಾಸ್ತ್ರ, ಗೃಹವೈದ್ಯ, ಶಿಶು ಶಿಕ್ಷಣ, ಉಪವನ ರಚನೆ ಇತ್ಯಾದಿಯಲ್ಲಿ ಪರ್ಯವಸಾನಗೊಳ್ಳುತ್ತವೆ. ಸ್ತ್ರೀಯಿಂದ ಸಮಾಜ ನಿರೀಕ್ಷಿಸು ತ್ತಿರುವುದೇನು ಎಂಬುದನ್ನು ಸ್ತ್ರೀಯರಿಗೆ ಬೇಕಾದ ಅಗತ್ಯಗಳು ಎಂಬುದಾಗಿ ಭಾವಿಸುತ್ತದೆ. ಕೊನೆಗೆ ಈ ಚರ್ಚೆ ಸ್ತ್ರೀ ಸಾಹಿತ್ಯ ರಚನೆಯ ಪರಿಶ್ರಮವೆಂಬುದು ಈಗಿರುವ ಸಾಹಿತ್ಯಕ್ಕಿರುವ ಕೊರತೆಯನ್ನು ತುಂಬುವುದಕ್ಕಾಗಿಯೇ ಏನೋ ಎಂಬಲ್ಲಿಗೆ ಹೋಗಿ ನಿಲ್ಲುತ್ತವೆ. ಆ ಉತ್ಸಾಹ ದಲ್ಲಿ ಮಹಿಳೆಯರ ಸಾಹಿತ್ಯಿಕ ಕೊರತೆಗಳು, ಬದುಕಿನ ಕೊರತೆಗಳು ಎಲ್ಲೋ ಒಂದೆಡೆ ಕಲೆತು ತಮ್ಮ ಚಿಂತನಾಕ್ರಮವನ್ನು ಕೊರತೆಯಲ್ಲಿ ರೂಪಿಸುತ್ತವೆ ಎಂಬುದನ್ನು ಮರೆಯುತ್ತದೆ. ಅತ್ಯಂತ ಆಟಾಟೋಪದಿಂದ ವಸಾಹತುಶಾಹಿ ಸಮಾಜದ ಪಿತೃಪ್ರಧಾನ ಆಶಯವನ್ನೇ ಶಿರಸಾವಹಿಸಿ ಪ್ರತಿಪಾದಿಸುತ್ತದೆ. ಸ್ತ್ರೀಯ ವಸ್ತುಪ್ರಪಂಚ, ಸಾಹಿತ್ಯ ಸಂವೇದನೆ ಎರಡೂ ಗೃಹ ಕೇಂದ್ರಿತ ವಾದುದು ಎಂಬುದನ್ನು ಒಪ್ಪುತ್ತದೆ. ಆದರಾಚೆಗಿನ ಮಹಿಳೆಯನ್ನಾಗಲಿ, ಅವಳ ವಸ್ತು ಪ್ರಪಂಚವನ್ನಾಗಲಿ, ಸಂವೇದನೆಯನ್ನಾಗಲಿ ಗುರುತಿಸಿ ಕೊಳ್ಳುವುದರಲ್ಲಿ ಸೋಲುತ್ತದೆ. ಕೊನೆಗೆ ಪುರುಷನಿಗಿಂತ ಪ್ರತ್ಯೇಕವಾದ ವಸ್ತುಪ್ರಪಂಚ, ಅದು ರೂಪಿಸಿದ ಪ್ರತ್ಯೇಕ ಸಂವೇದನೆ, ಆ ಸಂವೇದನೆ ಸೃಷ್ಟಿಸುವ ಪ್ರತ್ಯೇಕ ಸಾಹಿತ್ಯ ಆ ಸಾಹಿತ್ಯ ಚರ್ಚೆಗೆ ಬೇಕಾದ ಪ್ರತ್ಯೇಕ ಗೋಷ್ಠಿ ಎಂಬುದು ಸ್ತ್ರೀಗಿರುವ ಸಾಹಿತ್ಯ ರಚನೆಯ ಜನ್ಮಜಾತ ಹಕ್ಕನ್ನೂ ಪ್ರತ್ಯೇಕವಾಗಿಯೇ ಇಡುತ್ತದೆ. ಈ ಪ್ರತ್ಯೇಕತೆ ಮಹಿಳಾ ಸಾಹಿತ್ಯವನ್ನು ಅಂಚಿನ ಸಾಹಿತ್ಯವಾಗಿ ಪ್ರತಿಪಾದಿಸುತ್ತದೆ. ಮಾರ್ಪಡಿ ಸುತ್ತದೆ. ಈ ಮಾರ್ಪಾಡು ಅಂತಿಮವಾಗಿ ಅಸ್ಪೃಶ್ಯತೆಯ ಶಾಪವನ್ನು ಮಹಿಳಾ ಸಾಹಿತ್ಯಕ್ಕೆ ಸೃಷ್ಟಿಸಬಲ್ಲದು ಎಂಬುದನ್ನು ಕಾಣದಾಗಿರುತ್ತದೆ.

ಮೇಲಿನ ಚರ್ಚೆಗಳನ್ನು ಒಂದೆಡೆ ತಂದು ನೋಡುವುದಾದರೆ ಅದು ಅಂದಿನ ಲೇಖಕಿಯರು ಬದುಕಿನ ಸಂದರ್ಭದಲ್ಲಿ ವಸಾಹತುಶಾಹಿ ಚಿಂತನೆಯು ನೀಡಿದ ಸ್ತ್ರೀತ್ವದ ಮಾದರಿಯನ್ನು ಸ್ವೀಕರಿಸುತ್ತಲೇ ಮಹಿಳಾ ಸಾಹಿತ್ಯಕ್ಕೊಂದು ವಿಭಿನ್ನ ಅಸ್ತಿತ್ವಕ್ಕಾಗಿ ಒತ್ತಾಯಿಸಿದ್ದ ರಿಂದ ಸಹಜವಾಗಿಯೇ ಅದು ಒಳಗಿಂದೊಳಗೇ ಮಹಿಳಾ ಸಾಹಿತ್ಯವನ್ನು, ಅವರ ಸಾಹಿತ್ಯಿಕ ರಾಜಕಾರಣವನ್ನು ಟೊಳ್ಳಾಗಿಸಿದ್ದು ಗೋಚರಿಸುತ್ತದೆ. ಮಹಿಳಾ ಸಾಹಿತ್ಯದ ಅಗತ್ಯ, ವೈಶಿಷ್ಟ್ಯ ಗಳೆರಡನ್ನೂ ಪ್ರಧಾನ ಚಿಂತನಾಧಾರೆಯ ಆವರಣದೊಳಗಿಂದಲೇ ರೂಪಿಸಿಕೊಂಡಿದ್ದರಿಂದ ಅತ್ಯಂತ ಕ್ರಾಂತಿಕಾರಕವಾಗಿ ಹೊರಟ ಹೇಳಿಕೆಗಳು, ತರ್ಕಶುದ್ಧ ಸಿದ್ಧಾಂತಗಳು ಆ ವ್ಯಾಪ್ತಿ ಯೊಳಗೇ ಆವಿಷ್ಕಾರಗೊಳ್ಳುವಂತಾಗಿಸಿದೆ. ಇದರಿಂದ ಯಾವ ವಿಚಾರಗಳನ್ನು ಮಹಿಳಾ ಸಾಹಿತ್ಯದ ವೈಶಿಷ್ಟ್ಯಗಳೆಂದು, ಯಾವುದನ್ನು ಪ್ರಧಾನ ಸಾಹಿತ್ಯದ ಕೊರತೆ ಎಂದು ಗುರುತಿಸಿ ಕೊಂಡು ತುಂಬುವ ಪ್ರಯತ್ನಕ್ಕೆ ಲೇಖಕಿಯರು ತೊಡಗಿದರೋ ಆ ಅಂಶಗಳನ್ನೇ ಮುಂದೊಡ್ಡಿ ನಂತರದ ವಿಮರ್ಶೆಯು ಅದನ್ನು ಅಡಿಗೆ ಮನೆ ಸಾಹಿತ್ಯವೆಂದು ಹಣೆಪಟ್ಟಿ ಕಟ್ಟಿತು. ವಸ್ತುವಿನ ಪರಿಮಿತಿ, ಅನುಭವದ ಕೊರತೆಗಳನ್ನು ಮಹಿಳಾ ಸಾಹಿತ್ಯದ ದುರ್ಬಲ ಸಂಗತಿಗಳಾಗಿ ಪ್ರತಿಪಾದಿಸಿತು.

ಇದಕ್ಕೆ ಪ್ರತಿಯಾಗಿ ಲೇಖಕಿಯರು ಯಾವ ಸೈದ್ಧಾಂತಿಕತೆಯನ್ನು ನಂಬಿ ಕತೆ ಹೇಳುವ ಕ್ರಿಯೆಗೆ ತೊಡಗಿದ್ದರೋ ಅದೇ ಸೈದ್ಧಾಂತಿಕತೆಯನ್ನು ನಂಬಿ ತಮ್ಮನ್ನು ತಾವು ಸಮರ್ಥಿಸಿ ಕೊಳ್ಳುವ ವಿಮರ್ಶೆಯನ್ನು ಕೈಬಿಟ್ಟರು. ವಿದ್ಯೆ, ಕಾವ್ಯಗಳ ನಡುವೆ ಗೆರೆಯನ್ನೆಳೆದುಕೊಂಡು ಸರಸ್ವತಿಯನ್ನು ಕಾವ್ಯದ ಅಧಿಪತಿ (?)ಯಾಗಿಸಿಕೊಂಡು ಒಂದೆಡೆ ಕಾವ್ಯ ಕ್ರಿಯೆಗೆ ಸಮರ್ಥನೆ ಯನ್ನು ಹುಡುಕಿಕೊಂಡರಾದರೂ ಕಾವ್ಯೇತರ ಬೌದ್ಧಿಕ ಚರ್ಚೆಯನ್ನು ಬಿಟ್ಟುಕೊಟ್ಟರು. ಸಮಾಜವು ಆರೋಪಿಸಿದ್ದ ಸಹನೆ, ಮೃದುತ್ವ, ಲಾಲಿತ್ಯ, ಸೃಜನಶೀಲತೆ ಇತ್ಯಾದಿಗಳು ಹೆಣ್ಣಿನ ಸಹಜ ಸ್ವಭಾವಗಳೆಂದೂ, ತಾಯ್ತನ, ಕುಟುಂಬ, ಪಾಕಶಾಸ್ತ್ರ, ಗೃಹಚರ್ಯೆ ಇತ್ಯಾದಿಗಳೇ ಅವಳ ಆಯ್ಕೆಯ ಕ್ಷೇತ್ರಗಳೆಂಬುದನ್ನು ಮುಗ್ಧವಾಗಿ ಒಪ್ಪುವ ಮೂಲಕ ಅದಕ್ಕೆ ಭಿನ್ನವಾದ ಸ್ವಭಾವಗಳನ್ನು, ಕಾರ್ಯ ಕ್ಷೇತ್ರಗಳನ್ನು ಕಾಠಿಣ್ಯದ, ಪಾಂಡಿತ್ಯದ ಜಗತ್ತಾಗಿ ಪರಿಭಾವಿಸಿ ಅದು ಸ್ತ್ರೀ ಸಹಜವಲ್ಲವೆಂದು ನಂಬಿದರು. ಮಹಿಳಾ ಸಾಹಿತ್ಯದ ಅಸ್ತಿತ್ವವನ್ನು ಪ್ರತಿಪಾದಿಸಿಕೊಳ್ಳು ವುದರಲ್ಲಿ ಹಾಕಿದ ಸಿದ್ಧಾಂತದ ಶ್ರಮವನ್ನು ಆ ನಂತರದಲ್ಲಿ ಬಿಟ್ಟುಕೊಟ್ಟರು.

'ಬರವಣಿಗೆಯ ಕಲೆಯ ಬಗ್ಗೆ ಮಾತನಾಡುವುದು ಕಷ್ಟ. ಆದರೆ ಬರೆದು ಬಿಡುವುದು ಮಾತ್ರ ಸುಲಭ. ಗಂಡಸರಿಗಿಂತ ಹೆಣ್ಣುಮಕ್ಕಳಿಗೆ ಅದು ಹೆಚ್ಚು ಸುಲಭ. ಬರವಣಿಗೆಯ ಬಗ್ಗೆ ಮಾತನಾಡುವ ಕೆಲಸವನ್ನು ಗಂಡಸರಿಗೇ ಬಿಟ್ಟುಕೊಳ್ಳೋಣ. ಶಾಸ್ತ್ರ ಅವರಿಗಿರಲಿ, ಕಲೆ ನಮಗಿರಲಿ.....ಒರಟು ತತ್ವ ವಿಚಾರಗಳನ್ನು ಗಂಡಸರು ಹೇಳುತ್ತ ಕೂಡಲಿ, ನಾವು ನಮ್ಮ ಮಧುರ ವಿನಯದಿಂದ ಮುಗುಳು ನಗೆಯಿಂದ, ಹಿತಮಿತ ವಚನಗಳಿಂದ ಅನುಭವದ ಮಾತುಗಳಿಂದ ಮನಗಾಣಿಸಿ ಬಿಡೋಣ.'

೧೯೪೨ರ ಬೆಳಗಾವಿ ಜಿಲ್ಲೆ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯ ಅಧ್ಯಕ್ಷ

ಭಾಷಣದಲ್ಲಿನ ಶ್ಯಾಮಲಾದೇವಿಯವರ ಈ ಮಾತುಗಳಿಗೂ ಈ ಹಿಂದೆ ಪ್ರಸ್ತಾಪಿಸಲಾದ ಬರಹದ ಸಂದರ್ಭಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬಹುದು (ಇದೂ ಮೂಲತಃ ರಾಣಿಬೆನ್ನೂರಿನ ಕರ್ನಾಟಕ ಸಂಘದಲ್ಲಿ ಮಾಡಿದ ಭಾಷಣದ ಬರಹ ರೂಪಾಂತರ) ಸಾಹಿತ್ಯ ಮತ್ತು ಶಾಸ್ತ್ರಗಳ (ವಿಮರ್ಶೆಗೂ ಹೊಂದುತ್ತದೆ) ಬಗ್ಗೆ ಅಂದಿನ ಲೇಖಕಿಯರು ಇಂತಹ ಕಲ್ಪಿತಾರ್ಥಗಳನ್ನು ಅವಲಂಬಿಸಿದ್ದರಿಂದಾಗಿ ಒಂದೆಡೆ ಅವರು ಉತ್ಸಾಹದಿಂದ ಸಾಹಿತ್ಯ ಕ್ಷೇತ್ರ ವನ್ನು ಪ್ರವೇಶಿಸಿದರೂ, ಅದನ್ನು ಸಮರ್ಥಿಸಿಕೊಂಡರಾದರೂ ಇನ್ನೊಂದೆಡೆ ವಿಮರ್ಶಾ ರಾಜಕಾರಣವನ್ನು ಬಿಟ್ಟುಕೊಡುವಂತಾಯಿತು. ಸಾಹಿತ್ಯವೆಂಬುದೊಂದು ಸೃಜನಶೀಲ ಕಲೆಯಾಗಿರುವುದಷ್ಟೇ ಅಲ್ಲದೆ ಅದೊಂದು ಅಧ್ಯಯನ ಶಿಸ್ತಿನ ಭಾಗವೂ ಆಗಿರುತ್ತವೆ. ಸಾಂಸ್ಕೃತಿಕ ರಾಜಕಾರಣವೂ ನಡೆದಿರುತ್ತದೆ ಎಂಬುದರ ಕಡೆ ಎರವಾದರು.

'ಇದರಿಂದ ಹೆಂಗಸರು ಬರೇ ಕತೆಗಳನ್ನು ಮಾತ್ರ ಬರೆಯಬಲ್ಲರೆಂದೂ ಬೇರೆ ಯಾವ ಸಾಹಿತ್ಯವನ್ನು ನಿರ್ಮಿಸಲಾರರೆಂದೂ ನಾನು ಹೇಳಿದೆನೆಂದು ತಿಳಿಯಬೇಡಿ. ಸ್ತ್ರೀಯರು ಶಿಕ್ಷಣದಲ್ಲಿ ಮುಂದುವರಿದಂತೆಲ್ಲ, ವಿವಿಧ ವಿಷಯಗಳನ್ನು ತೆಗೆದುಕೊಂಡು ಪದವಿಗಳನ್ನು ಪಡೆಯುತ್ತಿದ್ದಾರೆ. ಅವರಲ್ಲೆಷ್ಟೋ ಜನರು ತಾವು ಪಾಂಡಿತ್ಯ ಪಡೆದಿರುವ ವಿಷಯಗಳನ್ನು ಕುರಿತು ಉದಾತ್ತ ಸಾಹಿತ್ಯವನ್ನು ನಿರ್ಮಿಸಬಲ್ಲವರಿದ್ದಾರೆಂದು ನಾನು ನಂಬಿದ್ದೇನೆ.....ಅವರು ವಿಶೇಷವಾದ ಶಿಕ್ಷಣ ಪಡೆದು ಮತ್ತು ಕನ್ನಡ ಸಾಹಿತ್ಯ ವಿಷಯವನ್ನು ಅಭ್ಯಾಸ ಮಾಡಿ ತಮ್ಮ ಕಥನ ಕಲೆಯನ್ನು ಪರಿಪಕ್ವ ಮಾಡಿಕೊಂಡು ಮುಂದುವರಿಯಬೇಕು ಎಂದೇ ನನ್ನ ಅಭಿಪ್ರಾಯ ಎಂಬ ಸ್ವತಃ ಶ್ಯಾಮಲಾದೇವಿಯ ಆಶಯ ನಂತರದ ದಿನಗಳಲ್ಲಿ ಸ್ವಲ್ಪ ಮಸುಕಾಯಿತೆಂದೇ ಹೇಳಬೇಕು. ನಂತರ ಸುಮಾರು ಮೂರು - ನಾಲ್ಕು ದಶಕಗಳು ಮಹಿಳಾ ಸಾಹಿತ್ಯ ಸಾಕಷ್ಟು ಪ್ರಮಾಣದಲ್ಲಿ ಬೆಳೆದರೂ ಅದು ವಿಮರ್ಶೆಯ ಕಾಲಕಸವಾಯಿತು. ಪಾಕಶಾಸ್ತ್ರ, ಗೃಹವೈದ್ಯ.... ಗೃಹ ಮಂಡನ ಇತ್ಯಾದಿ ವಿಷಯಗಳನ್ನು ಚರ್ಚಿಸುವ ಸಾಹಿತ್ಯ ನಮ್ಮಲ್ಲಿ ಯಾಕೆ ಹುಟ್ಟಲಿಲ್ಲ ಎಂಬ ಪ್ರಶ್ನೆ ಅಂತಹ ಸಾಹಿತ್ಯ ರಚನೆಯ ನಂತರ ಗಟ್ಟಿದನಿಯಲ್ಲಿ ಅದನ್ನು ಸಮರ್ಥಿಸಿ ಕೊಳ್ಳಲಿಲ್ಲ.

ಅಡಿಗೆ ಮನೆ ಸಾಹಿತ್ಯದ ಭಾಗವಾಗಬಾರದೆ? ಅಡಿಗೆ ಮನೆ ಸಾಹಿತ್ಯವನ್ನು ಓದುವುದಕ್ಕೆ ಬೇಕಾದ ಪರಿಕರಗಳು ಆವಿಷ್ಕಾರಗೊಳ್ಳಬಾರದೇಕೆ? ಎಂಬ ನೆಲೆಯಲ್ಲಿ ಪ್ರತಿ ಪ್ರಶ್ನೆಗಳನ್ನು ಎತ್ತಲಾರದೆ ಹೋದ ಮಹಿಳಾ ಸಾಹಿತ್ಯದ ಸೈದ್ಧಾಂತಿಕತೆ ಲೇಖಕಿಯರ ಆತ್ಮವಿಶ್ವಾಸವನ್ನು ಕುಸಿಯಿಸಿತು. ಅವರ ಸಾಹಿತ್ಯಿಕ ಬೆಳವಣಿಗೆಯನ್ನು ಸರಿಯಾದ ದಿಕ್ಕಿನಲ್ಲಿ ನಿರ್ದೇಶಿಸಲಾರದಾ ಯಿತು. ಪರಿಣಾಮವಾಗಿ ಮಹಿಳೆಯರ ಆತ್ಮವಿಶ್ವಾಸಕ್ಕಾಗಿ, ಅಸ್ಮಿತೆಗಾಗಿ ನಿರ್ವಚನಗೊಂಡ 'ಮಹಿಳಾ ಸಾಹಿತ್ಯ' ಎಂಬ ಪರಿಕಲ್ಪನೆ ಕೊನೆಗೆ ಅಡಿಗೆ ಮನೆ ಸಾಹಿತ್ಯವೆಂಬ ಸೀಮಿತತೆಗೆ ಒಳಗಾಗಿ ಲೇಖಕಿಯರ ಆತ್ಮವಿಶ್ವಾಸವನ್ನು ಕಸಿಯುವ ಸಂಗತಿಯಾಗಿ ಪರಿವರ್ತಿತವಾಯಿತು. ಈ ಹೊತ್ತಿಗಾದರೂ ಸರಿ ಕೆಲವು ಸಮರ್ಥರೆನಿಸಿಕೊಂಡ ಲೇಖಕಿಯರಿಗೇ ತಮ್ಮ ಸಾಹಿತ್ಯಕ್ಕೆ ಮಹಿಳಾ ಸಾಹಿತ್ಯವೆಂಬ ಹಣೆಪಟ್ಟಿ ಬೇಡ ಎಂದು ದುಮ್ಮಾನಿಸುವ ಪರಿಸ್ಥಿತಿ ಉಂಟಾಯಿತು.

ಆದರೆ ಈ ಎಲ್ಲ ದುಃಖ ದುಮ್ಮಾನವನ್ನು ಮೀರಿ ಲಿಂಗಾಧಾರಿತ ವಿಭಜನಾ ಕ್ರಮ ಬೇಕೆ ಎಂಬ ಪ್ರಶ್ನೆಯನ್ನು ಜೀವಂತವಾಗುಳಿಸಿಕೊಂಡೇ 'ಮಹಿಳಾ ಸಾಹಿತ್ಯ' ಎಂಬ ಪರಿಕಲ್ಪನೆ ನಿರಂತರವಾಗಿ ಪ್ರಯೋಗಗೊಳ್ಳುತ್ತಿದೆ. ಏಕೆಂದರೆ ವಿಭಜನಾಕ್ರಮವೆನ್ನುವುದು ಓದಿನ ಕ್ರಮವನ್ನು ಒತ್ತಾಯಿಸುವುದಾದ್ದರಿಂದ ಪ್ರಧಾನಧಾರೆ ಹಾಗೂ ಸ್ತ್ರೀವಾದಿ ಧಾರೆಗಳೆರಡಕ್ಕೂ ಇದು ತನ್ನದೇ ಆದ ರಾಜಕೀಯಾರ್ಥವನ್ನು ಧ್ವನಿಸುತ್ತಲೇ ಬಂದಿದೆ. ಅವುಗಳ ಭಿನ್ನ ರಾಜಕೀಯಾರ್ಥಗಳೇನು ಎಂಬ ಪ್ರಶ್ನೆಯನ್ನು ಕೈಗೆತ್ತಿಕೊಳ್ಳುವುದಾದರೆ ಆಗ ಇದರ ಬೇಕು ಬೇಡದ ಚರ್ಚೆ ಹೊಸ ಮಜಲೊಂದನ್ನು ಪ್ರವೇಶಿಸುತ್ತವೆ. ಆ ಪ್ರಯತ್ನಕ್ಕೆ ಪೂರಕವಾದ ಅಂಶವಾಗಿ ಈ ಚರ್ಚೆಯನ್ನು ದಾಖಲಿಸಲಾಗಿದೆ.

●

## ಅಭಿವ್ಯಕ್ತಿ : ಅಂದು

ಮಹಿಳಾ ಸಾಹಿತ್ಯದ ಮುನ್ನಡೆಯಲ್ಲಿ ಗುರುತಿಸಲೇ ಬೇಕಾದ ನಮ್ಮ ಹಿರಿಯ ಲೇಖಕಿಯರಲ್ಲಿ ಶ್ಯಾಮಲಾದೇವಿ ಅವರು ಪ್ರಮುಖರು. ಮಹಿಳಾ ಸಾಹಿತ್ಯ ಹಾಗೂ ಸಾಹಿತ್ಯ ಚರಿತ್ರೆಯಲ್ಲಿ ಅವರ ಸ್ಥಾನವನ್ನು ಕುರಿತ ಅವರ ಅಭಿಪ್ರಾಯಗಳು ಅವರ ಈ ಎರಡು ಲೇಖಗಳಲ್ಲಿವೆ - (ಸಂ)

# ೧. ಸಾಹಿತ್ಯ - ಸ್ತ್ರೀಯರ ಸ್ವಭಾವ ಸಿದ್ಧ ಕ್ಷೇತ್ರ *

ಶ್ಯಾಮಲಾದೇವಿ

ಬೆಳಗಾವಿ ಜಿಲ್ಲೆಯ ನಾಲ್ಕನೆಯ ಸಾಹಿತ್ಯ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಶ್ಯಾಮಲಾದೇವಿಯವರ ಭಾಷಣದಿಂದ

ಬರವಣಿಗೆಯ ಕಲೆಯ ಬಗ್ಗೆ ಮಾತ ನಾಡುವದು ಕಷ್ಟ. ಆದರೆ ಬರೆದು ಬಿಡುವದು ಮಾತ್ರ ಸುಲಭ. ಗಂಡಸರಿಗಿಂತ ಹೆಣ್ಣುಮಕ್ಕಳಿಗೆ ಅದು ಹೆಚ್ಚು ಸುಲಭ. ಬರವಣಿಗೆಯ ಬಗ್ಗೆ ಮಾತನಾಡುವ ಕೆಲಸವನ್ನು ಗಂಡಸರಿಗೆ ಬಿಟ್ಟು ಕೊಡೋಣ. ಬರವಣಿಗೆಯ ಕಸಬನ್ನು ನಾವು ಕೈವಶಪಡಿಸಿಕೊಳ್ಳೋಣ. ಶಾಸ್ತ್ರ ಅವರಿಗಿರಲಿ, ಕಲೆ ನಮಗಿರಲಿ. ಕಲೆ - ಅದು ಸಾಹಿತ್ಯ, ಕಲೆ, ಸಂಗೀತ ಕಲೆ, ಚಿತ್ರಕಲೆ ಯಾವುದೇ ಇರಲಿ - ಹೆಂಗಸರಿಗೆ ಅಂಗೈ ನೆಲ್ಲೀಕಾಯಿ. ದೇವರು ಆ ವರ ನಮಗೆ ಕೊಟ್ಟು ಬಿಟ್ಟಿದ್ದಾನೆ. ಒರಟು ತತ್ವ ವಿಚಾರಗಳನ್ನು ಗಂಡಸರು ಹೇಳುತ್ತ ಕೂಡಲಿ; ನಾವು ನಮ್ಮ ಮಧುರ ವಿನಯದಿಂದ ಮುಗುಳು ನಗೆಯಿಂದ, ಹಿತಮಿತ ವಚನ ಗಳಿಂದ, ಅನುಭವದ ಮಾತುಗಳಿಂದ ಮನಗಾಣಿಸಿ ಬಿಡೋಣ. ಗಂಡಸರಿಗೆ ತರ್ಕಶಾಸ್ತ್ರ-ವೇದಾಂತಗಳಿರಲಿ, ನಮಗೆ ಮೂರು ಸಾಲಿನ ಲಾಲಿ ಸಾಕು. ಮೂರು ಸಾಲುಗಳಲ್ಲಿ ವಾಮನಾವತಾರದ ಮೂರು ಹೆಜ್ಜೆಗಳನ್ನು ಅಳೆಯಬಲ್ಲೆವು ನಾವು.

ಹೂವಿನ್ಯಾಗ ಹುದುಗ್ಯಾನ, ಮಾಲ್ಯಾಗ ಮಲಗ್ಯಾನ|
ಮೊಗ್ಗ್ಯಾಗ ಕಣ್ಣು ತೆರೆದಾನ| ಲಿಂಗಯನ
ನೋಡಟಗೆ ನಿದ್ದಿ ಬಯಲಾಗಿ|

ಎಂಬೀ ಮೂರು ಸಾಲುಗಳಲ್ಲಿ ಮೂರು ಲೋಕದ ಸೌಂದರ್ಯ ತೋರಿಸಿದ ಹೆಣ್ಣು ಹೃದಯ ಸಾಮಾನ್ಯವೇ? ನೂರು ನೀತಿ ಪಾಠಗಳು ಮಾಡಲಾರದ ಕೆಲಸವನ್ನು, 'ಕ್ಷಮೆಯ ಸೆರಗ ಹೊಚ್ಚಿ ಕರೆದುಕೊಳ್ಳುವ' ತಾಯಿಯ ಒಂದು ನುಡಿ ಮಾಡಬಲ್ಲದು. ಸ್ತ್ರೀಯರ ಕಣ್ಸನ್ನೆಯು ಪುರುಷರ ಸಾಹಸಕ್ಕೆ ಸ್ಫೂರ್ತಿಯಾಗಬಹುದಾಗಿದೆ; ಒಂದೊಂದು ಸಲ ಅವರ ಸ್ವೈರಾಚಾರಕ್ಕೆ ಅಂಕುಶವಾಗಬಹುದಾಗಿದೆ. ಮನವೊಲಿಸುವ ಈ ವಿಲಕ್ಷಣಶಕ್ತಿಯೇ ಸಾಹಿತ್ಯದ ಮೂಲ

ಸೆಲೆಯಾಗಿದೆ. 'ಕಾಂತಾಸಮ್ಮಿತ' ಎಂಬುದಾಗಿ ಸಾಹಿತ್ಯದ ಲಕ್ಷಣ ಹೇಳಿದ್ದಾರೆ. ಸ್ತ್ರೀಯರು ಸ್ವಭಾವ ಸಹಜವಾಗಿ ಮನವೊಲಿಸುವಂತೆ ಸಾಹಿತ್ಯವೂ ಮನವೊಲಿಸಬೇಕಂತೆ. ಎಂದ ಮೇಲೆ ಮನವೊಲಿಸುವ ಗುಣ ಪಡೆದುಬಂದ ಲಲನೆಯರೆ ಸಾಹಿತ್ಯವನ್ನು ಸರಿಯಾಗಿ ಸೃಷ್ಟಿಸಬಲ್ಲರು ಎಂದು ಹೇಳಿದರೆ ತಪ್ಪಾಗುವದೆ? ಜಗತ್ತಿಗೆ ತಿಳಿಹೇಳುವ ಸಾಹಿತ್ಯಕ್ಕಿಂತ ಮನವೊಲಿಸುವ ಸಾಹಿತ್ಯವೇ ಬೇಕಾಗಿದೆಯೆಂದು ನನ್ನ ಭಾವನೆ. ನಮ್ಮ ಸುತ್ತು ಮುತ್ತೂ ನಡೆದ ಭಯಂಕರ ಮಾನವಹತ್ಯೆಯನ್ನು ನೋಡೋಣ. ಆಗ ಈ ಮಾತು ಮನದಟ್ಟಾಗುವದು. ಸ್ತ್ರೀಯ ಆರಾಧನ ಶಕ್ತಿಗೆ ಸ್ವಲ್ಪ ಅವಕಾಶ ಸಿಕ್ಕಿದ್ದರೆ, ಮನುಷ್ಯನ ಇತಿಹಾಸದಲ್ಲಿ ಯುದ್ಧವೆನ್ನುವದು ಹಳೆ ಮಾತಾಗುತ್ತಿತ್ತು. ಅದರ ಬದಲು ತನ್ನದನ್ನೇ ಸಾಧಿಸಬೇಕೆನ್ನುವ ಹಟ, ಬಲಪ್ರಯೋಗದಿಂದಲಾದರೂ ಎರಡನೆಯವರ ಮೇಲೆ ತನ್ನ ವರ್ಚಸ್ಸ ಹೇರುವ ಚಟ ಇವುಗಳಿಂದ ನಂದನವನವಾಗಬಹುದಾದ ಭೂತಲವು ಪ್ರಳಯತಾಂಡವ ಕ್ಷೇತ್ರವಾಗಿದೆ. ಇದು ತಪ್ಪಬೇಕಾದರೆ ಸ್ತ್ರೀಯರಿಗೆ ಪ್ರಪಂಚದ ಆಗು-ಹೋಗುಗಳಲ್ಲಿ, ರಾಷ್ಟ್ರ ರಾಷ್ಟ್ರಗಳ ಕಾರಭಾರದಲ್ಲಿ ತಕ್ಕ ಸ್ಥಾನ ದೊರೆಯಬೇಕು. ಅವಳ ವಾಸ್ತವ ವ್ಯವಹಾರ ಕುಶಲ ಸ್ವಭಾವಕ್ಕೆ ಎಡೆ ದೊರೆಯಬೇಕು. ಎಲ್ಲವನ್ನು ಸರಿಪಡಿಸುವ ಅವಳ ಕೈಚಳಕಕ್ಕೆ ಆಸ್ಪದ ಸಿಗಬೇಕು. ಅವಳ ಅಂತಃಕರಣಶಕ್ತಿಗೆ ಸ್ವಲ್ಪ ಅನುವು ಸಿಕ್ಕರೆ ಸಾಕು ಅವಳು ಸಾಮ್ರಾಜ್ಯವಾದಿಗಳನ್ನೂ ನಾಝಿವಾದಿಗಳನ್ನೂ ಕೂಡಿಸಬಲ್ಲಳು; ಶ್ರೇಷ್ಠ-ಕನಿಷ್ಠ, ಬಿಳಿ-ಕರಿ ಮೊದಲಾದ ಭೇದಗಳನ್ನು ಹೋಗಲಾಡಿಸಬಲ್ಲಳು. ಹಲವು ಕಾರ್ಯಗಳನ್ನು ಸ್ತ್ರೀಯು ಸ್ವಭಾವ ಸಹಜವಾಗಿ ಕೈಗೂಡಿಸಬಲ್ಲಳು. ಕೈಗಾರಿಕೆ, ಚಿತ್ರಕಲೆ, ಸಂಗೀತ ಇವುಗಳಂತೂ ಅವಳ ಸ್ವಂತದ ಸೊತ್ತು. ವರ್ಷಗಟ್ಟಲೆ ಪುರುಷರು ಸಂಗೀತ ಕಲೆಯಲ್ಲಿ ಪರಿಶ್ರಮಪಡಲಿ, ಸ್ತ್ರೀಯು ತನ್ನ ನಿಸರ್ಗದತ್ತ ಶಕ್ತಿಯಿಂದ ಒಂದು ತಿಂಗಳಲ್ಲಿ ಅವರನ್ನು ಮೀರಿಸಬಲ್ಲಳು. ರೇಡಿಯೋ ಕಾರ್ಯಕ್ರಮಗಳಲ್ಲಿ ಹೆಂಗಸರ ಸಂಗೀತ ಕಾರ್ಯಕ್ರಮಗಳೇ ಇಷ್ಟು ಕಳೆತುಂಬುವದೇಕೆ? 'ಕಲಾ ಕ್ಷೇತ್ರವು-ಅದು ಸಾಹಿತ್ಯ-ಚಿತ್ರ-ಸಂಗೀತ-ಕೈಗಾರಿಕೆ ಯಾವುದಕ್ಕೇ ಸಂಬಂಧಿಸಿರಲಿ-ಸ್ತ್ರೀಯರಿಗೆ ಸ್ವಯಂಸಿದ್ಧವಾದದ್ದು. ಅದರಲ್ಲಿ ಮೊದಲು ಸ್ತ್ರೀಯರು ಕಾಲಿಡಲಿ; ಆಮೇಲೆ ಪುರುಷರು ಬರಲಿ.'

ಸಾಹಿತ್ಯಕಲೆ ಸ್ತ್ರೀಯರಿಗೆ ಸ್ವಭಾವಸಿದ್ಧವಾದ್ದು; ಅವರು ಅದನ್ನು ಬೇಗನೆ ಕೈವಶಮಾಡಿಕೊಳ್ಳಬಲ್ಲರು; ಅವರ ಮನೋಧರ್ಮಕ್ಕೆ ಅಲ್ಲಿ ಸ್ವಾಭಾವಿಕ ಅವಕಾಶವಿದೆ; ಆದ್ದರಿಂದ ಈ ಕ್ಷೇತ್ರದಲ್ಲಿ ಅವರು ಒಡನೆ ಅಡಿಯಿಡಲಿ ಎಂದು ಈವರೆಗೆ ಹೇಳಿದ್ದೇನೆ. ಇನ್ನೂ ಒಂದು ಕಾರಣಕ್ಕಾಗಿ ಸ್ತ್ರೀಯರೇ ಕೆಲವೊಂದು ಬಗೆಯ ಸಾಹಿತ್ಯ ನಿರ್ಮಾಣವನ್ನು ಕೈಕೊಂಡರೆ ಒಳಿತಾಗುವದೆಂದು ನಾನು ಭಾವಿಸಿದ್ದೇನೆ. ಈಗ ಕನ್ನಡ ಪತ್ರಿಕೆಗಳು ಹೇರಳವಾಗಿ ಹೊರಡುತ್ತಿವೆ. ಕನ್ನಡ ಪತ್ರಿಕೆಗಳು ಕಡಿಮೆ ಎನ್ನುವ ಕಾಲ ಹೋಯಿತು. ದಿನಪತ್ರಿಕೆ-ವಾರಪತ್ರಿಕೆ- ಮಾಸಪತ್ರಿಕೆ ಬೇಕಾದಷ್ಟು ಬರುತ್ತಿವೆ. ಅವುಗಳಲ್ಲಿ ಕತೆ-ಹರಟೆ-ನಾಟಕ ಮೊದಲಾದ ರಂಜಕ ಸಾಹಿತ್ಯಕ್ಕೆ ಸಾಕಷ್ಟು ಸ್ಥಲ ಬಿಟ್ಟಿರುತ್ತಾರೆ. ಅದರಲ್ಲಿಯೂ ಸ್ತ್ರೀಯರ ಜೀವನಕ್ಕೋ, ಸಮಸ್ಯೆಗಳಿಗೋ, ಪ್ರಣಯ ವ್ಯವಹಾರಗಳಿಗೋ ಸಂಬಂಧಿಸಿದವೆಂದು ಹೇಳಿಕೊಳ್ಳುವ ಕತೆ-ಹರಟೆಗಳೇ ಹೆಚ್ಚಾಗಿರುತ್ತವೆ. ಪ್ರಿಯಕರ-ಪ್ರೇಯಸಿಯರ ಪ್ರೇಮ, ಅನಿವಾರ್ಯವಾಗಿ ತಪ್ಪು ಹಾದಿ ಹಿಡಿದ

ಹೆಣ್ಣುಮಗಳ ಗೋಳು, ಸ್ತ್ರೀಯರ ಮೇಲೆ ಸಮಾಜದ ಅನ್ಯಾಯ, ಇವೇ ಮೊದಲಾದವು ಸರ್ವ ಸಾಮಾನ್ಯವಾಗಿ ಅವುಗಳ ವಿಷಯಗಳು. ರಾಶಿ ರಾಶಿಯಾಗಿ ಹುಟ್ಟುತ್ತಿರುವ ಈ ಸಾಹಿತ್ಯವನ್ನು ನೋಡಿದಂತೆಲ್ಲಾ, "ದಯಮಾಡಿ ನಿಲ್ಲಿಸಿ ಬಿಡಿರಿ; ಹೆಣ್ಣಿಗೆ ಉಪಕಾರ ಮಾಡಲು ಹೊರಟ ದಯಾವೀರರು ತಾವು ದಯವಿಟ್ಟು ತಮ್ಮ ಲೆಕ್ಕಣಿಕೆಯನ್ನು ಅಲ್ಲಿಗೇ ತಡೆಯಿರಿ; ನಮ್ಮ ಸ್ವಭಾವವನ್ನು ವಿಂಗಡಿಸಿ ಹೇಳುವ ಕೆಲಸವನ್ನು ಅರಿಯದವರಾದ ನೀವು ದಯವಿಟ್ಟು ಮಾಡಬೇಡಿರಿ" ಎಂದು ನಮ್ಮ ಪುರುಷ ಬಾಂಧವರಿಗೆ ಭಿನ್ನವಿಸಬೇಕೆಂದೆನಿಸುತ್ತದೆ. ಸ್ತ್ರೀ ಪಕ್ಷಪಾತ ತೋರಿಸಹೋಗಿ ಸ್ತ್ರೀಯರ ವಿಡಂಬನೆಯನ್ನೇ ಮಾಡುವ ದೃಶ್ಯವು ಹಲವು ಸಲ ಕಂಡುಬರುತ್ತದೆ. ವೇಶ್ಯಾಜೀವನ, ದಲಿತ ಸ್ತ್ರೀಯ ಜೀವನ, ಆಸ್ತಿಯ ಹಕ್ಕಿಗೆ-ಪುನರ್ವಿವಾಹ ಹಕ್ಕಿಗೆ ಎರವಾದ ಹೆಣ್ಣಿನ ಬಾಳು ಇವುಗಳನ್ನು ಪುರುಷರು ಸರಿಯಾಗಿ ತಿಳಿಯವುದೇ ಕಷ್ಟ. ಆ ದುಃಖವನ್ನು-ಅವರೆಷ್ಟು ಸಹಾನುಭೂತಿಶಾಲಿಗಳಾಗಿರಲಿ-ಅವರು ಸಮರ್ಪಕವಾಗಿ ಬಿಚ್ಚಿಡಲಾರರು. ಆದುದರಿಂದ ಹೆಣ್ಣುಮಕ್ಕಳೇ ಲೆಕ್ಕಣಿಕೆಯೆತ್ತಿ ಈ ಸ್ತ್ರೀ ಸ್ವಭಾವ ವಿಡಂಬನೆ ಯನ್ನು ನಿಲ್ಲಿಸಲಿ. ತಮ್ಮ ಸಹಜ ಶಕ್ತಿಯಿಂದ ಸಾಹಿತ್ಯದಲ್ಲಿ ತಮ್ಮ ಸ್ಥಾನವನ್ನು ಕಂಡುಕೊಳ್ಳಲಿ. ಅನ್ಯಾಯದ ಪ್ರತೀಕಾರ ಬುದ್ಧಿಯು ಸ್ತ್ರೀಗೆ ಸಹಜವಾದುದಲ್ಲ; ಆದರೆ ಅವಳಿಗೆ ಸರಿಯಾದ ಅವಕಾಶ ದೊರೆತರೆ ತನಗಾಗುವ ಅನ್ಯಾಯವನ್ನು ಅವಳು ಹೋಗಲಾಡಿಸುವಳಲ್ಲದೆ, ವಿಶ್ವಮಾನವರಿಗಾಗುತ್ತಲಿರುವ ನೋವನ್ನೂ, ಗಾಯವನ್ನೂ ಅವಳು ಮಾಯಿಸಬಲ್ಲಳು. ಆದುದರಿಂದ ಅಕ್ಕತಂಗಿಯರೇ, ಎದ್ದೇಳಿರಿ; ಮತ್ತು ಸಾಹಿತ್ಯದಲ್ಲಿ ನಿಮ್ಮ ಗೌರವದ ಸ್ಥಾನವನ್ನು ಬೇಗನೆ ಕಂಡುಕೊಳ್ಳಿರಿ!

●

## ೨. ಸಾಹಿತ್ಯದಲ್ಲಿ ನಾರಿಯ ಸ್ಥಾನ

*ರಾಣಿಬೆನ್ನೂರಿನ ಕರ್ನಾಟಕ ಸಂಘದ ಪರವಾಗಿ ತಾ. ೧೭.೮.೩೯ನೆಯ ದಿನ ಕೂಡಿದ ಸಭೆಯಲ್ಲಿ ಸೌ. ಶ್ಯಾಮಲೆಯವರು ಮಾಡಿದ ಭಾಷಣದ ಮುಖ್ಯ ಭಾಗ.

ನಮ್ಮ ಪೂರ್ವಿಕರು ಹೆಣ್ಮಕ್ಕಳಿಗೆ ಸಮಾಜದಲ್ಲಿ ಯಾವ ಸ್ಥಾನಮಾನಗಳನ್ನು ಕೊಟ್ಟಿದ್ದರೆಂದು ನೋಡುವುದು ಬೇಡ. ಆದರೆ ಆಗಿನ ಹೆಂಗಸರಿಗೆ ಸ್ತ್ರೀಹೃದಯ ತಿಳಿದಿತ್ತು, ಮಾತೃತ್ವದ ಹೊಣೆಯನ್ನವರಿಗೆ ಕೆಲಮಟ್ಟಿಗೆ ಕೊಟ್ಟಿದ್ದರು, ಅದರಂತೆ ಸಾಹಿತ್ಯದಲ್ಲಿಯೂ ಸ್ತ್ರೀತ್ವಕ್ಕೆ ಮಹತ್ವವನ್ನೂ ಕೊಟ್ಟಿದ್ದರು ಎಂಬುದು ಆನಂದದ ವಿಷಯ. ಸಾಹಿತ್ಯದಲ್ಲಿ ಬಲ್ಲವರು ಮುಖ್ಯವಾಗಿ ಎರಡು ಭಾಗಗಳನ್ನು ಮಾಡುತ್ತಾರೆ; ಬುದ್ಧಿ ಪ್ರಧಾನ ಸಾಹಿತ್ಯ ಒಂದು; ಹೃದಯ ಪ್ರಧಾನ ಸಾಹಿತ್ಯ ಇನ್ನೊಂದು. ತತ್ತ್ವ, ವಿಜ್ಞಾನ, ವಿವಿಧ ಶಾಸ್ತ್ರಗಳು, ವಾಣಿಜ್ಯ ವ್ಯವಸಾಯ ಮೊದಲಾದವುಗಳು ಬುದ್ಧಿ ಪ್ರಧಾನ ಸಾಹಿತ್ಯದ ವಿಷಯಗಳು. ಜ್ಞಾನ ಅಥವಾ ವಿದ್ಯೆ ಅವರ ಗುರಿಯಾಗಿರುವುದು. ನಮ್ಮ ಸಾಹಿತ್ಯವು ಪ್ರಪಂಚದ ಸಾಹಿತ್ಯ ಸಮ್ಮೇಳನದಲ್ಲಿ ಮಹತ್ತ್ವ,

ಮಾನ್ಯತ್ವ, ಗಣ್ಯತ್ವ ಪಡೆಯಬೇಕಾದರೆ, ಕೀರ್ತಿಶಾಲಿಯಾಗಿ ಬಾಳಬೇಕಾದರೆ, ಇಂತಹ ಸಾಹಿತ್ಯ ಅಗತ್ಯವಾಗಿಬೇಕು. ಈ ಕಡೆಗೆ ನಮ್ಮ ಉಚ್ಚಶಿಕ್ಷಿತ ಪದವೀಧರರ ಗಮನವು ಹೋಗುತ್ತಿರುವುದು ಸಮಾಧಾನಕರವಾದ ಸಂಗಿತ. ಈ ವಿಷಯವು ಇಂದಿನ ಉಪನ್ಯಾಸದ ಕ್ಷೇತ್ರದಲ್ಲಿ ಬರುವುದಿಲ್ಲ ವಾದುದರಿಂದ-ಅದು ಮುಂದಿನ ನನ್ನ ವಿವರಣೆಯಿಂದ ತಿಳಿದು ಬರುವುದು-ಇಷ್ಟಕ್ಕೆ ನಿಲ್ಲಿಸುತ್ತೇನೆ. ಇಂದಿನ ಉಪನ್ಯಾಸದ ಮುಖ್ಯ ವಿಷಯವಾದ ಹೃದಯ ಪ್ರಧಾನ ಸಾಹಿತ್ಯದ ಕಡೆಗೆ ಹೊರಳುತ್ತೇನೆ.

ನಾವೀಗ ಸಾಮಾನ್ಯವಾಗಿ ಸಾಹಿತ್ಯವೆಂದು ಕರೆಯುತ್ತಿರುವುದು ಈ ಹೃದಯ ಪ್ರಧಾನ ಸಾಹಿತ್ಯವನ್ನೆ. ಸಂತೋಷವನ್ನುಂಟುಮಾಡುವುದು ಈ ಸಾಹಿತ್ಯದ ಧರ್ಮ. ನಾದ - ರಸ- ಸೌಂದರ್ಯಗಳು ಇದರ ಮೈಗುಣಗಳು. ನಾದ ಮಾಧುರ್ಯದಿಂದ ರಸಪರಿಪಾಕದಿಂದ ಸೌಂದರ್ಯ ಲಹರಿಯಿಂದ ಹೃದಯವನ್ನು ನೆನೆಸಿ ತಣಿಸುವುದರಿಂದ ಇದಕ್ಕೆ ನಾನು ಹೃದಯ ಪ್ರಧಾನಸಾಹಿತ್ಯ ವೆಂದು ಕರೆದಿದ್ದೇನೆ. ಇದು ಕಾವ್ಯ. ಛಂದೋಬದ್ಧವಾದ ರಚನೆಯಷ್ಟೇ ಕಾವ್ಯವಲ್ಲ; ಅದಕ್ಕೆ ಪದ್ಯ ಇಲ್ಲವೆ ಕವಿತೆ ಎಂದು ಹೇಳಬಹುದು. ಹೃದಯವನ್ನು ಮಿಡಿಯುವ ಸಾಹಿತ್ಯ ಪ್ರಪಂಚವೆಲ್ಲಾ ಕಾವ್ಯವೆನಿಸುವುದು. ಈ ಕಾವ್ಯದ ದೇವತೆ ಸರಸ್ವತಿ ಎಂದು ಆರ್ಯರು ಹೇಳಿದ್ದಾರೆ. ಅದೇ ಆರ್ಯಸಂಸ್ಕೃತಿಯನ್ನು ಅನುಸರಿಸಿಕೊಂಡು ಬಂದಿದ್ದ ನಮ್ಮ ಕನ್ನಡ ಸಾಹಿತ್ಯಕ್ಕೂ ಶಾರದೆಯೆ ದೇವರು. ಕಾವ್ಯಕ್ಕೆ ಶಾರದೆಯನ್ನು ದೇವರನ್ನಾಗಿ ಕಲ್ಪಿಸಿರುವುದು ಸುಮ್ಮನೆ ಅಲ್ಲ. ಅದರಲ್ಲಿ ತಾತ್ವಿಕವಾದ ಅರ್ಥವಿದೆ. ಇಲ್ಲಿ ಸ್ತ್ರೀತ್ವಕ್ಕೆ ಮನ್ನಣೆ ಕೊಟ್ಟಿದ್ದಾರೆ. ಸಮಾಜ ಪುರುಷನ ಬುದ್ಧಿ ಪುರುಷನಾದರೆ, ಅವನ ಹೃದಯ ನಾರಿ, ಪುರುಷನು ಸಮಾಜವನ್ನು ಬುದ್ಧಿ ಬಲದಿಂದ ಆಳುತ್ತಿದ್ದರೆ, ಸ್ತ್ರೀ ಹೃದಯದಿಂದ ಅದನ್ನಾಳುತ್ತಾಳೆ. ಅದಕ್ಕೆಯೆ ಜ್ಞಾನಕ್ಕೆ ಅಥವಾ ವಿದ್ಯೆಗೆ ಅಧಿಪತಿ ಸಿದ್ಧಿವಿನಾಯಕ (ಪುರುಷ)ನಾದರೆ, ಹೃದಯಂಗಮ ಸಾಹಿತ್ಯವಾದ ಕಾವ್ಯಕ್ಕೆ ಸರಸ್ವತಿ (ನಾರಿ)ಯು ಅಧಿದೇವತೆಯಾದಳು. ಸ್ತ್ರೀ ನುಡಿದುದೇ ಕಾವ್ಯ. ಏಕೆಂದರೆ ಸ್ತ್ರೀವಾಣಿಗೆ ಹೃದಯವನ್ನರಳಿಸಿ ಜೀವನವನ್ನು ಸಂಸ್ಕರಿಸುವ ಶಕ್ತಿಯಿರುವುದು; ಕಾವ್ಯವು ಆ ವಾಣಿಯನ್ನು ಅಳವಡಿಸಿಕೊಳ್ಳಬೇಕು. ಕಾವ್ಯದ ಸ್ವರೂಪದ ಕಲ್ಪನೆಯನ್ನು ಕೊಡುವುದಕ್ಕಾಗಿ 'ಕಾಂತಾಸಂಮಿತಿ' ಎಂಬ ಸೂತ್ರದಲ್ಲಿ ಹೇಳಿದುದಾದರೂ ಈ ಮಾತನ್ನೇ ಬಲಪಡಿಸುವುದು; ಸ್ಪಷ್ಟಪಡಿಸುವುದು. ಕಾವ್ಯವು ಕಾಂತಾವಚನದಂತೆ ಮಂಜುಲವೂ ಮಧುರವೂ ಸುಂದರವೂ ಆಗಿದೆ ಎಂದೇ ಇದರ ಅರ್ಥ. ಕಾಂತಾ ಎಂದರೆ ಪ್ರಿಯೆ ಅಥವಾ ಹೆಂಡತಿ ಎಂಬ ಅರ್ಥದಲ್ಲಿಲ್ಲ. ಇದು ಸ್ತ್ರೀಜಾತಿ ಎಂಬ ವ್ಯಾಪಕಾರ್ಥದಲ್ಲಿರುವುದು.

ಕನ್ನಡ ಜನತೆಯ ಹೃದಯವನ್ನು ಗೆಲಿದಿದ್ದ ಜೈಮಿನಿ ಭಾರತವನ್ನು ಬರೆದ ಲಕ್ಷ್ಮೀಶನು, ಅದನ್ನು ರಚಿಸುವ ಮೊದಲು ತನ್ನ "ಕಾವ್ಯವು ಸಕಲಜನರಿಂದ ಸುಶ್ರಾವ್ಯವಾಗುವುದಕ್ಕಾಗಿ ಪದನಾಬ್ಜದಲ್ಲಿ ನೀನೇ ವ್ಯಾಪಿಸಿದ್ದು ಅಮಲ ಸುಮತಿಯನು ತಾ ಯೆನಗೆ ತಾಯೆ" ಎಂದು ಶಾರದೆಯನ್ನು ಸ್ತುತಿಸುತ್ತಾನೆ. ಇದರಲ್ಲಿ ಲಕ್ಷ್ಮೀಶನು 'ಕಾಂತಾ ಸಂಮಿತಿ' ಸೂತ್ರವನ್ನು ಇನ್ನಷ್ಟು ಬಿಡಿಸಿ ಹೇಳಿದ್ದಾನೆ. ಇಲ್ಲಿ ಶಾರದಾರೂಪದ ಸ್ತ್ರೀತ್ವವನ್ನು ಮಾತಿನ ತಾಯಿಯಾದ ಮುಖಾಬ್ಜ

ದಲ್ಲಿ, ರಸಸ್ಥಾನವಾದ ರಸನೆಯಲ್ಲಿ-ನಾಲಿಗೆಯಲ್ಲಿ-ಆವಾಹನಮಾಡಿಕೊಳ್ಳುತ್ತಿದ್ದಾನೆ ಲಕ್ಷ್ಮೀಶ. 'ಶಾರದೆಯ ಕರುಣದಿಂದ'ಲೇ ಜೈಮಿನಿ ಭಾರತವನ್ನು ಹೇಳಿದ್ದಾನೆ. ಅವಳು ತನ್ನ ವೀಣೆಯನ್ನು ನುಡಿಸುವಂತೆ ಇವನ ವಾಣಿಯಿಂದ ಕಾವ್ಯವನ್ನು ನುಡಿಸಿದ್ದಾಳೆ. ಆದುದರಿಂದಲೇ ಅದು ಅತ್ಯಂತ ಜನಪ್ರಿಯವಾಯಿತೆಂದು ಹೇಳಬಹುದು.

ಆದರೆ ಅಂತಹ ಹೃದಯ ಸ್ಪರ್ಶಿಯಾದ ವಾಕ್ಸಿದ್ಧಿಯುಳ್ಳ ನಾರಿಗೆ, ಪ್ರತ್ಯಕ್ಷ ಸಾಹಿತ್ಯ ಕ್ಷೇತ್ರದಲ್ಲಿ ಅಂತಹ ಸಾಹಿತ್ಯವನ್ನು ನಿರ್ಮಾಣ ಮಾಡುವುದಕ್ಕೆ. ಹಿಂದಕ್ಕೆ ತೀರ ಸ್ವಲ್ಪ ಅವಕಾಶವಿದ್ದಿತೆಂದು ಕಂಡುಬರುತ್ತಿದೆ. ನಮ್ಮ ಕರ್ನಾಟಕ ಕವಿ ಕುಲದಲ್ಲಿ ನಾರಿಯರ ಹೆಸರುಗಳೇ ಕೇಳಬರುವುದಿಲ್ಲ. ಇದ್ದರೆ ಒಂದೆರಡಿರಬಹುದು. ಈ ಪರಿಸ್ಥಿತಿಗೆ ಆಗಿನ ಸಮಾಜ ಪದ್ಧತಿಯಲ್ಲಿ ಸ್ತ್ರೀಗಿದ್ದ ನಿಕೃಷ್ಟತೆ, ನಿರಕ್ಷರತೆ, ಪ್ರೋತ್ಸಾಹ ನವೀನತೆ ಮೊದಲಾದವೇ ಕಾರಣವೆಂಬುದು ನಿಸ್ಸಂದೇಹ. ಇದು ನಮ್ಮ ಸಾಹಿತ್ಯದ ಬೆಳವಣಿಗೆಯನ್ನು ಅರ್ಧದಷ್ಟು ಕುಗ್ಗಿಸಿದೆ ಎಂದು ವಿಷಾದದಿಂದ ಹೇಳಬೇಕಾಗಿದೆ. ಆದರೂ ಕೆಲ ಕನ್ನಡ ಮಹಿಳೆಯರು ಸತ್ವಬಲದಿಂದ ಮುಂದಕ್ಕೆ ಬಂದು, ವಾಙ್ಮಯ ಗಗನಮಂಡಲದಲ್ಲಿ ಮಿಂಚಿದ್ದಾರೆ. ಅವರ ಬೆಳಕನ್ನು ನಾವು ಈಗಲೂ ನೋಡಬಹುದು. ಹಿಂದಿನ ಸಾಹಿತ್ಯದ ಕಡೆ ಸ್ವಲ್ಪ ಕಣ್ಣು ಚೆಲ್ಲಿದರೆ ಅಕ್ಕಮಹಾದೇವಿ ಮೊದಲಾದ ಶಿವಶರಣೆಯರ ಪ್ರತಿಭೆ ನಮ್ಮನ್ನು ದಂಗುಬಡಿಸುವುದು. ನಮ್ಮ ಕನ್ನಡಿತಿಯರು ಉಪನಿಷತ್ ಕಥೆಗಳಲ್ಲಿಯ ಋಷಿ ಪತ್ನಿಯರಂತೆ, ಆಧ್ಯಾತ್ಮಕ ವಿಷಯವನ್ನು ತಮ್ಮ ಸಹಜವಾಗಿ ಹೊಮ್ಮಿದ ತಿಳಿಗನ್ನಡದಲ್ಲಿ ಚರ್ಚಿಸಬಲ್ಲವರಾಗಿದ್ದರು, ಅವರ ವಚನಗಳು ಮನಮುಟ್ಟುವ ಗುಣವುಳ್ಳವಾಗಿ ರುವವು ಎಂಬುದನ್ನು ಈ ಶಿವಶರಣೆಯರು ಸಿದ್ಧ ಮಾಡಿರುವರು.

ಇನ್ನು ಕಾವ್ಯ ಪ್ರಪಂಚದಲ್ಲಿ ಕಂತಿ, ಹೊನ್ನಮ್ಮರ ಹೆಸರುಗಳು ಕೇಳಿಬರುತ್ತಿವೆ. ಕಂತಿ ಪಂಪರ ಸಮಸ್ಯೆಗಳು ಎಂಬ ಮಾತು ಸಾಹಿತ್ಯೇತಿಹಾಸದಲ್ಲಿ ಪ್ರಸಿದ್ಧವಿದೆ. ಅಭಿನವ ಪಂಪನೆಂಬ ಪ್ರಸಿದ್ಧನಾದ ಕನ್ನಡ ಕವಿಯು ಕೊಟ್ಟ ಸಮಸ್ಯೆಯನ್ನು ಕಂತಿ ಎಂಬ ಕವಯಿತ್ರಿಯು ಪೂರ್ತಿ ಮಾಡುತ್ತಿದ್ದಳು. ಹೊನ್ನಮ್ಮನು ಹದಿಬದೆಯ ಧರ್ಮವನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಸ್ಥಿರವಾದ ಕಾಣಿಕೆಯನ್ನು ಕೊಟ್ಟಿದ್ದಾಳೆ. ಮೈಸೂರು ಆಸ್ಥಾನದಲ್ಲಿ ಹೊನ್ನಮ್ಮ ಪಂಡಿತ ಕವಯಿತ್ರಿ ಯಾಗಿದ್ದಳು. ಮಹಾರಾಜನು ತನ್ನ ರಾಣಿಯ ಮೂಲಕ ಇವಳಿಗೆ ಕಾವ್ಯವನ್ನು ರಚಿಸುವಂತೆ ತಿಳಿಸುತ್ತಾನೆ. ಅವರ ಸಂದರ್ಭವನ್ನು ಹೊನ್ನಮ್ಮ ಈ ರೀತಿ ಹೇಳಿದ್ದಾಳೆ :

ಇವಳು ಕಾವ್ಯಾಲಂಕಾರ ನಾಟಕಗಳ | ಪವಣಿಗೆಯರಿವ ಬಲ್ಲವಳು ||
ಇವಳ ಸಾಹಿತ್ಯದ ಸವಿಗೆಳಸುತ್ತೆನ್ನ | ಕಿವಿಗಳು ಕದಬುಗೊಂಡಿಹವು ||
ಪವಣಿಗೆಯೊಪ್ಪೆ ಪುರುಳು ಪೊಗರೇರೆಯಂ | ಗವಿಸೆಯಲಂಕಾರಗಳು ||
ಕವಿದು ಪರಿಯೆ ರಸದೊಳ್ಗಂಪು ಗಮ್ಮನೆ | ಕವಿತೆಯೊಂದನು ಪೇಳಿಸಿಂದು||

ಇವಳು ಇದರಲ್ಲಿ ತನ್ನ ಪಾಂಡಿತ್ಯವನ್ನು ತಾನೇ ಹೊಗಳಿಕೊಂಡಿದ್ದಾಳೆ ಎಂದು ಯಾರೂ ಹೇಳುವಂತಿಲ್ಲ. ಈ ಎರಡು ಪದ್ಯಗಳಲ್ಲಿಯೆ ಪದಪ್ರಯೋಗಗಳ ಪ್ರೌಢತೆ, ರಸಾಲಂಕಾರಗಳ ಬಗ್ಗೆ ಇರುವ ಜ್ಞಾನ, ಉಚಿತ ಶಬ್ದಗಳನ್ನು ಸಹಜವಾಗಿಯೇ ಪೋಣಿಸುವ ಜಾಣ್ಮೆ, ಶುದ್ಧ

ಮತ್ತು ಸುಂದರ ಸರಣಿ ಇವುಗಳನ್ನೆಲ್ಲಾ ಮೆರೆದು ಬಿಟ್ಟಿದ್ದಾಳೆ. ಇವೇ ಹೊನ್ನಮ್ಮನ ಕಾವ್ಯ ರಚನಾ ಯೋಗ್ಯತೆಯನ್ನು ಹೇಳುತ್ತಿವೆ.

ಇನ್ನೀ ಪ್ರೌಢಕಾವ್ಯಲೋಕದಿಂದ ಇನ್ನೊಂದು ವಿಶಾಲ ಪ್ರಪಂಚಕ್ಕೆ ಹೋಗೋಣ. ಅಲ್ಲಿ ನಮ್ಮ ಸೊಬಗನ್ನೂ ಸುಗಂಧವನ್ನೂ ಬೀರುವ ಸಾವಿರಾರು ಹೂಗಳಿವೆ; ಸವಿಯನ್ನೂ ಪುಷ್ಟಿಯನ್ನೂ ಕೊಡುವ ಸಾವಿರಾರು ಹಣ್ಣುಗಳಿವೆ. ಅಲ್ಲಿ ರಮಿಸದೆ ವಿಹರಿಸದೆ ಯಾವ ರಸಿಕನೂ ಮುಂದಡಿ ಇಡಲಾರನು. ಆ ತೋಟವೆಂದರೆ ಜೀವನ ಸಂಗೀತಗಳದು, ಗರತಿಯ ಹಾಡುಗಳದು ಎಂದು ನೀವು ಈಗಾಗಲೇ ಗ್ರಹಿಸಿರಬಹುದೆಂದು ನಾನು ತಿಳಿದಿದ್ದೇನೆ. ಈ ಹಾಡುಗಳು ಒಂದು ಬಗೆಯಿಂದ ವೇದ ಮಂತ್ರಗಳಂತಿವೆ. ವೇದ ಮಂತ್ರಗಳು ಬರೆಹವೂ ಬರೆಹದ ಸಾಧನಗಳೂ ಇಲ್ಲದ ಕಾಲದಲ್ಲಿ ಹುಟ್ಟಿ ಬೆಳೆದು ಬಾಯಿಂದ ಬಾಯಿಗೆ ನಡೆದು ಬಂದು ಬಾಳಿದಂತೆ, ಈ ಜನಪದಗೀತಗಳಾದರೂ ಬರೆಹವಿಲ್ಲದಾಗಲೂ ಬರೆಹವಿದ್ದರೂ ಅದನ್ನು ತಿಳಿಯದ ಮೂಲಕ ನಿರುಪಯುಕ್ತವಾಗಿದ್ದಾಗಲೂ ಹುಟ್ಟಿ ಬೆಳೆದು ಬಂದಿವೆ. ಮೊನ್ನೆ ಮೊನ್ನೆಯವರೆಗೂ ಅವು ಬಾಯಲ್ಲಿಯೆ ಇದ್ದವು. ಈ ಹಾಡುಗಳೆಂದರೆ ಜನಜೀವನದ ಸತ್ವತತ್ವಗಳ ಕಾವ್ಯರೂಪಗಳು. ಇವನ್ನು ವೇದಗಳಂತೆ ಅಪೌರುಷೇಯಗಳೆಂದೂ ಹೇಳಬಹುದು. ಜೀವನರಂಗದಲ್ಲಿ ತಪಿಸಿ ಮುಪ್ಪಾದ, ಅನುಭವಿಕರಾದ ಹೆಣ್ಮಕ್ಕಳ ಹೃದಯದಿಂದ ಸ್ವಯಂ ಸ್ಫೂರ್ತಿಯಿಂದ ಹೊರಟ ಕಾವ್ಯದ ಚುಟಕಗಳಿವು.

ಹಿಂದಕ್ಕೆ, ಪೂರ್ವಕಾಲದಲ್ಲಿ ನಾವು ಎಂದರೆ ಸುಶಿಕ್ಷಿತರೆಂದು ಗಣ್ಯರಾದವರು ಈ ಜೀವನಸಂಗೀತದ ಕಡೆಗೆ ಲಕ್ಷ್ಯ ಕೊಡಲಿಲ್ಲ. ಕೆಲವರಂತೂ ತಿರಸ್ಕರಿಸಿದುದುಂಟು. ಇವುಗಳನ್ನು ಬರೆದಿಡುವ ಗೊಡವೆಗೆ ಯಾರೂ ಹೋಗಲಿಲ್ಲ. ಅವು ಹಳ್ಳಿಯ ಹೆಣ್ಮಕ್ಕಳದೇ ಒಂದು ಪ್ರಪಂಚದಲ್ಲಿ ಬರೀ ಬಾಯಲ್ಲಿ ಉಳಿದುಬಿಟ್ಟಿದ್ದವು. ಅವು ಇಂದಿನವರೆಗೂ ಬಾಳಿರುವುದು ನಮ್ಮ ಸಾಹಿತ್ಯದ ಸುದೈವವೆಂದು ಹೇಳಬೇಕು. ಅವುಗಳಲ್ಲಿ ನಮಗಿಂದು ನಾದ ರಸಸೌಂದರ್ಯಗಳ ದರ್ಶನವಾಗತೊಡಗಿದೆ; ಅವುಗಳಿಂದ ಆನಂದದ ಅನುಭವವಾಗುತ್ತಿದೆ. ಇವು ನಿಜವಾಗಿಯೂ ಕಾವ್ಯಗಳು. ಸಾಹಿತ್ಯವು ಜನಜೀವನದ ಪ್ರತಿಬಿಂಬವಾದುದರಿಂದ ಹಳ್ಳಿಯ ಹಾಡುಗಳೆಂದರೆ ಶ್ರೇಷ್ಠ ಸಾಹಿತ್ಯವೇ ಸರಿ. ಈಗ ಈ ಸಾಹಿತ್ಯಕ್ಕಿದ್ದ ಅಸ್ಪೃಶ್ಯತೆಯು ಕಳೆದು ಹೋಗಿದೆ. ಇಂದು ಪಂಡಿತರು ಸಾಹಿತ್ಯಮಂದಿರದಲ್ಲಿ ಮಾನ್ಯವಾದ ಸ್ಥಾನವನ್ನು ಇವಕ್ಕೆ ಕೊಡುತ್ತಿದ್ದಾರೆ. ಈ ಗರತಿಯ ಹಾಡುಗಳೆಲ್ಲ ಹೆಣ್ಣು ಮಕ್ಕಳ ಕೃತಿಗಳು.

ನಮ್ಮ ನಾಡಿನ ಹೆಣ್ಣುಮಕ್ಕಳ ಹೃದಯವನ್ನೂ ಅವರ ಜೀವನವನ್ನೂ ಜನ ಜೀವನದ ವಾಸ್ತವಚಿತ್ರಗಳನ್ನೂ ಕನ್ನಡ ಸಂಸ್ಕೃತಿಯನ್ನೂ ತಿಳಿದುಕೊಳ್ಳಬೇಕಾದರೆ ಈ ಹಾಡುಗಳೇ ಪ್ರಮಾಣಗಳು. ತಮ್ಮ ಅನುಭವಕ್ಕೆ ಬಂದ ವಿಷಯಗಳನ್ನು, ತಮ್ಮ ಪ್ರಪಂಚದಲ್ಲಿಯ ವಿಷಯಗಳ ಉಪಮೆಗಳನ್ನು ಕೊಟ್ಟು, ಸರಲ ಸಹಜ ಭಾಷೆಯಲ್ಲಿ ಹೇಗೆ ಹೆಣೆದಿರುತ್ತಾರೆಂಬುದಕ್ಕೆ ಕೆಲವು ಉದಾಹರಣೆಗಳನ್ನಿಲ್ಲಿ ಹೇಳುತ್ತೇನೆ. ಬಾಳಿನ ಸುಖ ದುಃಖಗಳನ್ನೂ, ಪ್ರೀತಿ ಅಪ್ರೀತಿಗಳನ್ನೂ, ಒಳಿತು ಕೆಡಕುಗಳನ್ನೂ ಸಹಜಸಿದ್ಧವಾದ ರಸಪರಿಪಾಕದಲ್ಲಿ ಎದ್ದಿ ಇಟ್ಟಂತೆ ಈ ಪದ್ಯಗಳಿವೆ ಎಂಬುದನ್ನು ಕಾಣಬಹುದು.

ಮಗಳನ್ನು ಗಂಡನ ಮನೆಗೆ ಕಳುಹುವಾಗ ತಾಯಿ ಅಳುತ್ತಾಳೆ; ಅವಳನ್ನು ಮಗಳು ಸಮಾಧಾನ ಪಡಿಸುವುದನ್ನು ನೋಡಿ :

ಹೆಣ್ಣು ಹುಟಿಯಲಿ ಬ್ಯಾಡ | ಹೆರವರಿಗೆ ಕೊಡಬ್ಯಾಡ
ಹೆಣ್ಣು ಹೋಗಾಗ ಅಳಬ್ಯಾಡ ಹಡದವ್ವ |
ಸಿಟ್ಟಾಗಿ ಶಿವಗ ಬೈ ಬ್ಯಾಡ ||

ಇವು ನಿಜವಾಗಿ ಸಮಾಧಾನಕ್ಕಾಗಿ ಹೇಳಿದ ಮಾತುಗಳಾದರೂ ಮಗಳ ಹೃದಯದ ನೋವು ಎಷ್ಟೊಂದು ತೀವ್ರವಾಗಿ ಚಿತ್ರಿತವಾಗಿದೆ ಈ ಪದ್ಯದಲ್ಲಿ!

ಸಹಜವಾದ ಉಪಮೆಗಳಿಂದ ಭಾವಕ್ಕೆ ಅರ್ಥಕ್ಕೆ ಹೇಗೆ ಮೆರುಗು ಬಂದಿದೆ ಎಂಬುದಕ್ಕೆ:

ತಾಯಿ ಮಕ್ಕಳ ದನಿಯು | ತಾಳಬಾರಿಸಿಧಾಂಗ
ಜೋಡಕಿನ್ನೂರಿ ನುಡಿಧಾಂಗ | ಹಲಸಂಗಿ |
ಹೊತ್ತೇರಿ ತಾಸೆ ಬಡಿಧಾಂಗ ||
ತಾಯಿಲ್ಲ ತವರೀಗಿ ಹೋಗದಿರು ನನಮನವ
ನೀರಿದ್ದ ಕೆರೆಗೆ ಕರ ಬಂದು | ತಿರುಗಾಗ |
ಆಗ ನೋಡಿದರ ಮುಖಗೋಳ ||

ಜೀವನದೊಳಗಿನ ಮಧುರ ವಿನೋದಕ್ಕಾಗಿ ಈ ಪದಗಳನ್ನು ಕೊಡಬಹುದು :

ಹಳ್ಳದ ದಂಡ್ಯಾಗ | ಹಣ್ಣು ಮೆಣಸಿನಕಾಯಿ |
ದಣಸ್ಯಾಡತಾವ ಗಿಳಿಹಿಂಡು | ಅಣ್ಣಯನ
ಕುಣಸ್ಯಾಡತಾಳ ಅತ್ತೀಗಿ ||
ಹಣ್ಣು ಶಾವಿಗಿ ಬಲ್ಲ ಚಿನ್ನಿಸಕ್ಕರಿ ಬಲ್ಲ |
ಹೆಣ್ಣೆಂಬ ಶಬುದ ಬಡವೊಲ್ಲ | ನನತಮ್ಮ |
ಹೆಣ್ಣು ಕೊಡತೀನಿ ಉಣ್ಣೇಳೋ ||

ನಮ್ಮ ಶ್ರೇಷ್ಠ ತರಗತಿಯ ಕವಿಗಳಿಗೆ ಗಿಳಿಗಳು ಮಾವಿನ ಹಣ್ಣುಗಳನ್ನು ತಿನ್ನುವುದು ಮಾತ್ರ ಗೊತ್ತಿರಬಹುದು. ಆದರೆ ಯಾವಾಗಲೂ ನಿಸರ್ಗದಲ್ಲಿಯೇ ಬಾಳ್ವೆ ಮಾಡುವ ಹಳ್ಳಿಯ ಹೆಂಗಸರಿಗೆ ಮಾತ್ರ ಗಿಳಿಗಳು ಹಣ್ಣು ಮೆಣಸಿಕಾಯಿಗಳನ್ನು ಪ್ರೀತಿಯಿಂದ ತಿನ್ನುತ್ತವೆಂಬುದು ಗೊತ್ತು. ಅವರು ತಮ್ಮ ಸೂಕ್ಷ್ಮ ನಿಸರ್ಗ ನಿರೀಕ್ಷಣೆಯ ಸತ್ಯಜ್ಞಾನವನ್ನು ಈ ಪದ್ಯದಲ್ಲಿಯ ಉಪಮೆಯಲ್ಲಿ ತೋರಿದ್ದಾರೆ.

ಅಣ್ಣ ತಮ್ಮಂದಿರ ಮೇಲಿನ ಅಕ್ಕ ತಂಗಿಯರ ಪ್ರೀತಿ

ಕುದುರೀಯ ಕುಣಿಸೂತ | ಆನೀಯ ನಡಿಸೂತ |
ಅರಗಿಣಿಗೆ ಮಾತ ಕಲಿಸೂತ | ಬರತಾನ |
ಬಳಿಗೊಂಡವಮ್ಮ ಬದಿಗಾಗ ||

ಎಂಬ ಪದ್ಯದಲ್ಲಿ ವರ್ಣನೆಯಲ್ಲಿ ಬಹುಮಾಡಿ, ಕೊನೆಯ "ಬಳಿಗೊಂಡವಮ್ಮ ಬಯಲಾಗ" ಎಂಬ ಮಾತಿನಲ್ಲಿ ತುಂಬಿಗೊಂಡಿದೆ.

ಹೀಗೆ ಸುಂದರವಾದ ಅನೇಕ ಪದ್ಯಗಳನ್ನು ಕೊಡಬಹುದು. ಆದರೆ ಕೇವಲ ಗರತಿಹಾಡುಗಳ

ಸವಿಯ ದಿಗ್ದರ್ಶನಮಾಡಿ ಮುಂದೆ ಮುಂದೆ ಸಾಗೋಣ. ತಾವೆಲ್ಲರು ಅವುಗಳನ್ನು ಬೇರೆಯಾಗಿ ಓದಿಕೊಂಡು ಸಂಪೂರ್ಣ ರಸಾನುಭವವನ್ನು ಪಡೆಯಬಹುದು.

ನಮ್ಮ ಹೆಣ್ಣುಮಕ್ಕಳು ಅನುಸರಿಸಿದ ಛಂದಸ್ಸು ಅಚ್ಚ ಕನ್ನಡದ ನಡೆಗೆ ಒಪ್ಪುವಂತಹುದು; ಜೀವನ ಸಂಗೀತಕ್ಕೆ ಒಪ್ಪುವಂತಹುದು; ತೊಟ್ಟಿಲು ತೂಗುವುದು, ಮಕ್ಕಳನ್ನು ಚುಕ್ಕುತಟ್ಟುವುದು, ಬೀಸುವುದು ಕುಟ್ಟುವುದು, ಮೊದಲಾದ ಕೆಲಸಗಳಲ್ಲಿ ತೊಡಗಿದಾಗ ಹಾಡುವುದಕ್ಕೆ ಉಪಯುಕ್ತವಾದುದು. ಇದು ಜನಪದಕ್ಕೆ ಒಳ್ಳೆಯ ಪ್ರಿಯವಾದ ತ್ರಿಪದಿ. ಜಾನಪದ ಕವಿಯಾದ ಸರ್ವಜ್ಞನು ಕೂಡ ಈ ಜಾನಪದ ಸಂಗೀತದ ತ್ರಿಪದಿಯನ್ನೇ ತೆಗೆದುಕೊಂಡಿದ್ದಾನೆ. ಈ ತ್ರಿಪದಿಗಳನ್ನೇ ಸುಸಂಸ್ಕೃತರಾದ ಕವಿಗಳು ಸಂಸ್ಕರಿಸಿ ಷಟ್ಪದಿಗಳನ್ನು ಮಾಡಿಕೊಂಡರೆಂದು ಬಲ್ಲವರ ಅಭಿಪ್ರಾಯವಿದೆ. ಆಗಿನ ಕವಿಗಳಿಗೆ ತಮ್ಮ ಕೃತಿಗಳು ಜನಸಾಮಾನ್ಯರಿಗೂ ಸುಲಭವೂ ಸೇರುವಂತಹವೂ ಒಗ್ಗುವಂತಹವೂ ಆಗಬೇಕೆಂದು ಅಪೇಕ್ಷೆಯಾದಾಗ, ಕನ್ನಡ ಕಾವ್ಯಾತ್ಮನಿಗೆ ಕನ್ನಡ ಶರೀರವೇ ಬೇಕೆಂದು ಎನಿಸಿದಾಗ ಜಾನಪದ ಛಂದಸ್ಸನ್ನು ಸ್ವೀಕರಿಸಲೇಬೇಕಾದುದು ಆಶ್ಚರ್ಯವಲ್ಲ. ಹೆಂಗಸರದೇ ಆದ ಸಾಂಗತ್ಯವನ್ನು ರತ್ನಾಕರವರ್ಣಿ ಎಂಬ ಹೆಸರು ಪಡೆದ ಕವಿಯು ತನ್ನ ಭರತೇಶವೈಭವಕ್ಕೆ ಬಳಸಿಕೊಂಡುದೂ ಆ ಕಾವ್ಯದ ಲೋಕಪ್ರಿಯತೆಗೆ ಕಾರಣವಾಗಿರಲು ಸಾಕು.

ಬ್ರಾಹ್ಮಣರ ಮನೆಗಳಲ್ಲಿ ನಳಚರಿತ್ರೆ, ಮುಯ್ಯದ ಹಾಡು, ಕೃಷ್ಣನನ್ನು ದಾನ ಕೊಟ್ಟ ಹಾಡು ಮೊದಲಾದ ಹಾಡುಗಳು ಈಗಲೂ ಕೇಳಿಬರುತ್ತವೆ. ಅವುಗಳನ್ನು ಕಟ್ಟಿದವಳು ಅರ್ಥಾತ್ ಒಬ್ಬ ಕನ್ನಡಿತಿ. ಹರಪನಹಳ್ಳಿ ಭೀಮವ್ವ ಎಂದು ಅವಳ ಹೆಸರು. ಆಕೆಯ ಹಾಡುಗಳಲ್ಲಿ ಕಾವ್ಯ ಗುಣಗಳು ತುಂಬಾ ಕಂಡುಬರುತ್ತವೆ.

ಇವೆಲ್ಲವನ್ನು ನೋಡಿದರೆ ನಮ್ಮ ಹೆಣ್ಣುಮಕ್ಕಳು ಅನಕ್ಷರಸ್ಥರಾಗಿದ್ದರೂ ಕಾವ್ಯಗಳನ್ನು ಕೇಳಿ ರಸಾಸ್ವಾದ ಮಾಡಬಲ್ಲಂಥವರೂ ಕಾವ್ಯಗಳನ್ನು ಕಟ್ಟಬಲ್ಲಂಥವರೂ ಆಗಿದ್ದರೆಂದು ತೋರದಿರದು.

ಇನ್ನು ಇಂದಿನ ಸಾಹಿತ್ಯ ಪ್ರಪಂಚಕ್ಕಿಳಿದು, ಹೆಣ್ಣು ಮಕ್ಕಳು ಏನೇನು ಕೆಲಸ ಮಾಡುತ್ತಿದ್ದಾರೆ, ಅದರ ರೂಪರೇಷೆಗಳೇನು ಎಂಬುದನ್ನು ಸ್ವಲ್ಪ ನೋಡಿ ಭಾಷಣವನ್ನು ಮುಗಿಸಲಿದ್ದೇನೆ.

ಇಂದಿನ ಕನ್ನಡ ಸಾಹಿತ್ಯ ವೃಕ್ಷದ ವಿವಿಧ ಶಾಖೆಗಳು ಕೊನರೊಡೆದು ಬೆಳೆಯುತ್ತಲಿವೆ. ಎಲೆಯ ಮೇಲೆ ಮೊಳೆಯಿಂದ ಬರೆಯುವ ಒಂದು ಕಾಲ, ಕೋರೆಹಾಳಿಯ ಮೇಲೆ ಲಂಗಿನಿಂದ ಬರೆಯುವ ಒಂದು ಕಾಲ, ಇವೆರಡು ಕಾಲಗಳೊಳಗಿಂದ ನಮ್ಮ ಸಾಹಿತ್ಯವು ಹಾಯ್ದು ಇಂದು ಸ್ವಚ್ಛವಾದ ನಯವಾದ ಕಾಗದದ ಮೇಲೆ ಮಸಿಯನ್ನದ್ದಿಕೊಳ್ಳುವ ತೊಂದರೆಯೂ ಇಲ್ಲದೆ ಸಲೆಯಾಗಿ ಹರಿಯುವ ಸೆಲೆಲೆಕ್ಕಣಿಕೆಯಿಂದ ಎಂದರೆ ಫೌಂಟನ್‌ಪೆನ್ನಿನಿಂದ ಬರೆಯುವ ಕಾಲದಲ್ಲಿ ಕಾಲಿಟ್ಟಿದೆ. ಹೆಚ್ಚುಹೆಚ್ಚಾಗಿ ಸಾಹಿತ್ಯ ನಿರ್ಮಾಣವಾಗುವುದಕ್ಕೆ ಈಗ ಲೇಖನ ಸಾಹಿತ್ಯವ ಅನುಕೂಲವಾಗಿದೆ. ಹಿಂದಕ್ಕೆ ಒಬ್ಬ ಕವಿ ಬರೆದ ಕಾವ್ಯವನ್ನು ಬೇಕಾದವರು ನಕಲುಮಾಡಿ ಕೊಂಡು ಹೋಗಬೇಕಾಗಿತ್ತು. ನಕಲಿನಿಂದ ನಕಲು ಆಗುತ್ತಾಗುತ್ತಾ ಬಹಳ ತಪ್ಪುಗಳೂ ಸೇರಿ

ಹೋಗುತ್ತಿದ್ದವು. ಅಥವಾ ನಕಲು ಇದ್ದವರಲ್ಲಿ ನಾಲ್ಕು ಜನ ಕೂಡಿ ಓದಿಸಿ ಕೇಳಬೇಕಾಗಿತ್ತು. ಕಷ್ಟಪಟ್ಟು ಬರೆದುಕೊಂಡಿದ್ದ ಗ್ರಂಥವನ್ನು ಎರಡನೆಯವರ ಕಡೆಗೆ ಕೊಡುತ್ತಿದ್ದಿಲ್ಲ - ಅದೊಂದು ಗಂಡಾಂತರವೆಂದೇ ತಿಳಿಯುತ್ತಿದ್ದರು; ಕಳೆದುಹೋದರೆ ದುರ್ಲಭವೇ ಆಗುತ್ತಿತ್ತು. ಎಂದರೆ ಸಾಹಿತ್ಯ ಪ್ರಚಾರಕ್ಕೆ ಇಷ್ಟೊಂದು ತೊಡರುತೊಂದರೆಗಳಿದ್ದವು. ಈಗ ಮುದ್ರಣದ ಅನುಕೂಲತೆಯೊಂದು ಒದಗಿದ್ದರಿಂದ ಗ್ರಂಥವು ಬಹು ಜನರ ಕೈಸೇರುವುದಕ್ಕೆ ಅನುಕೂಲವಾಗಿ ಒಳ್ಳೆಯ ಗ್ರಂಥಕ್ಕೆ ಜನಬೆಂಬಲ ದೊರೆಯತೊಡಗಿದೆ. ಮುದ್ರಣವು ಲೇಖಕನ ಕಣ್ಣೆದುರಿನಲ್ಲಿ ನಡೆಯುತ್ತಿರುವುದರಿಂದ ತಪ್ಪುಗಳು ಸೇರುವ ಸಂಭವವಿಲ್ಲ. ಸಾರ್ವಜನಿಕ ಸಭೆ ಸಮ್ಮೇಲನಗಳೂ ಸಂಘ ಸಂಸ್ಥೆಗಳೂ ಏರ್ಪಡಿಸುವ ಸಾಹಿತ್ಯೋಪನ್ಯಾಸಗಳಿಂದಲೂ ವಾಙ್ಮಯವು ಹಬ್ಬಲು ಬಹಳ ಪ್ರಯೋಜನವಾಗುತ್ತಿದೆ. ಲೇಖನ ಸಾಧನ-ಪ್ರಚಾರ ಸಾಧನಗಳು ಹೆಚ್ಚಿರುವ ಪ್ರಮಾಣದಲ್ಲಿಯೆ ಇಂದು ನಮ್ಮ ಸಾಹಿತ್ಯದ ನಿರ್ಮಾಣ ಪ್ರಚಾರಗಳು ಹೆಚ್ಚಿರುತ್ತವೆ. ಪ್ರಗಲ್ಭ ಸಾಹಿತ್ಯಕ್ಕಾಗಿ ಹಸಿದಿರುವ ಕೆಲಮಹನೀಯರು ಈಗ ಬರೇ ಕವಿತೆ ಕತೆಗಳೇ ಹುಟ್ಟುತ್ತಿವೆ ಎಂದು ಅಸಹ್ಯಪಟ್ಟುಕೊಳ್ಳುವುದನ್ನು ನೋಡುತ್ತೇವೆ. ಸ್ಥಿತಿ ಹಾಗೇನೋ ಇರಬಹುದು; ಇದರಲ್ಲಿ ನನಗೇನೂ ದೋಷ ಕಾಣುವುದಿಲ್ಲ. ನಮ್ಮ ಸಾಹಿತ್ಯದ ಬೆಳಕು ಹೆಚ್ಚಬೇಕಾದುದು ಅತ್ಯಗತ್ಯ. ಆದರೆ ಅದರ ಸುಗಂಧ ಸೌಂದರ್ಯಗಳು ಹೆಚ್ಚುತ್ತಿರುವುದಕ್ಕೆ ದುಃಖಿಸಬಾರದು. ಹಾ, ಸಂದರ್ಭ ವಿಷಯವನ್ನು ಹೇಳುತ್ತಾ ವಿಷಯಾಂತರದಲ್ಲಿ ದೂರ ಹೋದೆನೆಂದು ಕಾಣುತ್ತದೆ. ಮತ್ತೆ ಮುಖ್ಯ ಹಾದಿಗೆ ಹೋಗೋಣ.

ಇಂದಿನ ಪುರುಷ ಲೇಖಕರೂ ಕಾವ್ಯಸ್ಫೂರ್ತಿಗಾಗಿ ವಾಕ್ಸಿದ್ಧಿಗಾಗಿ ಶಾರದೆಯನ್ನೇ ಪ್ರಾರ್ಥಿಸುವುದುಂಟು. ಎಂದರೆ ಲಲಿತ ಸಾಹಿತ್ಯವು ಕಾಂತಾಸಂಮಿತಿ ಎಂದೂ ಅದಕ್ಕೆ ಸ್ತ್ರೀತ್ವವೇ ದೈವತ್ವವೆಂದೂ ಮನ್ನಣೆ ಕೊಟ್ಟಿದ್ದಾರೆ. ಇಷ್ಟೇ ಅಲ್ಲ, ಅವರು ಬಹುಶಃ ಸಾಹಿತ್ಯ ಕ್ಷೇತ್ರದಲ್ಲಿಯೂ ಸ್ತ್ರೀಯರ ಕೆಲಸ-ಪ್ರಯತ್ನಗಳಿಗೆ ಪ್ರೋತ್ಸಾಹನೆಯನ್ನು ಮನ್ನಣೆಯನ್ನೂ ಕೊಡುತ್ತ, ಹಿಂದಿನ ಕುಂದನ್ನು ತೊಡೆಯುತ್ತಿದ್ದಾರೆ. ಇದೊಂದು ನಮ್ಮ ಸಾಹಿತ್ಯಾಭಿವೃದ್ಧಿಯ ಶುಭ ಸೂಚನೆಯೆಂದು ಹೇಳಬೇಕು. ಸಾಹಿತ್ಯದ ವಿವಿಧ ಶಾಖೆಗಳಲ್ಲಿಯೂ ಹೆಣ್ಣುಮಕ್ಕಳು ಗೌರವಾರ್ಹವಾದ ಕೆಲಸ ಮಾಡುತ್ತಿದ್ದಾರೆ; ಮತ್ತಿನ್ನೂ ಹೆಚ್ಚಾಗಿ ಮುಂದುವರೆಯುವುದು ಅಗತ್ಯದ್ದಾಗಿದೆ ಮತ್ತು ರಾಣೇಬೆನ್ನೂರಿನಂತಹ ಚಿಕ್ಕಪಟ್ಟಣದ ಬಗ್ಗೆ ಹೇಳುವುದಾದರೆ, ಸ್ತ್ರೀಯರಿಗೆ ಸಂಘಟಿತ ರೂಪದಿಂದ ಕೆಲಸ ಮಾಡುವುದಕ್ಕೂ ಈ ಕರ್ನಾಟಕ ಸಂಘದಲ್ಲಿ ಸೇರಿ ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನರಿತು, ಅದರ ಬಗ್ಗೆ ಸೇವೆ ಮಾಡುವುದಕ್ಕೂ ಪುರುಷರು ಹೆಚ್ಚಿಗೆ ಔದಾರ್ಯದಿಂದ ಅವಕಾಶ ಕಲ್ಪಿಸಿಕೊಡಬೇಕೆಂದು ನನ್ನ ಬಿನ್ನಹವಿದೆ.

ವಾಣಿ ಎಂದರೆ ಸಾಹಿತ್ಯವು, ಸಮಾಜದ ಹೃದ್ಗತವನ್ನೂ ಆಶೆಗಳನ್ನೂ ವಿಚಾರಗಳನ್ನೂ ತಿಳಿಸುವ ಏಕಮೇವ ಸಾಧನವಾಗಿದೆ. ಅದಕ್ಕಾಗಿಯೆ ಜಗತ್ತು ವಾಕ್ ಸ್ವಾತಂತ್ರ್ಯ ಅನಪಹಾರ್ಯವಾದುದೆಂದು ಸಾರುತ್ತಿದೆ. ಅಂತಹ ವಾಕ್ ಸ್ವಾತಂತ್ರ್ಯವು ನಮ್ಮ ನಾರೀ ವರ್ಗಕ್ಕೆ ಇರಲೇಬೇಕು. ಪ್ರಪಂಚವನ್ನು ಸ್ತ್ರೀಯು ತನ್ನ ದೃಷ್ಟಿಯಿಂದ ನೋಡಿ ಅದರ ಬಗ್ಗೆ ಅವಳು

ಅಭಿಪ್ರಾಯಪಡುವುದೇನು, ಅವಳ ಆಶೆ ಆಕಾಂಕ್ಷೆಗಳು ಯಾವ ರೀತಿಯಾಗಿವೆ, ಸಮಾಜ ಸುಧಾರಣೆಯ ವಿಷಯದಲ್ಲಿ ಅವಳ ವಿಚಾರಗಳೆಂತಿರುವವು ಎಂಬುದನ್ನೆಲ್ಲಾ ಸಮಾಜವು ನೋಡುವುದವಶ್ಯ. ಹಿಂದೆ ಪ್ರಪಂಚದ ಬಗ್ಗೆ ವ್ಯಕ್ತವಾದ ಅಭಿಪ್ರಾಯ ಆಶೆಗಳೆಲ್ಲಾ ಹೆಚ್ಚಾಗಿ ಏಕಪಕ್ಷೀಯವಾದುವೆ. ಸಮಾಜಕ್ಕೆ ಸ್ತ್ರೀ ಎಂಬ ಇನ್ನೊಂದು ಕಣ್ಣಿದೆ; ಅದರಿಂದ ನೋಡಿದರೆ ಹೇಗೆ ಕಾಣುವುದು ಈ ಪ್ರಪಂಚ ಎಂಬುದನ್ನು ತಿಳಿದುಕೊಳ್ಳದೆ ಸಮಾಜ ನಿರ್ಮಾಣ ಕಾರ್ಯವು ಸಮಾಧಾನಕರವಾಗದು; ಅದು ಸಬಲವೂ ಆಗದು; ಪರಿಪೂರ್ಣವಾಗದು, ಈ ದೃಷ್ಟಿಯಿಂದ ಇಂದು ಸ್ತ್ರೀ ಸಾಹಿತ್ಯಕ್ಕೆ ಬಹಳ ಮಹತ್ವವಿದೆ. ಸ್ತ್ರೀಯು ಪ್ರಪಂಚದಲ್ಲಿ ತಕ್ಕ ಮನ್ನಣೆಯನ್ನು ಪಡೆಯಬೇಕು, ಸಮಾಜದ ಅರ್ಧ ಏಕೆ ಅರ್ಧಕ್ಕಿಂತ ಹೆಚ್ಚಿನ ಹೊಣೆಯನ್ನು ಹೊತ್ತಿರುವ ಅವಳಿಗೆ ಶಿಕ್ಷಣ-ಸ್ವಾತಂತ್ರ್ಯಾದಿಗಳ ಬಗ್ಗೆ ತಕ್ಕ ಹಕ್ಕು ಬಾಧ್ಯತೆಗಳು ಸಿಕ್ಕಬೇಕು ಎಂಬ ಆಶೆ ಆಕಾಂಕ್ಷೆಗಳನ್ನು ತಿಳಿಸುವುದಕ್ಕಾಗಿ ಈಗ ಅನೇಕ ವರ್ಷಗಳಿಂದ ಬೆಂಗಳೂರಿನ ಶ್ರೀಮತಿ ಆರ್. ಕಲ್ಯಾಣಮ್ಮನವರು 'ಸರಸ್ವತಿ' ಎಂಬ ಮಾಸಪತ್ರಿಕೆಯನ್ನು ಹೊರಡಿಸುತ್ತಿರುವರು. ನಮ್ಮ ಹೆಣ್ಣುಮಕ್ಕಳು ಕವಿತೆಗಳನ್ನು ಕಟ್ಟಬಲ್ಲರು, ಕತೆಗಳನ್ನು ಹೆಣೆಯಬಲ್ಲರು, ವಿವಿಧ ವಿಷಯಕವಾದ ವಿಚಾರ ಪರಿಪ್ಲುತ ಲೇಖನಗಳನ್ನು ಬರೆಯಬಲ್ಲರು ಎಂಬುದು ಕರ್ನಾಟಕಕ್ಕೆ ಗೊತ್ತಾಗಿದೆ. ಮತ್ತು ನನ್ನ ಪತಿಯೂ ನಾನೂ ಕೂಡಿ ನಡೆಸುತ್ತಿರುವ ಜಯಕರ್ನಾಟಕದಲ್ಲಿಯೂ ಅನೇಕ ಸ್ತ್ರೀಯರ ಕತೆಗಳೂ, ಲೇಖನಗಳೂ ಕಣ್ಣಿಗೆ ಬೀಳುತ್ತಿವೆ. ಇತರ ಅನೇಕ ಪತ್ರಿಕೆಗಳಲ್ಲಿಯೂ ಬರುತ್ತಿವೆ.

ಇಂದು ಸಾಹಿತ್ಯ ನಿರ್ಮಾಣದಲ್ಲಿ ಕತೆಗಳು ಹೆಚ್ಚಿನ ಸ್ಥಾನ ತೆಗೆದುಕೊಳ್ಳುತ್ತಿವೆ ಎಂದು ಹಿಂದೆ ಹೇಳಿದ್ದೇನಷ್ಟೇ. ಕತೆ, ನಾಟಕ, ಕಾದಂಬರಿ, ಪ್ರಹಸನ, ಹರಟೆ ಮೊದಲಾದವುಗಳೇ ಸಮಾಜದ ಹೆಚ್ಚು ಸ್ಪಷ್ಟವಾದ ಪ್ರತಿಬಿಂಬಗಳು; ಸಮಾಜದ ಆಶೆ-ಆಕಾಂಕ್ಷೆ, ಸುಖ ದುಃಖಗಳ ಪಡಿನುಡಿಯೇ ಈ ಕತೆ ಮೊದಲಾದವು. ನಾನು ಮೊದಮೊದಲು ಹೇಳಿದಂತೆ ಲಲಿತ ಸಾಹಿತ್ಯದಲ್ಲಿ ಸ್ತ್ರೀವಾಣಿಗೆ ಅವಶ್ಯಕ ಮಹತ್ವವಿದೆ. ಸ್ತ್ರೀಯರು ಬಹುಕಾಲವನ್ನು ಪ್ರತ್ಯಕ್ಷ ಸಮಾಜ ಜೀವನದಲ್ಲಿ ಕಳೆಯುವರಾದುದರಿಂದ ಜೀವನಸಂಗೀತವನ್ನು ನುಡಿಯುವುದಕ್ಕೆ ಅವರು ಪುರುಷರಿಗಿಂತ ಹೆಚ್ಚು ಅಧಿಕೃತರೆಂದು ಹೇಳಬಹುದು. ಸಣ್ಣ ಕತೆಗಳನ್ನು ಬರೆಯುವ ಕಲೆಯು ಸ್ತ್ರೀಯರಿಗೆ ಸ್ವಭಾವಸಿದ್ಧ ವಾಗಿರುವುದೆಂದೂ ಎಲ್ಲ ದೃಷ್ಟಿಗಳಿಂದ ತುಲನಾತ್ಮಕವಾಗಿ ನೋಡಿದರೆ ಸಮರ್ಪಕವಾದ ಸಹಜ ಸರಲ ಸುಂದರವಾದ ಕತೆಗಳನ್ನು ಬರೆಯುವುದರಲ್ಲಿ ಸ್ತ್ರೀಯರಿಗೆ ಪ್ರಮಾಣವೇ ಹೆಚ್ಚಾಗಿದೆ ಎಂದು ನನಗೆನಿಸುತ್ತದೆ. ಏಕೆಂದರೆ ಅವರ ಸಹಜಸಿದ್ಧ ಭಾಷೆಯಲ್ಲಿ ಜೀವನ ಸಂಗೀತವು ಮೈಗೂಡಿರುವುದು. ಕನ್ನಡ ಪತ್ರಿಕೆಗಳನ್ನೂ ಪುಸ್ತಕಗಳನ್ನೂ ಓದುತ್ತಿರುವ ವರಾದ ನೀವುಗಳು ಈ ಮಾತಿನ ಬಗ್ಗೆ ವಿಮರ್ಶಿಸಿಕೊಳ್ಳಬಹುದು; ನಿಮ್ಮ ಅಭಿಪ್ರಾಯವೂ ಹೀಗಾದೀತೆಂದು ನನ್ನ ಭರವಸೆ ಇದೆ.

ಈವರೆಗೆ ಹೆಣ್ಣುಮಕ್ಕಳು ಬರೆದ ಕತೆಗಳು ಸಂಗ್ರಹಿತವಾಗಿ ಪುಸ್ತಕರೂಪದಲ್ಲಿ ಪ್ರಕಟವಾದುದೆಂದರೆ, ನನಗೆ ಗೊತ್ತಿದ್ದ ಮಟ್ಟಿಗೆ-ರಂಗವಲ್ಲಿ (ವಿವಿಧ ಕತೆಗಾರ್ತಿಯರ ಕತೆಗಳು), ಹೂಬಿಸಿಲು (ಸೌ. ಶ್ಯಾಮಲೆಯವರ ಕತೆಗಳು), ಇದೀಗ ಕೈ ಸೇರಿರುವ ಕಂಬನಿ (ದಿವಂಗತ

ಮಿಸೆಸ್ ಬಿ.ಟಿ.ಜಿ. ಕೃಷ್ಣ ಅವರ ಕತೆಗಳು) ಮೊದಲಾದವು. ಇನ್ನು ಕೆಲವು ಕತೆಗಳ ಸಂಗ್ರಹಗಳಲ್ಲಿ ಎರಡೋ ಮೂರೊ ಹೆಣ್ಮಕ್ಕಳ ಕತೆಗಳಿವೆ. ಪತ್ರಿಕೆಗಳಲ್ಲಿಯೇ ಈಗೀಗ ಹೆಣ್ಣಕ್ಕಳ ಕಥೆಗಳು ಹೆಚ್ಚಾಗಿ ಬರುತ್ತಿವೆ. ನಿಮ್ಮಲ್ಲಿ ಬಹುಜನರು ಅವುಗಳನ್ನು ಓದಿರಬಹುದೆಂದು ನಾನು ತಿಳಿದಿದ್ದೇನೆ. ಅವುಗಳ ವಿಮರ್ಶೆಯನ್ನು ನಾನಿಲ್ಲಿ ಮಾಡುವುದಿಲ್ಲ. ಈ ಸ್ತ್ರೀ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಉತ್ತಮ ಸ್ಥಾನವನ್ನು ಹೊಂದತಕ್ಕವು ಎಂಬುದನ್ನು ದೊಡ್ಡವರ ಮಾತಿನಿಂದ ಹೇಳುತ್ತೇನೆ. ಕನ್ನಡ ಸಣ್ಣ ಕತೆಗಳ ಜನಕರಾದ ಶ್ರೀ ಮಾಸ್ತಿವೆಂಕಟೇಶಯ್ಯಂಗಾರ್ಯರು ರಂಗ ವಲ್ಲಿಯ ಮುನ್ನುಡಿಯಲ್ಲಿ "ಈ ಕತೆಗಳು ಸಮಾಜದ ಏಳ್ಗೆಗೆ ಸಹಾಯಮಾಡತಕ್ಕವಾಗಿವೆ, ಇವುಗಳ ಕಲೆಯನ್ನಾದರೂ ನಾನು ಮೆಚ್ಚಿದ್ದೇನೆ. ಮುಖ್ಯವಾಗಿ ಇಲ್ಲಿಯ ಕಲೆಗಾರಿಕೆ ಕತೆ ಹೇಳುವವರ ಮನಸ್ಸಿನ ಸರಳತೆಯಿಂದ ಬಂದಿರತಕ್ಕದು. ಹೇಳುವ ವಿಷಯವನ್ನು ಆದಷ್ಟು ಸಹಜವಾಗಿ ಹಾಗೆಯೇ ಚೆನ್ನಾಗಿ ಹೇಳುವುದು ಸಾಹಿತ್ಯದ ರಾಜಮಾರ್ಗ ಎಂಬ ಭಾವನೆ ಈಗ ವಾಡಿಕೆಗೆ ಬಂದಿದೆ. ಈ ಕತೆಗಾತಿ ಸೋದರಿಯರು ಎಲ್ಲರೂ ಈ ರಾಜ ಮಾರ್ಗದಲ್ಲಿ ನಡೆದಿದ್ದಾರೆ. ಭಾಷಾಂತರದ ಕತೆಗಳಲ್ಲೂ ಮೂಲದ ವಿಷಯವನ್ನು ಕನ್ನಡಕ್ಕೆ ಹೊಂದಿಸಿ ಕೊಂಡಿರುವುದರಲ್ಲಿ ಕೌಶಲ್ಯ ಕಾಣುತ್ತದೆ".

ಹೂಬಿಸಿಲಿನ ಮುನ್ನುಡಿಯಲ್ಲಿ ಕವಿಭೂಷಣ ಬೆಟಗೇರಿ ಕೃಷ್ಣಶರ್ಮರೂ ಇದೇ ಅರ್ಥವನ್ನು ಸೂಚಿಸಿರುವರು. "ಇವೆಲ್ಲವುಗಳಲ್ಲಿ ನಾವು ಕಾಣುತ್ತಿರುವುದು ಸ್ವಭಾವ ಚಿತ್ರಣವನ್ನೆ... ಮೂವರು ನಾಗರೀಕರು, ಮಹಾಶಿವರಾತ್ರಿ ಎಂಬೆರಡಂತೂ ಸ್ವಭಾವ ಚಿತ್ರ ಎಂಬುದೊಂದು ಹೊಸ ಸಾಹಿತ್ಯ ಜಾತಿಯನ್ನು ನಿರ್ಮಾಣ ಮಾಡಿಕೊಂಡಿವೆ.....ಹೆಚ್ಚಾಗಿ ಈ ಕಡೆಯ ಜೀವಂತ ಭಾಷೆಯಲ್ಲಿಯೆ ಎಲ್ಲವನ್ನೂ ಬರೆದಿದ್ದಾರೆ" ಎಂದವರು ಹೇಳಿದ್ದಾರೆ.

ನಾನು ಇದನ್ನು ಹೇಳುತ್ತಿರುವುದು ಹೆಣ್ಣು ಮಕ್ಕಳ ಅಥವಾ ನನ್ನ ಬರೀ ಶ್ಲಾಘನೆಗಾಗಿ ಅಲ್ಲ. ಸಣ್ಣ ಕತೆಗಳ ಭಾಷಾಸಿದ್ಧಿ ಅವರಿಗಿರುವುದರಿಂದ ಕಥಾಸಾಹಿತ್ಯವನ್ನು ಅವರು ತಮ್ಮ ಸೊತ್ತನ್ನಾಗಿ ಮಾಡಿಕೊಳ್ಳಬಲ್ಲರು, ಹಾಗಾಗುವುದರಿಂದ ಸಾಹಿತ್ಯಕ್ಕೆ ಒಳ್ಳೆಯದೂ ಆದೀತು. ಗಂಡಸರು ಸಣ್ಣ ಕತೆ ಮೊದಲಾದವುಗಳನ್ನು ಬರೆಯಲೇಬಾರದೋ ಎಂದು ಯಾರೂ ಗಾಬರಿ ಯಾಗುವ ಕಾರಣವಿಲ್ಲ. ನನ್ನ ಈ ಮಾತಿನ ಅರ್ಥ ಹಾಗಲ್ಲ. ಗಂಡಸರು ಅತ್ಯಂತ ಪ್ರಯತ್ನ ಶೀಲರು, ಚತುರರು, ಆದರೆ ಅವರು ತಮ್ಮ ಭಾಷೆಗೆ ಸ್ತ್ರೀತ್ವವನ್ನು ತಂದುಕೊಳ್ಳಬೇಕು; ಎಂದರೆ ತಮ್ಮ ಪದಸರಣಿಯನ್ನು ಬುದ್ಧಿಯಿಂದ ಹೊರಡಿಸುವ ಬದಲು ಹೃದಯದಿಂದ ಹೊರಡಿಸಬೇಕು ಮತ್ತು ಇದವರಿಗೆ ಸಾಧ್ಯವಿದೆ.

ಮಕ್ಕಳ ಸಾಹಿತ್ಯವಂತೂ ಸಂಪೂರ್ಣವಾಗಿ ಸ್ತ್ರೀಯ ಸೊತ್ತೆಂದು ಎಲ್ಲರೂ ಒಪ್ಪುತ್ತಾರೆ. ಅಜ್ಜಿ, ತಾಯಿ, ಅಕ್ಕ, ಅತ್ತಿಗೆ ಇತ್ಯಾದಿ ಮನೆ ಹೆಣ್ಣುಮಕ್ಕಳ ಮಾತಿನಿಂದಲೇ ಮಕ್ಕಳು ಶಿಕ್ಷಣ ಪಡೆಯುತ್ತಿವೆ. ಅವರಿಗೆ ಮಕ್ಕಳ ಹೃದಯ ಬಹುಶಃ ಚೆನ್ನಾಗಿ ತಿಳಿದಿರುತ್ತದೆ. ಅಜ್ಜಿಯರು ಅವರಿಗೆ ಕತೆ ಹೇಳುತ್ತಿದ್ದರು. ಆ ಕಾಗೆ-ಗುಬ್ಬಿಗಳ ಕತೆಗಳಲ್ಲಿ ಒಂದೊಂದು ಪಾಠವೇ ಇರುತ್ತಿತ್ತು. ಮುಖ್ಯವಾಗಿ ಕುತೂಹಲ, ಅಖಂಡ ಪ್ರಯತ್ನ, ಅದ್ಭುತ ಸಾಹಸ, ತನ್ನದನ್ನು ಸುಮ್ಮನೆ ಬಿಡಬಾರ

ದೆಂಬ ಹಕ್ಕಿನ ಹಠ ಇತ್ಯಾದಿಗಳಿರುತ್ತಿದ್ದವು. ಒಂದು ಗುಬ್ಬಿ ಒಂದು ಮುದುಕಿಯ ಹತ್ತಿರ ಒಂದು ಕಡಲೆ ಕಾಳನ್ನಿಟ್ಟಿರುತ್ತದೆ; ಅವಳು ನಿದ್ದೆಗಣ್ಣೊಳಗೆ ತಿಂದುಬಿಡುತ್ತಾಳೆ. ಗುಬ್ಬಿ ಬಂದು ಕಾಡಲಿಕ್ಕೆ ಆರಂಭಿಸುತ್ತದೆ. ಹೋದ ಕಡಲೆ ತಿರುಗಿ ಬರುವುದೆಂತು? ಒಂದು ನೂಲಿನ ಕುಕ್ಕಡಿ ಕೊಡುತ್ತಾಳೆ; ಗುಬ್ಬಿ ಅದನ್ನು ಮತ್ತೊಬ್ಬರಲ್ಲಿಟ್ಟಿರುತ್ತದೆ. ಅಲ್ಲಿ ಕುಕ್ಕಡಿ ಕಳೆಯುತ್ತದೆ. ಹೀಗೆ ಗುಬ್ಬಿ ಒಂದು ಬದಲು ಒಂದು ಪಡೆಯುತ್ತ ಕೊನೆಗೆ ಡೊಳ್ಳು ಪಡೆದು ಬಾವಿಯ ಮೇಲೆ ಬಾರಿಸುತ್ತ ಕುಳಿತುಕೊಳ್ಳುತ್ತದೆ. ಇದರಲ್ಲಿ ಮಕ್ಕಳ ಸ್ವಭಾವದ ಸೂಕ್ಷ್ಮ ನಿರೀಕ್ಷಣೆಯ ಜ್ಞಾನ ಕಂಡುಬರುತ್ತದೆ. ಮಕ್ಕಳು ನಿಮ್ಮ ಕೈಯಲ್ಲಿ ಕೊಟ್ಟಿದ್ದ ಸಿಬಿರುಕಟ್ಟಿಯನ್ನೂ ನೀವು ಕಳೆದರೆ ಅವರು ನಿಮ್ಮ ಜೀವಹಿಂಡಿಬಿಡುತ್ತಾರೆ. ಏನಾದರೂ ಬದಲು ಕೊಡಬೇಕಾಗುತ್ತದೆ. ಇಂಥ ಈ ಕತೆಯ ಮೂಲಕ ತಮ್ಮ ವಸ್ತುವನ್ನು ಸುಮ್ಮನೆ ಬಿಟ್ಟೇವೆ ಎಂಬ ಭಾವನೆ ಮಕ್ಕಳ ಹೃದಯದಲ್ಲಿ ಧೃಢಮೂಲವಾಗುವುದು. ಮಕ್ಕಳ ಮನಸ್ಸಿಗೆ ಒಗ್ಗುವಂತೆಯೂ ತೀರ ಸರಳವಾಗಿಯೂ ಸಹಜವಾಗಿಯೂ ಕತೆ ಹೇಳುವ ಕತೆ ಅವರಿಗೆ ಬಾಯ್ದೂಡಿರುವುರಿಂದಲೇ ಸ್ವಭಾವತಃ ಚಂಚಲರೂ ಪೀಡಕರೂ ಆದ ಮಕ್ಕಳು ತಾಸುಗಟ್ಟಲೆ ಸುಮ್ಮನೆ ಕುಳಿತಿರುತ್ತಾರೆ. ಮತ್ತು ಒಂದು ಮಾತು: ನಿಮ್ಮೊಡನೆ ಹೆಣ್ಮಕ್ಕಳಾಡುವ ಮಾತುಗಳಲ್ಲಿ ಹೆಚ್ಚಿನವು ಕತೆಗಳಾಗಿ ರುತ್ತವೆಂಬುದನ್ನು ಲಕ್ಷ್ಯಗೊಟ್ಟು ನೋಡಿದರೆ ಕಾಣಬಹುದು. ಬಹಳ ಜನ ಹೆಣ್ಣುಮಕ್ಕಳು ಕೂಡಿರುವಲ್ಲಿ ಮಾತಾಡುತ್ತಾಡುತ್ತಾ ಸ್ವಲ್ಪ ಹೊತ್ತಿನಲ್ಲಿಯೆ ಪ್ರತಿಯೊಬ್ಬರೂ ಕತೆಯನ್ನೇ ಹೇಳತೊಡಗುವುದೂ ಅನುಭವಸಿದ್ಧವಾಗಿದೆ. ಹೀಗೆ ಕತೆಗಾರಿಕೆ ಹೆಂಗಸರ ಸ್ವಭಾವಸಿದ್ಧವಾದ ಪರಂಪರಾಗತವಾದ ಹಕ್ಕಾಗಿದೆ. ಮತ್ತದನ್ನವರು ಪಡೆದು ಲಲಿತ ಸಾಹಿತ್ಯದಲ್ಲಿ ಉಚಿತ ಕೃತಿಗಳನ್ನು ನಿರ್ಮಾಣ ಮಾಡಲಿ ಎಂದು ಹಾರೈಸುತ್ತೇನೆ.

ಕೊನೆಯ ಮಾತೆಂದರೆ ಹೆಂಗಸರು ಬರೇ ಕತೆಗಳನ್ನು ಮಾತ್ರ ಬರೆಯಬಲ್ಲರೆಂದೂ ಬೇರೆ ಯಾವ ಸಾಹಿತ್ಯವನ್ನೂ ನಿರ್ಮಿಸಲಾರರೆಂದೂ ಬಾರದೆಂದು ನಾನು ಹೇಳಿದೆನೆಂದು ತಿಳಿಯಬೇಡಿ. ಸ್ತ್ರೀಯರು ಶಿಕ್ಷಣದಲ್ಲಿ ಮುಂದುವರಿದಂತೆಲ್ಲ, ವಿವಿಧ ವಿಷಯಗಳನ್ನು ತೆಗೆದುಕೊಂಡು ಪದವಿ ಗಳನ್ನು ಪಡೆಯುತ್ತಿದ್ದಾರೆ. ಅವರಲ್ಲೆಷ್ಟೋ ಜನರು ತಾವು ಪಾಂಡಿತ್ಯ ಪಡೆದಿರುವ ವಿಷಯಗಳನ್ನು ಕುರಿತು ಉದಾತ್ತ ಸಾಹಿತ್ಯವನ್ನು ನಿರ್ಮಿಸಬಲ್ಲವರಿದ್ದಾರೆಂದು ನಾನು ನಂಬಿದ್ದೇನೆ. ಮತ್ತು ಕತೆ ಎಂದು ನಾನು ಉಪಯೋಗಿಸುವುದು ಸಣ್ಣ ಕತೆ ಎಂಬ ಅಂಕಿತ ನಾಮದಿಂದಲ್ಲ; ಅದು ಜಾತಿ ಸೂಚಕವಾದುದು. ಕಥಾಜಾತಿ ಎಂದರೆ ಅದರಲ್ಲಿ ಕಾದಂಬರಿ, ನಾಟಕ, ಹರಟೆ, ಮೊದಲಾದವೆಲ್ಲಾ ಸಮಾವೇಶವಾಗುತ್ತವೆ. ಇವುಗಳಿಗಾಗಿ ವಾಕ್ಸಿದ್ಧಿಯ ಅನುಕೂಲತೆ ಹೆಣ್ಮಕ್ಕಳಿಗಿದೆ. ಅವರು ವಿಶೇಷವಾದ ಶಿಕ್ಷಣ ಪಡೆದು ಮತ್ತು ಕನ್ನಡ ಸಾಹಿತ್ಯ ವಿಷಯವನ್ನು ಅಭ್ಯಾಸ ಮಾಡಿ ತಮ್ಮ ಕಥನ ಕಲೆಯನ್ನು ಪರಿಪಕ್ವಮಾಡಿಕೊಂಡು ಮುಂದುವರಿಯಬೇಕು ಎಂದೇ ನನ್ನ ಅಭಿಪ್ರಾಯ.*

●

## ಅಭಿವ್ಯಕ್ತಿ : ಇಂದು

(ಇಲ್ಲಿ ನಮ್ಮ ನಡುವೆ ಕ್ರಿಯಾಶೀಲರಾಗಿರುವ ಹಿರಿಯ ಕವಯತ್ರಿ ಶೈಲಜಾ ಉಡಚಣ ಅವರ ಕವಿತೆಯನ್ನೂ, ಕವಿತೆಗಳನ್ನು ಗಂಭೀರ ಅಭಿವ್ಯಕ್ತಿ ಮಾಧ್ಯಮವಾಗಿ ಪರಿಗಣಿಸಿ ಬರೆಯುತ್ತಿರುವ ಇನ್ನೊಬ್ಬ ಕವಯತ್ರಿ ಜ್ಯೋತಿ ಶಶಿಕುಮಾರ್ ಅವರ ಎರಡು ಕವಿತೆಗಳನ್ನೂ ಮಹಿಳಾ ಅಭಿವ್ಯಕ್ತಿಯ ಇಂದಿನ ಮಾದರಿಗಳಾಗಿ ಪ್ರಕಟಿಸುತ್ತಿದ್ದೇವೆ-ಸಂ)

### ೧. ಕ್ರಮೇಣ ಕ್ರಮಿಸೋಣ

ಶೈಲಜಾ ಉಡಚಣ

ಅವನೆದೆಯಲ್ಲೊಂದು ಅನಾಥತೆಯ
ಅನುಭವದ ಚುಳುಕು ಆಗೀಗ
ಅವಳೆದೆಯಲ್ಲೊಂದು ಹೊಸ ಬದುಕು
ಸಂಭ್ರಮದ ಬಳುಕು ಈಗೀಗ.

ತಲೆಗೆ ಚುಚ್ಚುವ ಎಚ್ಚರ ಅವನಲ್ಲಿ
ಆತ್ಮವಿಶ್ವಾಸದ ಜಾಗರ ಅವಳ ಮನದಲ್ಲಿ
ಅವನಾಳಿಕೆಯ ಅಧಿಕಾರದಲ್ಲೊಂದು
ಅಪಸ್ವರದ ಅವಿಧೇಯ ಬಿರುಕು
ಆಳಿನ ಅಧ್ಯಾಯದಲ್ಲಿ ಅಲಂಕರಿಸಿವೆ
ಭರವಸೆಯ ಬೇರುಗಳು ಹೂಪತ್ರಿಗಳ ಸರಕು.

ಮೇಲ್ಮೈಯ್ಯ ವಾಸ್ತವ ಹುಸಿ ಸಂಪ್ರದಾಯ
ಸುಖದ ಸುಗ್ಗಿಯಲ್ಲಿ ನುಗ್ಗಿತು ಬರ
ಕೀಳರಿಮೆಯ ಕತ್ತಲೆಯಲ್ಲಿ ಹೊಕ್ಕಿತು ಮಿಂಚುಗರೆ.

ಅವಳಕೈಯಲ್ಲಿ ಕಾಣ ಬಯಸಿದ ಋಷಿತಂದ
ಕಸೂತಿ ಕಲೆ ಸೂಜಿದಾರ ಕೌದಿ ಕಕಲಾತಿ
ಇದೀಗ ಕಾಗದ ಪೆನ್ನುಗಳಿಗಿಳಿದ ಕರಿಬಿಳಿ ಗೆರೆಗಳಲ್ಲಿ
ಮೂಡಿದ ಕಲಾತ್ಮಕದ ಕಿರಿಕಿರಿಯಲ್ಲಿ ಮುಳುಗಿದ ಪ್ರೀತಿ.

ಸತಿಯಲ್ಲ ಇವಳು ಸಖಿಯಂತೆ ತಾಳಬೇಕು ಅವನಲ್ಲಿ
ಮಂದ ಮುಂದ ಉರಿಯ ಆಜ್ಞಾ ಆರಿತಿಲ್ಲಿ

ಕನಸು ಮನಸುಗಳ ಕುಸುರಿನ ಈ ಕಟ್ಟಡ
ಸೆರೆಯಾಗದೆ ಅರಮನೆಯಾಗಲೇಬೇಕು
ಸಾವಿರ ಸಹಜತೆಯ ವಿನ್ಯಾಸ ವೈವಿಧ್ಯ ರೇಖೆಗಳು
ಗೋರಿಯ ಗಂಭೀರ ನಿಶ್ಚಲ ನಾಟಕದ ಸುತ್ತ
ಕುಸುಮಿಸಿದವು ಹಿರಿ ಕಿರಿ ಹೂಬನಗಳು
ಘಮ ಘಮಿಸುತ್ತ

ಹತ್ತು ದಿಕ್ಕಿನಲ್ಲಿ ಹರಿದು ಬಂದ ಅರಿವಿನ ಸೆಲೆ
ಅವಳ ಬದುಕಿಗೆ ತಂದ ಬೆಳಕಿನ ಖುಷಿ
ಕಿರುದೊರೆ ಕಣ್ ತೆರೆದು ಪಲ್ಲವಿಸಲು ಸಸಿ
ಅವನ ಅರಮನೆಯ ಕಬ್ಬಿಣದ ಸರಳುಗಳಿಗೆ
ಸಹಜತೆ ಸಾಮರಸ್ಯದ ಸಿಂಗರದ ರಂಗುರಂಗಿನ ಹೂಬಳ್ಳಿ
ಹಸಿ ಖುಷಿ ಬಿಸಿಯೊಳಗೂ ಇಬ್ಬರಿಗೆ
ರಸಪಾಕದ ಸವಿ ಸಮನ್ವಯದ ಸಮದರ್ಶನವಿಲ್ಲಿ.

ನಾವೇ ಗೂಡಿ ಕಟ್ಟಿದ್ದು ನೆಲೆಗೆ ಬೀಡು ಬಿಟ್ಟದ್ದು
ಇದೀಗ ಬಯಲ ಮುದ್ದಿಸುತ್ತ ಬಂಧುರ ರೆಕ್ಕೆಗಳ
ಭಾಗ್ಯ ಹೊಂದಿ ಗಗನಾಂಗಣದಲಿ ಹಾರಲಿದ್ದೇವೆ.
ನವಯುಗದ ಮೋಡಿಯಲಿ ಮಿಂದ
ಚಕ್ರವಾಕದ ಜೋಡಿಯಾಗಿ.

## ೨. ಬಿಂದು ಕಾಮನೆಗಳು (DOT COMS)

ವೈ.ಎಸ್. ಜ್ಯೋತಿ ಶಶಿಕುಮಾರ್

ಅಂತರಂಗದ ಅಸಲು ಮಜಲುಗಳಲ್ಲಿ
ಮಂಥನದ ನೂರು ಮರುಳು ಚಿತ್ತಾರಗಳು
ಇಂಗಿತಕೆ ದನಿಯಿರದ ಭಾವಗಳ ಝೇಂಕಾರ
ನೀರವಕೆ ಶರಣಾದ ಸಾಲಂಕೃತ ಪಯಣ.

ಬೇಸರ ಹರಡಿದಂತೆ ಬೆನ್ನ ತುಂಬ ಕೂದಲು
ನೀರಿಳಿಯುವ ತುದಿಗಳಲಿ ತೊಟ್ಟ ಕುಪ್ಪುಸ ಒದ್ದೆ
ಉಟ್ಟ ಸೀರೆಯ ಅಂಚು ನೆಲದಿ ಈಜಾಡುವಂತೆ.

ಕವಚ ಕತ್ತರಿಸಿಕೊಂಡ ಕರ್ಣನೋ
ಬೆರಳ ಕಡಿದಿಟ್ಟವನ ಮರ್ಮವೋ
ಹೊರಳಾಡಿ ಕನಸಿನಿಂದೆದ್ದ ಅಂಬಾಲಿಕೆಗೆ
ವಿಚಿತ್ರವೀರ್ಯನ ಬದಲು ಅಂಬೆಯೇ ಗಂಡಾದಂತೆ.

ಎಷ್ಟೋ ಶತಮಾನಗಳು ಉರುಳಿದರು
ಇಷ್ಟೇ ಇಳೆ ಬಿತ್ತನೆಗೆ ಹಚ್ಚಹಸರಿಗೆ
ಬೆಚ್ಚಗೆ ಮೈವೆರೆಮುಕೊಂಡ ಬಿರುಕಿನಲಿ
ಸೀಳು ನಾಲಗೆ ಹೆಡೆಸರ್ಪಗಳ ರಂಪಾಟ

ಹುಡುಕುವ ಹುಡುಗಿ ಭೋರ್ಗರೆವ ಧಾರೆಯಲಿ
ಕಳೆದುಕೊಂಡವಳು ಅಳುವ ಹನಿಹನಿಗಳು
ಅಂದು ಪಾಂಚಾಲಿ ಸಭೆಯಲ್ಲಿ ಕಂಡ ನಿಗೂಢ ಮೌನ
ವಿಶ್ವ ತೆರೆಗಳ ಮೇಲೆ ನಗುತ ನಿಂತವಳ ಕಂಗಳಲಿ.

## ೩. ನ-ಭಯ

ಹೇ ಅನಂತಿ... ಈ ಹೆಸರಿಗೇನಂತಿ
ಹೊತ್ತು ಕಳೆಯುವ ಹತ್ತು ಚೆಲ್ಲಾಟದ...
ಮುತ್ತುಗಳು ಇಟ್ಟುಕೊಂಡಿದ್ದರೇನು ಚೆನ್ನ?

ಬಾರೇ ಅನಂತಿ ಆಟಿಕೆಗಳು ಏಕೆ
ಆಟ ಮಲಗಿದು - ಮೇಲಾಟವೇನು
ಮಿಕ್ಕಿ ಹೋಗಿಹ ನಗೆಗಳು ಹುಚ್ಚು ಹಿಡಿದಂತೆ ಕಣೆ

ಏನು ಅನಂತಿ ಆಲೋಚನೆಗಳೇಕೆ
ಬಿಚ್ಚು ಹುಣ್ಣಿನ ನೋವು ಎದ್ದು ಕಾಣುತ್ತದೆ
ಒತ್ತಿಟ್ಟಿರುವ ಒಳಘಾಯಕ್ಕೆ ಮದ್ದಿಲ್ಲ ಹುಡುಗಿ

ನೋಡು ಅನಂತಿ ಇಂದಲ್ಲ ನಾಳೆಗೆ ವದಂತಿ
ಮಂಜು ಮುಸುಕಿ ಹೋರಾಟ ಮುಗಿದೀತು
ಇನ್ನೊಂದು ಜನ್ಮಕ್ಕೆ ಚಿಗುರಾಗಿ ಹೊರಬರುವೆ ತಾನೆ?

ತಾಳು ಅನಂತಿ... ಸಹಸ್ರದಾರಿಗಳಿವೆ
ಭೀತಿಯಿಂದಲೆ ಭವದಾಸೆ ತೀರುವುದಂತೆ
ನೆತ್ತಿ ಮೇಲಿನ ರಂಧ್ರಕ್ಕೆ ಕೇಶ ಕವಚರಕ್ಷೆ - ಸುರಕ್ಷೆ!

# ಈ ಸಂಚಿಕೆಯಲ್ಲಿ

೦೧. **ಪ್ರೊ. ಕಿ.ರಂ. ನಾಗರಾಜ**
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

೦೨. **ಡಾ.ಎಂ. ಉಷಾ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೩. **ಗೀತಾ ನಾಗಭೂಷಣ**
ಕಾವ್ಯಶ್ರೀ, ಪ್ಲಾಟ್ ನಂ. ೧೮
ಸ್ವಸ್ತಿಕ್ ಕಾಲೋನಿ, ಸೇಡಂ ರೋಡ್
ಬಿಲಗುಂದಿ ತೋಟ ರಿಂಗ್‌ರೋಡ್
ಗುಲಬರ್ಗಾ-೫೮೫೧೦೫

೦೪. **ಜಯಶ್ರೀ ಹೆಗಡೆ**
'ಕಲಾಶೈಲ' ಕವಲಕ್ಕಿ
ಅಂಚೆ : ಬಾಸ್ಕೇರಿ
ಹೊನ್ನಾವರ (ಉತ್ತರ ಕನ್ನಡ ಜಿಲ್ಲೆ)

೦೫. **ಎಂ.ಎಸ್. ವೇದಾ**
ಯು-೧೯ ಸಿ.ಎಚ್. ೧೯
ವಿಶ್ವವಿದ್ಯಾಲಯದ ವಸತಿ ಗೃಹಗಳು
ಪಂಪಾಪತಿ ರಸ್ತೆ, ಸರಸ್ವತಿಪುರಂ
ಮೈಸೂರು-೯

೦೬. **ಪ್ರೊ. ಬರಗೂರು ರಾಮಚಂದ್ರಪ್ಪ**
ನಂ. ೨೭೫, ೧೧ನೇ ಬಿ. ಕ್ರಾಸ್
೧೪ನೇ ಮೇನ್ ಜೆ.ಪಿ.ನಗರ
೨ನೇ ಹಂತ, ಬೆಂಗಳೂರು

೦೭. **ಡಾ.ಎಚ್.ಎಸ್. ಶ್ರೀಮತಿ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೮. **ಡಾ. ಸಬೀಹ ಭೂಮಿಗೌಡ**
ಕನ್ನಡ ವಿಭಾಗ, ಮಂಗಳ ಗಂಗೋತ್ರಿ
ಮಂಗಳೂರು ವಿಶ್ವವಿದ್ಯಾಲಯ
ಕೊಣಾಜೆ-೫೭೪೧೯೯

೦೯. **ಕೆ. ಕೇಶವ ಶರ್ಮ**
ಅಧ್ಯಾಪಕರು, ಕನ್ನಡ ವಿಭಾಗ
ಕುವೆಂಪು ವಿಶ್ವವಿದ್ಯಾಲಯ
ಶಂಕರ ಘಟ್ಟ
ಶಿವಮೊಗ್ಗ

೧೦. **ಪ್ರೊ.ಕೆ.ಜಿ. ನಾಗರಾಜಪ್ಪ**
೭೩, ಅಪೂರ್ವ, ೫ನೇ ಮುಖ್ಯರಸ್ತೆ
ಮಾರುತಿ ಹೆಚ್.ಬಿ.ಸಿ.ಎಸ್ ಲೇ ಔಟ್
ಹೊಸ ಗುರಪ್ಪನ ಪಾಳ್ಯ
ಬಿ ಟಿ ಎಂ ಮೊದಲನೆ ಹಂತ
ಬೆಂಗಳೂರು-೫೬೦೦೨೯

೧೧. **ಎಚ್.ಎಸ್. ರಾಘವೇಂದ್ರರಾವ್**
ಕನ್ನಡ ವಿಭಾಗ
ಜಯನಗರ ನ್ಯಾಷನಲ್ ಕಾಲೇಜು
ಜಯನಗರ, ಬೆಂಗಳೂರು

೧೨. **ಶ್ರೀನಿವಾಸ ಹಾವನೂರು**
ಸಂದರ್ಶಕ ಪ್ರಾಧ್ಯಾಪಕರು
ಕರ್ನಾಟಕ ಥಿಯಾಲಾಜಿಕಲ್ ಕಾಲೇಜು
ಭಾಷಲ್ ಮಿಷನ್ ಆವರಣ,
ಬಲ್‌ಮಠ, ಮಂಗಳೂರು-೧

೧೩. **ಜಿ.ಎಸ್. ಆಮೂರ**
ವಿಮರ್ಶಕರು
ಜಾನಕಿ, ನವೋದಯ ನಗರ
ಧಾರವಾಡ-೫೮೦೦೦೩

೧೪. **ಶೈಲಜಾ ಉಡಚಣ**
ಚೇತನ ಮ.ನಂ.೧-೮೯೧ : ೪
ಮೇಲ್ಸೇತುವೆ ಹತ್ತಿರ
ಜೇವರ್ಗಿ ಕಾಲೋನಿ
ಗುಲಬರ್ಗಾ-೫೮೫೧೦೨

೧೫. **ವೈ.ಎಸ್. ಜ್ಯೋತಿ ಶಶಿಕುಮಾರ್**
'ಶರಧಿ' ೧೧೫/೧೦, ೧೫ನೇ ಕ್ರಾಸ್
ವೈಯಾಲಿಕಾವಲ್
ಬೆಂಗಳೂರು-೩

# ಮಹಿಳಾ ಅಧ್ಯಯನ

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿಟ್ಟ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯದವಾಗಿವೆ.



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ